# ಪಂಚಗಣಾಧೀಶ್ವರರ ಪವಾಡಗಳು: ಸಾಂಸ್ಕೃತಿಕ ಸಂಕಥನ

(ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)



ಸಂಶೋಧಕರು

ರೇಖಾ ಎಸ್.ಟಿ.

ಮಾರ್ಗದರ್ಶಕರು

ಡಾ.ಮಂಜುನಾಥ ಬೇವಿನಕಟ್ಟಿ

ಪ್ರಾಧ್ಯಾಪಕರು

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ





ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೨

# ಪಂಚಗಣಾಧೀಶ್ವರರ ಪವಾಡಗಳು: ಸಾಂಸ್ಕೃತಿಕ ಸಂಕಥನ

(ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

ರೇಖಾ ಎಸ್.ಟಿ.

ಮಾರ್ಗದರ್ಶಕರು

ಡಾ. ಮಂಜುನಾಥ ಬೇವಿನಕಟ್ಟಿ

ಪ್ರಾಧ್ಯಾಪಕರು

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ





ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೨



# ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

## ದೃಢೀಕರಣ ಪತ್ರ

ಕುಮಾರಿ ರೇಖಾ ಎಸ್.ಟಿ. ಅವರು **ಪಂಚಗಣಾಧೀಶ್ವರರ ಪವಾಡಗಳು: ಸಾಂಸ್ಕೃತಿಕ ಸಂಕಥನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಈ ಮಹಾಪ್ರಬಂಧದ ಸಮಗ್ರ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇತರೆ ಉದ್ದೇಶಗಳಿಗಾಗಲಿ ಇವರು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

ಡಾ.ಮಂಜುನಾಥ ಬೇವಿನಕಟ್ಟಿ
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ: 20/11/19



# ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

## ಪ್ರಮಾಣ ಪತ್ರ

**ಪಂಚಗಣಾಧೀಶ್ವರರ ಪವಾಡಗಳು: ಸಾಂಸ್ಕೃತಿಕ ಸಂಕಥನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ.ಮಂಜುನಾಥ ಬೇವಿನಕಟ್ಟಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಸಂಶೋಧನ ಮಹಾಪ್ರಬಂಧವನ್ನು ಇಡಿಯಾಗಿ ಇಲ್ಲವೆ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ಸಂಶೋಧಕರು**

ರೇಖಾ. ಎಸ್. ಟಿ.

ರೇಖಾ ಎಸ್.ಟಿ.
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

ಸ್ಥಳ: ವಿದ್ಯಾರಣ್ಯ

ದಿನಾಂಕ: ೨೦-೧-೨೦೧೨

# ಪಂಚಗಣಾಧೀಶ್ವರರ ಪವಾಡಗಳು: ಸಾಂಸ್ಕೃತಿಕ ಸಂಕಥನ

## ಪರಿವಿಡಿ

# ಅಧ್ಯಾಯ - ಒಂದು

೧. ಅಧ್ಯಯನದ ಉದ್ದೇಶ

೨. ಅಧ್ಯಯನದ ವಿಧಾನಗಳು

೩. ಅಧ್ಯಯನದ ವ್ಯಾಪ್ತಿ

೪. ಅಧ್ಯಯನದ ಸ್ವರೂಪ

೫. ಆಕರ ಸಾಮಾಗ್ರಿಗಳು ಮತ್ತು ಇದುವರೆಗಿನ ಅಧ್ಯಯನಗಳು

# ಅಧ್ಯಾಯ-ಒಂದು

# ಅಧ್ಯಯನ ಉದ್ದೇಶ ವ್ಯಾಪ್ತಿ

**ಪ್ರವೇಶ**

ಭಾರತದ ಸಾಂಸ್ಕೃತಿಕ ಪರಂಪರೆಯ ಹಿನ್ನೆಲೆಯಲ್ಲಿ ಭಾರತೀಯ ಧರ್ಮಗಳನ್ನು ಅವಲೋಕಿಸಿದಾಗ ಇತಿಹಾಸದುದ್ದಕ್ಕೂ ತನ್ನದೇ ಆದ ವಿಶೇಷತೆಯನ್ನು ಪಡೆದಿದೆ. ಇಂತಹ ಧರ್ಮಗಳಲ್ಲಿ ವೀರಶೈವ ಧರ್ಮವು ಕರ್ನಾಟಕದ ಪ್ರಮುಖ ಧರ್ಮಗಳಲ್ಲೊಂದು. ೧೨ನೇ ಶತಮಾನದಲ್ಲಿ ಅದು ಪ್ರಮುಖ ಧರ್ಮವಾಗಿ ಬೆಳೆದಿತ್ತು. ಬಸವ, ಅಲ್ಲಮರ ನೇತೃತ್ವದಲ್ಲಿ ಈ ಧರ್ಮ ತುಂಬಿದ ತೊರೆಯಾಗಿ ಕಾಣಿಸಿಕೊಂಡಿದೆ. ಧಾರ್ಮಿಕವಾಗಿ, ಸಾಮಾಜಿಕವಾಗಿ ತಾವು ನಂಬಿದ ಧರ್ಮವನ್ನು ಪ್ರಚಾರಮಾಡಿ ಒಂದು ಹೊಸ ರೀತಿಯ ಸಾಹಿತ್ಯ ಸೃಷ್ಟಿಗೆ ಕಾರಣೀಭೂತರಾಗಿದ್ದಾರೆ. ಇದರ ಫಲವೇ ಕನ್ನಡದ ಜೀವರತ್ನವೆಂದು ಕರೆಯಿಸಿಕೊಂಡಿರುವ ವಚನಸಾಹಿತ್ಯ.

೧೨ನೇ ಶತಮಾನದ ಹೊತ್ತಿಗೆ ವೀರಶೈವ ಧರ್ಮವು ಒಂದು ಸ್ಪಷ್ಟ ರೂಪವನ್ನು ಕಂಡುಕೊಂಡದ್ದು ಹನ್ನೆರಡನೇಯ ಶತಮಾನದ ಬಸವಾದಿ ಶಿವಶರಣರು ನಡೆಸಿದ ಜನತಾ ಆಂದೋಲನದಲ್ಲಿ. ಈ ಆಂದೋಲನದಲ್ಲಿ ತಿಳಿದವರು, ತಿಳಿಯದವರು, ಉಳ್ಳವರು, ಇಲ್ಲದವರು ಒಟ್ಟುಗೂಡಿ ನಡೆಸಿದ ಸಂಘಟನೆ ಐತಿಹಾಸಿಕವಾದುದು. ಏಕೆಂದರೆ ಇದು ಕೆಲವೇ ವರ್ಷಗಳಲ್ಲಿ ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ, ಸಾಂಸ್ಕೃತಿಕ ರಂಗಗಳಲ್ಲಿ ಅತ್ಯದ್ಭುತವಾದ ಬದಲಾವಣೆಗಳನ್ನು ತಂದಿತು. ಇಷ್ಟು ಅಲ್ಪ ಕಾಲಾವಾಧಿಯಲ್ಲಿ ಕಾಣಿಸಿಕೊಂಡಂತಹ ಮಾರ್ಪಾಡು, ವಿಶ್ವದ ಬೇರೆ ಯಾವ ಆಂದೋಲನದಲ್ಲೂ ಆದಂತೆ ತೋರುವುದಿಲ್ಲ. ಕಲ್ಯಾಣಕ್ರಾಂತಿಯಿಂದಾಗಿ ಎಲ್ಲೆಲ್ಲೂ ಭಯದ ವಾತಾವರಣ ತಲೆದೋರಿದ್ದರಿಂದಾಗಿ ಬಸವಾದಿ ಶಿವಶರಣರ ಸಂಘಟನೆ ಮುರಿಯಿತು. ಶಿವಶರಣರು ಕಲ್ಯಾಣದಿಂದ ಚದುರಿಹೋದರು. ಜೇನುಗೂಡಿಗೆ ಬೆಂಕಿ ಬಿದ್ದಾಗ ಜೇನು ಹುಳುಗಳು ಚೆಲ್ಲಾಪಿಲ್ಲಿಯಾದಂತೆ ಸಂಘಟನೆ ಶಕ್ತಿಗುಂದಿದರೂ ಬಸವಾದಿ ಶಿವಶರಣರ ಜೀವನಾದರ್ಶ, ಬೋಧಿಸಿದ ತತ್ವಗಳು ಮರೆಯಾಗಲಿಲ್ಲ. ವೀರಶೈವ ಧರ್ಮವು ಮುಂದಿನ ಶತಮಾನದಲ್ಲಿ ಮಹಮ್ಮದೀಯರ ಆಕ್ರಮಣಕ್ಕೆ ಒಳಗಾಯಿತು. ಹಲವು ವರ್ಷಗಳ ತರುವಾಯ ೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯ ಉದಯಿಸಿದ ನಂತರ ವೀರಶೈವ ಧರ್ಮ ಪುನರುಜ್ಜೀವನಗೊಂಡಿತು. ಪ್ರೌಢದೇವರಾಯನ ಕಾಲದಲ್ಲಿ ಮತ್ತೆ ವೀರಶೈವ ಧರ್ಮದ ಕೃಷಿ ಹುಲುಸಾಗಿ ನಡೆಯಿತು.

೧೪ ಮತ್ತು ೧೫ನೇ ಶತಮಾನದ ಹೊತ್ತಿಗೆ ನೂರೊಂದು ವಿರಕ್ತರು ಉದಯಿಸಿದರು. ಅದೇ ವೇಳೆಗೆ ಕರ್ನಾಟಕದಲ್ಲಿ ಅನೇಕ ಆಧ್ಯಾತ್ಮಿಕ ಪಂಥಗಳು ಸ್ಥಾಪನೆಯಾದವು. ಅದರಲ್ಲಿ ಹಂಪಿ ಪ್ರದೇಶವು ಇಂಥಹ ಹಲವು ಪಂಥಗಳಿಗೆ ಆಶ್ರಯ ನೀಡಿತ್ತು. ಇದರಲ್ಲಿ ಆರೂಢರು, ನಾಥರು, ಪಾಶುಪತರು, ಕಾಳಾಮುಖರು, ಅವಧೂತರು, ಸೂಫಿಗಳಂತಹ ಪಂಥಗಳು ಅಸ್ತಿತ್ವ ಪಡೆದುಕೊಂಡವು. ಸಮಾಜದಲ್ಲಿ ಧಾರ್ಮಿಕ ಅಸ್ಥಿರತೆ ಉಂಟಾದಾಗ ಹಲವು ಧರ್ಮಗಳೊಳಗೆ ಸಾಂಸ್ಕೃತಿಕ ನಾಯಕರೂ ಉದಯಿಸಿಬಂದರು. ಸಾಮಾನ್ಯ ಸ್ತರದಿಂದ ಹಿಡಿದು ಒಂದೊಂದು ಧರ್ಮವನ್ನೇ ಪ್ರತಿನಿಧಿಸುವ ಗಣ್ಯಾತಿಗಣ್ಯ ಸಾಂಸ್ಕೃತಿಕ ನಾಯಕರ ಆಗಮನ ಭಾರತದಲ್ಲಾಯಿತು.

ಪಂಚಗಣಾಧೀಶ್ವರರು ನೂರೊಂದು ವಿರಕ್ತರ ನಂತರ ಬಂದಂತಹ ಪರಂಪರೆಯವರು. ೧೬ನೇ ಶತಮಾನದ ಸಾಹಿತ್ಯ ಕೃತಿಗಳಲ್ಲಿ, ಪುರಾಣಗಳ ಹಿನ್ನಲೆಯಲ್ಲಿ ಪಂಚಗಣಾಧೀಶ್ವರರು ಶಿವನ ಅಪ್ಪಣೆಯ ಮೇರೆಗೆ ಕೈಲಾಸದಿಂದ ಬಂದವರು ಎಂದಿದೆ. ಹಾಗೆಯೇ ಮುಂದುವರಿದು ಸಿದ್ಧಲಿಂಗಯತಿಗಳ ಹತ್ತಿರ ದೀಕ್ಷೆಯನ್ನು ಪಡೆದು ಇವರು ಅಲ್ಲಿಂದ ಹಂಪಿ ಪರಿಸರಕ್ಕೆ ಬಂದು, ಕುಪ್ಪಿನ ಕೆರೆಯಿಂದ ಇಬ್ಭಾಗವಾಗುವುದನ್ನು ಚರಿತ್ರೆಯಲ್ಲಿ ಕಾಣುತ್ತೇವೆ. ಪಂಚಗಣಾಧೀಶ್ವರರು ಮಧ್ಯಕರ್ನಾಟಕ ಭಾಗದಲ್ಲಿ ನೆಲೆನಿಂತವರು. ಪವಾಡಗಳನ್ನು ಮಾಡಿ ಜನತೆಯ ಹಿತಕ್ಕೋಸ್ಕರ ಶ್ರಮಿಸಿದವರು. ವ್ಯಷ್ಟಿ ಮತ್ತು ಸಮಷ್ಟಿಗಳೆರಡರ ಹಿತವನ್ನು ಸಮನ್ವಯಗೊಳಿಸುತ್ತಾರೆ. ಸರ್ವಸಮಾನತೆ, ಅಸ್ಪೃಶ್ಯತಾ ನಿವಾರಣೆ, ವರ್ಣಭೇದಗಳನ್ನು ಪ್ರತಿಭಟಿಸಿದರು. ಸಮಾಜದಿಂದ ಪಡೆದುದ್ದನ್ನು ಸಮಾಜಕ್ಕೆ ವಿನಿಯೋಗಿಸಲು ದಾಸೋಹ ವ್ಯವಸ್ಥೆಯನ್ನು ತಿಳಿಸಿದರು. ದುಡಿದು ಬದುಕಲು ಕಾಯಕ ತತ್ವವನ್ನು ರೂಪಿಸಿದರು. ಮೌಢ್ಯತೆ, ಅಂಧಕಾರ ನಿವಾರಿಸಲು ಮುಂದಾದರು. ಪವಾಡಗಳ ಮುಖೇನ ಜನರನ್ನು ಆಕರ್ಷಿಸಿದರು. ಈ ಮಹಾತ್ಮರ ಸುತ್ತ ಅದ್ಭುತ ಪವಾಡ ಕಥೆಗಳು ಹೆಣೆಯಲ್ಪಟ್ಟಿವೆ. ಪವಾಡಗಳನ್ನು ಮಾಡಿ ಸಮಾಜವನ್ನು ತಿದ್ದುವಂತಹ ಕೆಲಸ ಮಾಡಿದವರು ಪಂಚಗಣಾಧೀಶ್ವರರು.

ಪಂಚಗಣಾಧೀಶ್ವರರ ಬದುಕಿನ ಸುತ್ತ ಪವಾಡಗಳು ಹುಟ್ಟಿಕೊಂಡಿವೆ. ಮಹಾನುಭಾವರ ಬದುಕು ಜನಮನವನ್ನು ತಿದ್ದಲು, ಸರಿಪಡಿಸಲು, ಸದ್ಧರ್ಮದತ್ತ ನಡೆಸಲು ಮೀಸಲಾಗಿತ್ತು. ಐತಿಹ್ಯಗಳು ಬಾಯಿಂದ ಬಾಯಿಗೆ ದಾಟಿ ಬರುವಾಗ ರಂಗುರಂಗಾಗಿಯೋ ಇಲ್ಲವೇ ಬಣ್ಣಗಟ್ಟಿ ಹರಡುವ ಸಾಧ್ಯತೆಯೂ ಇದೆ. ಕವಿಗಳು ಜನಸಾಮಾನ್ಯ ಭಕ್ತಿ ಶ್ರದ್ಧೆಗಳನ್ನು ಆಕರ್ಷಿಸಲು ಪವಾಡಗಳು ಅತ್ಯಂತ ಸಮರ್ಥ ಸಾಧನಗಳೆಂದು ಬಗೆದು ನಾಯಕನ ಮಹಿಮೋನ್ನತಿಯನ್ನು ಸಾರುವಾಗ, ಅಘಟಿತ ಘಟನಾ ಸಾಮರ್ಥ್ಯವನ್ನು ತಿಳಿಸುವಾಗ ಪವಾಡ ಕಥೆಗಳನ್ನು ಬಳಸಿಕೊಂಡರು. ಹರಿಹರ ರಗಳೆಯ ಮೂಲಕ ಪವಾಡಗಳನ್ನು ಹೆಣೆದಿದ್ದಾನೆ. ಪುರಾಣಗಳಲ್ಲಿ, ರಾಮಾಯಣ, ಮಹಾಭಾರತದ ಕಥೆಗಳಲ್ಲಿ ಪವಾಡ ಕಥೆಗಳು ನಿರೂಪಿತವಾಗಿವೆ. ಮಲೆಮಾದೇಶ್ವರ, ಮಂಟೇಸ್ವಾಮಿ, ಮೈಲಾರಲಿಂಗ ಹಾಗೂ ಪಂಚಗಣಾಧೀಶ್ವರರಾದ ಕೊಟ್ಟೂರು ಬಸವೇಶ್ವರ, ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿ, ಗೋಣಿಬಸವೇಶ್ವರ ಇವರು ಪವಾಡಗಳನ್ನು ಮಾಡಿದ್ದಾರೆ. ಇವರ ಸುತ್ತ ಹಲವಾರು ಪವಾಡ ಕಥೆಗಳು ಹೆಣೆಯಲ್ಪಟ್ಟಿವೆ. ಗೀತೆ, ಲಾವಣಿ, ಕಥೆ, ಐತಿಹ್ಯಗಳು ಪಂಚಗಣಾಧೀಶ್ವರರ ಕುರಿತಾಗಿ ಪವಾಡಗಳನ್ನು ಕಟ್ಟಿಕೊಡುತ್ತವೆ.

## ೧. ಅಧ್ಯಯನದ ಉದ್ದೇಶ

ಶೈವದಿಂದ ವೀರಶೈವ ಧರ್ಮದ ಕಡೆಗೆ ಹೊರಳುತ್ತಿದ್ದ ಕಾಲಘಟ್ಟದ ಸಮಾಜಕ್ಕೆ ೧೧-೧೨ನೇ ಶತಮಾನವು ಒಂದು ರೀತಿಯಲ್ಲಿ ಪರಿವರ್ತನ ಕಾಲಾವಧಿ. ನಂತರದ ದಿನಗಳಲ್ಲಿ ಕಲ್ಯಾಣ ಕ್ರಾಂತಿಯ ಪೂರ್ವದಲ್ಲಿ ಹೆಚ್ಚು ಪ್ರಸಿದ್ಧಿಯಿಂದ ಮೆರೆಯುತ್ತಿದ್ದ ವೀರಶೈವ ಧರ್ಮ ಕ್ರಾಂತಿಯ ನಂತರ ಅನೇಕ ಏಳು-ಬೀಳುಗಳನ್ನು ಅನುಭವಿಸಬೇಕಾಯಿತು. ಕಲ್ಯಾಣ ಕ್ರಾಂತಿಯ ಪ್ರಭಾವದಿಂದ ಶರಣರೆಲ್ಲ ಚದುರಿ ಹೋಗಿದ್ದರಿಂದ ವೀರಶೈವ ಧರ್ಮಕ್ಕೆ ಬಲವಾದ ಪೆಟ್ಟುಬಿತ್ತು. ೨೦೦-೩೦೦ ವರ್ಷಗಳವರೆಗೂ ಗುಪ್ತಗಾಮಿನಿಯಾಗಿ ಹರಿಯಿತು. ಮತ್ತೆ ಹದಿನೈದನೇ ಶತಮಾನದಲ್ಲಿ ಕೆಲವು ನೂರೊಂದು ವಿರಕ್ತರ ಜೊತೆಗೆ ಅಂದಿನ ಪ್ರೌಢದೇವರಾಯನ ಪರಿಸರವು ವೀರಶೈವ ಧರ್ಮವನ್ನು ಬೆಳಗಿಸಿತು. ಹಂಪೆಯನ್ನು ಬಿಟ್ಟು ಹೋದ ವೀರಶೈವರನ್ನು ಎಡೆಯೂರಿನಲ್ಲಿ ಸಂಘಟಿಸಿದವರು ಎಡೆಯೂರು ಸಿದ್ಧಲಿಂಗೇಶ್ವರರು.

ವಚನ ಪರಂಪರೆಯನ್ನು ಅಧ್ಯಯನ ಮಾಡುವಾಗಲೂ ನಮಗೆ ಪ್ರಮುಖವಾಗಿ ಬಸವ, ಅಕ್ಕಮಹಾದೇವಿ, ಚನ್ನಬಸವಣ್ಣ, ನೀಲಾಂಬಿಕೆಯಂತವರು ಮುಖ್ಯವಾಗುತ್ತಾರೆಯೇ ಹೊರತು ಉಪೇಕ್ಷಿತ ದಲಿತ ಶರಣರು, ಕೆಳವರ್ಗದ ವಚನಕಾರ್ತಿಯರು ಮುಖ್ಯವಾಗಿ ಅಧ್ಯಯನಕ್ಕೆ ಒಳಪಟ್ಟಿಲ್ಲ. ಹಾಗೆಯೇ ರಾಜಾಶ್ರಯದಲ್ಲಿದ್ದ ನೂರೊಂದು ವಿರಕ್ತರು ದಾನದತ್ತಿಗಳನ್ನು ಪಡೆದ ತೋಂಟದ ಸಿದ್ಧಲಿಂಗಯತಿಗಳ ಪರಂಪರೆಯ ಕುರಿತು ತೋರಿದಷ್ಟು ಆಸಕ್ತಿಯನ್ನು ಮೌಖಿಕ ಪರಂಪರೆಗಳ ಬಗ್ಗೆ ವಹಿಸಿಲ್ಲ.

೧೨ನೇ ಶತಮಾನದ ಶರಣ ಚಳುವಳಿಯಲ್ಲಿಯೇ ವಿಭಿನ್ನ ಧಾರೆಗಳಿವೆ. ಅಲ್ಲಮ, ಬಸವ, ಚೆನ್ನಬಸವಣ್ಣ, ದಲಿತರು, ಸ್ತ್ರೀ ವಚನಕಾರ್ತಿಯರು ಹೀಗೆ ತಮಗೆ ತಾವೇ ವಿಶಿಷ್ಟ ಹಾದಿಗಳನ್ನು, ಆಲೋಚನಾ ಕ್ರಮಗಳನ್ನು ಚಳುವಳಿಯೊಳಗಿದ್ದುಕೊಂಡೇ ರೂಪಿಸಿಕೊಂಡವರಾಗಿದ್ದಾರೆ. ಈ ವೈವಿಧ್ಯತೆ ೧೨ನೇ ಶತಮಾನದ ನಂತರವೂ ಶಿಷ್ಟ, ಪರಿಶಿಷ್ಟ, ಲಿಖಿತ, ಮೌಖಿಕ ಧಾರೆಗಳಾಗಿ ಅಭಿವ್ಯಕ್ತಿಗೊಂಡಿದೆ. ಫ.ಗು.ಹಳಕಟ್ಟಿ, ಶಿ.ಶಿ.ಬಸವನಾಳ, ಮಧುರಚೆನ್ನ, ಉತ್ತಂಗಿ ಚೆನ್ನಪ್ಪನಂತಹ ವಿದ್ವಾಂಸರು, ಗದುಗಿನ ತೋಂಟದಾರ್ಯಮಠ, ಚಿತ್ರದುರ್ಗದ ಮುರುಘಾ ರಾಜೇಂದ್ರಮಠ, ಸುತ್ತೂರು ಶಿವರಾತ್ರೀಶ್ವರ ಮಠಗಳು ಆಸಕ್ತಿವಹಿಸಿ ಸಂಗ್ರಹ, ವ್ಯಾಖ್ಯಾನ, ಸಂಪಾದನೆಗಳನ್ನು ಮಾಡಿದರು. ಆದರೆ ಮೌಖಿಕ ಧಾರೆಗಳಾದ ಮಂಟೇಸ್ವಾಮಿ ಪರಂಪರೆ, ಕೊಡೇಕಲ್ ಪರಂಪರೆ, ಮಲೇಮಾದೇಶ್ವರ ಪರಂಪರೆ ಇತ್ಯಾದಿಗಳ ಕುರಿತು ಗಂಭೀರವಾದ ಅಧ್ಯಯನಗಳು ಈ ಮೊದಲು ನಡೆದಿರಲಿಲ್ಲ.

ಇತ್ತೀಚಿಗೆ ವಿವಿಧ ವಿದ್ವಾಂಸರು, ವಿಶ್ವವಿದ್ಯಾಲಯಗಳು ಇಂಥಹ ಮೌಖಿಕ ಪರಂಪರೆಗಳ ಅಧ್ಯಯನ, ಸಂಗ್ರಹ, ದಾಖಲೀಕರಣಗಳಲ್ಲಿ ಆಸಕ್ತಿವಹಿಸುತ್ತಿದ್ದಾರೆ. ಜಿ.ಶಂ.ಪ. ಅವರಂಥ ಹಿರಿಯ ವಿದ್ವಾಂಸರಿಂದ ಮೌಖಿಕ ಪರಂಪರೆಗಳ ಅಧ್ಯಯನ ಗಂಭೀರವಾಗಿ ಆರಂಭಗೊಂಡರೂ ನಂತರದ ದಿನಗಳಲ್ಲಿ ಈ ಬಗ್ಗೆ ಅಧ್ಯಯನ ನಡೆದಿದ್ದು ಕಡಿಮೆ. ೮೦ ರ ದಶಕದಲ್ಲಿ ಬಸವಲಿಂಗ ಸೊಪ್ಪಿನಮಠ, ಪಿ.ಕೆ.ರಾಜಶೇಖರ್, ಬಿ.ಎಸ್.ಸ್ವಾಮಿ, ಡಿ.ಆರ್.ನಾಗರಾಜ್, ಕೇಶವನ್ ಪ್ರಸಾದ್, ಹಿ.ಚಿ.ಬೋರಲಿಂಗಯ್ಯ, ವೆಂಕಟೇಶ

ಇಂದ್ವಾಡಿ, ರಹಮತ್ ತರೀಕೆರೆ, ಮಹದೇವ ಶಂಕನಪುರ, ಡಾ.ಎಂ.ಎಂ.ಪಡಶೆಟ್ಟಿ, ಶಿವಾನಂದ ಎಸ್.ವಿರಕ್ತಮಠ ಮುಂತಾದ ವಿದ್ವಾಂಸರು ಕಾವ್ಯ ಸಂಪಾದನೆ, ತಾತ್ವಿಕ ಚಿಂತನೆಗಳ ಮೂಲಕ ಮಂಟೇಸ್ವಾಮಿ, ಮಲೆಮಾದೇಶ್ವರ, ಕೊಡೇಕಲ್ ಪರಂಪರೆ, ಕರ್ನಾಟಕದಲ್ಲಿನ ಸೂಫಿಗಳ ಬಗ್ಗೆ ಅಧ್ಯಯನ ಮಾಡಿ ಜನಸಮುದಾಯಗಳು ನಂಬಿರುವ ಮೌಖಿಕ ಪರಂಪರೆಗಳ ತಿಳುವಳಿಕೆಯನ್ನು ವಿಸ್ತರಿಸಿದ್ದಾರೆ.

ಈ ಎಲ್ಲ ಅಧ್ಯಯನಗಳು ಕರ್ನಾಟಕದ ಉತ್ತರ ಮತ್ತು ದಕ್ಷಿಣ ಭಾಗಗಳಿಗೆ ಸಂಬಂಧಿಸಿದ್ದಾಗಿವೆ. ಆದರೆ ಮಧ್ಯಕರ್ನಾಟಕ ಭಾಗದ ಕುರಿತು ಇದುವರೆಗೂ ಗಂಭೀರ ಅಧ್ಯಯನಗಳು ತುಂಬ ಕಡಿಮೆ. ಮಧ್ಯಕರ್ನಾಟಕ ಭಾಗದ ಜನಸಮುದಾಯಗಳ ಆರಾಧ್ಯ ದೈವಗಳ ಅಧ್ಯಯನವು ನಡೆದಿಲ್ಲ. ಈ ಪ್ರಬಂಧದ ಮೂಲಕ ಮಧ್ಯಕರ್ನಾಟಕದ ಸಾಂಸ್ಕೃತಿಕ ಪರವಾದ ಧಾರ್ಮಿಕ ಚರಿತ್ರೆಯನ್ನು ತುಂಬಿಕೊಡಲು ಪ್ರಯತ್ನಿಸಲಾಗಿದೆ.

ಪಂಚಗಣಾಧೀಶ್ವರರ ಪವಾಡಗಳನ್ನು ಕುರಿತಂತೆ ಕೆಲವು ಲೇಖನಗಳು, ಚಿಕ್ಕ ಪುಸ್ತಕಗಳು ಬಿಟ್ಟರೆ ಗಂಭೀರವಾದ ಅಧ್ಯಯನ ನಡೆದಿಲ್ಲ. ಇವರಿಗೆ ಸಂಬಂಧಿಸಿದಂತೆ ಲಿಖಿತ ಮಾಹಿತಿ, ಆಧಾರಗಳು ದೊರೆಯದಿರುವುದು ಕಾರಣವಾಗಿದೆ. "ಪಂಚಗಣಾಧೀಶ್ವರರ ಪವಾಡಗಳು: ಸಾಂಸ್ಕೃತಿಕ ಸಂಕಥನ" ಎನ್ನುವ ಈ ಪ್ರೌಢ ಪ್ರಬಂಧವು ಸಿಗುವ ಅಲ್ಪಸ್ವಲ್ಪ ಲಿಖಿತ ಮಾಹಿತಿಗಳ ಜೊತೆಗೆ ಕ್ಷೇತ್ರಕಾರ್ಯವನ್ನು ಆಧರಿಸಿ ಮೊಟ್ಟಮೊದಲ ಬಾರಿಗೆ ಪಂಚಗಣಾಧೀಶ್ವರರ ಪವಾಡಗಳನ್ನು ಅಧ್ಯಯನಕ್ಕೆ ಒಳಪಡಿಸಬೇಕೆನ್ನುವ ಉದ್ದೇಶದಿಂದ ರಚಿತವಾಗಿದೆ.

೧೨ನೇ ಶತಮಾನದ ಕೃತಿಗಳಲ್ಲಿ ಪವಾಡ ಕಥೆಗಳನ್ನು ಅಳವಡಿಸಿಕೊಂಡು ವರ್ಣಿಸುತ್ತ ಬಂದಿರುವುದನ್ನು ಕಾಣುತ್ತೇವೆ. ವೀರಶೈವ ಕವಿಗಳಲ್ಲಿ 'ಹರಿಹರ'ನೇ ಮೊದಲಿಗ. ಹರಿಹರನು ತನ್ನ ಗ್ರಂಥ ರಚನೆಯಲ್ಲಿ ಶಿವಶರಣರ ಪುಣ್ಯ ಪುರುಷರ ಚರಿತ್ರೆಯನ್ನು ತಿಳಿಸುವುದಕ್ಕಾಗಿ ಪವಾಡ ಕಥೆಗಳನ್ನು ವರ್ಣಿಸಿರುವನು. ಹಾಗೆಯೇ ಪಂಚಗಣಾಧೀಶ್ವರರ ಕುರಿತು ಪುರಾಣ, ಧಾರ್ಮಿಕ ಕಥೆಗಳಲ್ಲಿ ವರ್ಣನೆಗೊಂಡಿವೆ.

ವೈಯಕ್ತಿಕ ಜೀವನದಲ್ಲಿ ಸಂಭವಿಸಿರಬಹುದಾದ ಹಲವಾರು ನೈಜ ಸಂಗತಿಗಳ ಸುತ್ತ ಪುರಾಣಕಾರರು ಅನೇಕ ಕಾಲ್ಪನಿಕ ಕಥೆಗಳನ್ನು, ಪವಾಡ ಕಥೆಗಳನ್ನು ಹೆಣೆದು ಅವುಗಳನ್ನು ವೈಭವೀಕರಿಸಿದ್ದಾರೆ. ಇಂಥ ವರ್ಣನೆಗಳಿಂದ ಅವರೆಲ್ಲ ನಮಗೆ ಅತಿಮಾನುಷ ವ್ಯಕ್ತಿಗಳಾಗಿ, ಅವತಾರ ಪುರುಷರಾಗಿ ಕಾಣುತ್ತಾರೆ. ಪಂಚಗಣಾಧೀಶ್ವರರು ಸಹಿತ ಇದಕ್ಕೆ ಹೊರತಾಗಿಲ್ಲ. ಪಂಚಗಣಾಧೀಶ್ವರರು ಪವಾಡಗಳನ್ನು ಮಾಡುವ ಹಿನ್ನೆಲೆ ಅಥವಾ ಅನಿವಾರ್ಯತೆ ಕುರಿತು ಅಧ್ಯಯನಕ್ಕೆ ಒಳಪಡಿಸುವುದು ಉದ್ದೇಶಗಳಲ್ಲಿ ಒಂದಾಗಿದೆ.

ಪಂಚಗಣಾಧೀಶ್ವರರು ಯಾರು? ಪಂಚಗಣಾಧೀಶ್ವರರಾಗಿ ರೂಪುಗೊಳ್ಳಲು ಇರುವ ಪ್ರೇರಣೆ ಮತ್ತು ಪ್ರಭಾವಗಳೇನು? ಎಂಬುದನ್ನು ಅಧ್ಯಯನ ಮಾಡುವುದು ಪ್ರಬಂಧದ ಮಹತ್ವ ಉದ್ದೇಶವಾಗಿದೆ. ಪಂಚಗಣಾಧೀಶ್ವರರ ಹುಟ್ಟಿನ ಗೊಂದಲದ ಬಗೆಗಿರುವ ಹಿನ್ನೆಲೆಯನ್ನು ಅಧ್ಯಯನ ಮಾಡುವುದು ಅಗತ್ಯವಾಗಿದೆ. ಪಂಚಗಣಾಧೀಶ್ವರರ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪಗಳ ಕುರಿತು ಅಧ್ಯಯನ ಮಾಡುವ ಅಗತ್ಯತೆ ಇದೆ.

೧೨ನೇ ಶತಮಾನದ ಶರಣ ಚಳವಳಿಯ ಆಶಯಗಳನ್ನು ಬದಲಾದ ಸಂದರ್ಭಕ್ಕನುಗುಣವಾಗಿ, ಶಿಷ್ಟ ಹಾಗೂ ಮೌಖಿಕ ಪರಂಪರೆಗಳ ನಾಯಕರು, ಜನರ ಜೀವನಕ್ಕೆ ಅಳವಡಿಸಲು ಪ್ರಯತ್ನಿಸಿದರು. ಮಧ್ಯಕರ್ನಾಟಕದಲ್ಲಿ ಪಂಚಗಣಾಧೀಶ್ವರರು ಅದೇ ರೀತಿ ಮಾಡಲು ಪ್ರಯತ್ನಿಸಿದ್ದಾರೆ. ಆದರೆ ಇದುವರೆಗೂ ಈ ಪಂಥಗಳ ಕುರಿತು ಅಧ್ಯಯನ ನಡೆದಿಲ್ಲ. ಈಗಿರುವ ಅಧ್ಯಯನಗಳೆಲ್ಲ ಪಂಚಗಣಾಧೀಶ್ವರರಲ್ಲಿನ ಒಬ್ಬ ಸಂತನನ್ನು ಕುರಿತು ಇಲ್ಲವೇ ಕೆಲವು ಆಚರಣೆಗಳನ್ನು ಕುರಿತು ಮಾತ್ರ ನಡೆದಿವೆ. ಪ್ರಸ್ತುತ ಪ್ರಬಂಧವು ತಿಪ್ಪೇಸ್ವಾಮಿ (ನಾಯಕನಹಟ್ಟಿ), ಗುರುಬಸವೇಶ್ವರ (ಕೊಟ್ಟೂರು), ಮದ್ದಾನಸ್ವಾಮಿ ಮತ್ತು ಆತನ ಮಗ ಗೋಣಿಬಸವ (ಕೂಲಹಳ್ಳಿ), ಕೋಲಶಾಂತಯ್ಯ (ಅರಸೀಕೇರಿ) ಹಾಗೂ ಕೆಂಪಯ್ಯ (ಹರಪನಹಳ್ಳಿ) ಈ ಐದು ಜನ ಸಂತರನ್ನು ಕುರಿತು ಮತ್ತು ಅವರು ಮಾಡಿರುವ ಇಲ್ಲವೇ ಅವರಿಗೆ ಆರೋಪಿತವಾಗಿರುವ ಪವಾಡಗಳನ್ನು ವಿಶ್ಲೇಷಣೆ ಮಾಡುವ ಉದ್ದೇಶದಿಂದ ಪ್ರಸ್ತುತ ಅಧ್ಯಯನ ಕೈಗೊಳ್ಳಲಾಗಿದೆ.

ಪಂಚಗಣಾಧೀಶ್ವರರು ಮಧ್ಯಕರ್ನಾಟಕ ಭಾಗದಲ್ಲಿ ಎಲ್ಲ ಸಮುದಾಯಗಳಿಂದ ಆರಾಧನೆಗೊಳ್ಳುವ ಸಂತರಾಗಿದ್ದಾರೆ. ಮಧ್ಯಕಾಲೀನ ಸಂದರ್ಭದಲ್ಲಿ ಈ ಸಮುದಾಯಗಳು ಬೇಟೆ ಸಂಸ್ಕೃತಿಯಿಂದ ಪಶುಪಾಲನ ಸಂಸ್ಕೃತಿಗೆ, ಪಶುಪಾಲನಾ ಸಂಸ್ಕೃತಿಯಿಂದ ಕೃಷಿ ಸಂಸ್ಕೃತಿಗೆ ಪರಿವರ್ತನೆ ಹೊಂದಿದವು. ಯುದ್ಧ ಕಲಹಗಳಿಂದ ಬೇಸತ್ತು ಹೋಗಿದ್ದ ಜನಕ್ಕೆ ನೆಮ್ಮದಿಯ ಬದುಕು ಬೇಕಾಗಿತ್ತು. ಆಗ ಜನಸಮುದಾಯಗಳು ಧಾರ್ಮಿಕ ನಂಬಿಕೆಯ ಕಡೆ ತಿರುಗಿದವು. ಈ ಆಗ ಸಂತರನ್ನು ಗೌರವಿಸಿ ಆರಾಧಿಸಲು ಆರಂಭಿಸಿದರು.

ಪಂಚಗಣಾಧೀಶ್ವರರು ಪವಾಡಗಳ ಮುಖೇನ ಜನತೆಯಲ್ಲಿ ನೆಲೆನಿಂತ ದೈವಗಳಾಗಿದ್ದಾರೆ. ಪವಾಡಗಳನ್ನು ವರ್ಗೀಕರಿಸಿ ವ್ಯಕ್ತಿ, ಪ್ರಾಣಿ, ಘಟನೆಯ ನೆಲೆಗಳಲ್ಲಿ ಕಟ್ಟಿಕೊಡುವ ಉದ್ದೇಶದಿಂದ ರೂಪಿಸಲಾಗಿದೆ. ಕ್ಷೇತ್ರಕಾರ್ಯದ ಮೂಲಕ ಪಂಚಗಣಾಧೀಶ್ವರರ ಬಿಡಿಪದಗಳನ್ನು, ಕೋಲಾಟ ಪದಗಳನ್ನು, ಕಥೆಗಳನ್ನು, ಐತಿಹ್ಯಗಳನ್ನು ಸಂಗ್ರಹಿಸಲಾಗಿದೆ. ಅಲ್ಲದೆ ಈಗಾಗಲೇ ಸಂಗ್ರಹವಾಗಿರುವ ಲಿಖಿತ ರೂಪದಲ್ಲಿರುವ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಪಂಚಗಣಾಧೀಶ್ವರರ ಆಚರಣೆಗಳು, ಪವಾಡಗಳ ಹಿಂದಿರುವ ತಾತ್ವಿಕತೆಯನ್ನು ತಿಳಿಯಲು ಲಿಖಿತ ಹಾಗೂ ಮೌಖಿಕ ಸಾಹಿತ್ಯಗಳ ಮೂಲಕ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**೨. ಅಧ್ಯಯನದ ವ್ಯಾಪ್ತಿ**

ಅಧ್ಯಯನದ ವ್ಯಾಪ್ತಿ ಎಂದರೆ "ಅಧ್ಯಯನದ ಚೌಕಟ್ಟು" ಎಂದರ್ಥ. ಸೈದ್ಧಾಂತಿಕ ಅಧ್ಯಯನಕ್ಕೆ ನಿರ್ದಿಷ್ಟವಾದ ಚೌಕಟ್ಟು ಬಹಳ ಮುಖ್ಯ. ನಿರ್ದಿಷ್ಟವಾದ ಚೌಕಟ್ಟು ಇದ್ದಾಗ ಮಾತ್ರ ನಿಶ್ಚಿತವಾದ ಫಲಿತಗಳನ್ನು ಶೋಧಿಸಲು ಸಾಧ್ಯ. ಅಧ್ಯಯನದ ವ್ಯಾಪ್ತಿಯು ೧೬ ಮತ್ತು ೧೭ನೇ ಶತಮಾನದಲ್ಲಿ ಬದುಕಿದಂತಹ ಪಂಚಗಣಾಧೀಶ್ವರರನ್ನು ಕುರಿತಾದ ಅಧ್ಯಯನವಾಗಿದೆ. ಮಧ್ಯಕರ್ನಾಟಕಕ್ಕೆ ಸಂಬಂಧಿಸಿದಂತೆ ಕರ್ನಾಟಕದ ಬಳ್ಳಾರಿ, ದಾವಣಗೆರೆ, ಚಿತ್ರದುರ್ಗ, ಕೊಪ್ಪಳ, ಹಾವೇರಿ, ಗದಗ ಜಿಲ್ಲೆಗಳು, ಅನಂತಪುರ ಜಿಲ್ಲೆಯ ರಾಯದುರ್ಗ ತಾಲ್ಲೂಕು (ಆಂಧ್ರಪ್ರದೇಶ) ಹಾಗೂ ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕುಗಳನ್ನು ಇಲ್ಲಿ ಸೇರಿಸಿಕೊಳ್ಳಲಾಗಿದೆ. ಎಲ್ಲ ಸ್ಥಳಗಳು ಕರ್ನಾಟಕದ ಮಧ್ಯಭಾಗದಲ್ಲಿಯೇ ಬರುವುದರಿಂದ ಮಧ್ಯ ಕರ್ನಾಟಕ ಭಾಗವನ್ನು ವ್ಯಾಪ್ತಿಗೆ ತೆಗೆದುಕೊಳ್ಳಲಾಗಿದೆ.

ಗುರುಬಸವ, ಕೊಟ್ಟೂರು, (ಬಳ್ಳಾರಿ ಜಿಲ್ಲೆ), ತಿಪ್ಪೇರುದ್ರಸ್ವಾಮಿ, ನಾಯಕನಹಟ್ಟಿ, (ಚಿತ್ರದುರ್ಗ ಜಿಲ್ಲೆ), ಮದ್ದಾನಸ್ವಾಮಿ, ಕೂಲಹಳ್ಳಿ, (ದಾವಣಗೆರೆ ಜಿಲ್ಲೆ) ಕೆಂಪಯ್ಯ ಹರಪನಹಳ್ಳಿ (ದಾವಣಗೆರೆ ಜಿಲ್ಲೆ) (ರಾಯದುರ್ಗ) ಗೋಣಿಬಸವೇಶ್ವರ ಕೂಲಹಳ್ಳಿ (ದಾವಣಗೆರೆ ಜಿಲ್ಲೆ) ಅಳವಂಡಿ (ಕೊಪ್ಪಳ), ಗುಮ್ಮಗೋಳ (ಗದಗ) ಹೀಗೆ ಇವರೆಲ್ಲ ಮಧ್ಯ ಕರ್ನಾಟಕದ ಭಾಗದಲ್ಲಿ ಕಂಡುಬರುತ್ತಾರೆ. ಪಂಚಗಣಾಧೀಶ್ವರರು ಮಾಡಿದಂತಹ ಪವಾಡಗಳನ್ನು ಕುರಿತು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಈ ಪಂಥದಲ್ಲಿ ಬರುವಂತಹ ಐವರು ಸಂತರಲ್ಲಿ ಒಬ್ಬನಾದ ಕೂಲಹಳ್ಳಿ ಮದ್ದಾನಸ್ವಾಮಿಯ ಮಗ ಗೋಣಿಬಸವ ಇವರೊಂದಿಗೆ ಹೆಚ್ಚು ಪ್ರಭಾವ ಬೀರಿರುವುದರಿಂದ ಈತನನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ.

೧೬-೧೭ನೇ ಶತಮಾನದ ಪಂಚಗಣಾಧೀಶ್ವರರ ಜೀವನ ಮತ್ತು ಪವಾಡಗಳು ಅಧ್ಯಯನದ ಮುಖ್ಯ ಕೇಂದ್ರವಾದರೂ ಅಧ್ಯಯನದ ವ್ಯಾಪ್ತಿ ಕಾಲವನ್ನು ಮೀರಿ ಚಾಚಿಕೊಂಡಿದೆ. ಸಂಸ್ಕೃತಿಯನ್ನು ಕುರಿತು ಅಧ್ಯಯನ ಮಾಡುವಾಗ ಒಂದು ನಿರ್ದಿಷ್ಟ ಕಾಲಘಟ್ಟಕ್ಕಷ್ಟೆ ಸೀಮಿತವಾಗುವುದು ಸಮಂಜಸವೆನಿಸುವುದಿಲ್ಲ. ಆದ್ದರಿಂದ ಪಂಚಗಣಾಧೀಶ್ವರರ ಪವಾಡಗಳ ಅಧ್ಯಯನವೂ ಆ ಹೊತ್ತಿನ ಸಮಕಾಲೀನ ಪರಂಪರೆಯ ಜೊತೆಗೆ ಆಧುನಿಕ ಸಮಾಜವು ನಡೆಸುತ್ತಿರುವ ಅನುಸಂಧಾನವನ್ನು ಕಟ್ಟಿಕೊಡಲಾಗಿದೆ.

**೩. ಅಧ್ಯಯನದ ವಿಧಾನಗಳು**

ಪಂಚಗಣಾಧೀಶ್ವರರ ಕುರಿತು ಹಲವಾರು ಅಧ್ಯಯನಗಳು ನಡೆದಿವೆ. ಆದರೆ ಪಂಚಗಣಾಧೀಶ್ವರರ ಪವಾಡಗಳನ್ನು ಕುರಿತು ಪ್ರತ್ಯೇಕ ಅಧ್ಯಯನ ನಡೆದಿಲ್ಲ. ಹೀಗಾಗಿ ಪವಾಡಗಳ ಮೂಲಕ ಪಂಚಗಣಾಧೀಶ್ವರರ ವ್ಯಕ್ತಿತ್ವವನ್ನು ಚಾರಿತ್ರಿಕವಾಗಿ ನಿರೂಪಿಸಲಾಗಿದೆ ಹಾಗೂ ಪವಾಡಗಳನ್ನು ವಿಮರ್ಶಾತ್ಮಕವಾಗಿ ನೋಡಲಾಗಿದೆ.

ಈ ಅಧ್ಯಯನವು ಸಾಂಸ್ಕೃತಿಕ ಅಧ್ಯಯನವಾಗಿದೆ. ಇದರಲ್ಲಿ ಪುರಾಣಗಳಿವೆ, ಚರಿತ್ರೆಯನ್ನು ಕುರಿತಂತೆ ಲಾವಣಿ, ನಂಬಿಕೆ, ಐತಿಹ್ಯಗಳು, ಕಥೆಗಳು, ಗೀತೆಗಳಲ್ಲಿ ಕಂಡುಬರುವ ಚಾರಿತ್ರಿಕ ಸಂಗತಿಗಳನ್ನು ಕಟ್ಟಿಕೊಡಲಾಗಿದೆ. ಇವುಗಳಲ್ಲಿ ಬರುವಂತಹ ಪವಾಡಗಳ ಅಂಶಗಳನ್ನು ಗುರುತಿಸಿ ವರ್ತಮಾನದ ಆಲೋಚನೆಯ ವಿನ್ಯಾಸಗಳ ಮೂಲಕ ಶೋಧಿಸುವ, ಅರ್ಥೈಸುವ ಸಾಂಸ್ಕೃತಿಕ ಅಧ್ಯಯನ ವಿಧಾನವಾಗಿದೆ.

ಪಂಚಗಣಾಧೀಶ್ವರರು ನೆಲೆ ನಿಂತ ಕ್ಷೇತ್ರಗಳಾದ ಕೊಟ್ಟೂರು, ನಾಯಕನಹಟ್ಟಿ, ಕೊಂಡ್ಲಹಳ್ಳಿ, ಅರಸೀಕೆರೆ, ಕೂಲಹಳ್ಳಿ, ಅಳವಂಡಿ, ಗುಮ್ಮಗೋಳಗಳಲ್ಲಿ ಕ್ಷೇತ್ರಕಾರ್ಯ ಮಾಡಿ ವಕ್ತೃಗಳ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಅಧ್ಯಯನಕ್ಕೆ ಸಂಬಂಧಿಸಿದ ಲಿಖಿತ ಮಾಹಿತಿಗಳ ಜೊತೆಗೆ ಲೇಖನಗಳ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಪಂಚಗಣಾಧೀಶ್ವರರ ಪವಾಡಗಳು: ಸಾಂಸ್ಕೃತಿಕ ಸಂಕಥನ ಎಂಬ ಅಧ್ಯಯನಕ್ಕೆ ಒಂದು ಸ್ಥಾಪಿತ ಸಿದ್ಧಾಂತವನ್ನು ಮತ್ತು ಭಿನ್ನ ನೆಲೆಯಲ್ಲಿ ನಿರೂಪಿಸುವ, ವಿಸ್ತರಿಸುವ ಪ್ರಯತ್ನವನ್ನು ಮಾಡಲಾಗಿದೆ.

**೪. ಅಧ್ಯಯನದ ಸ್ವರೂಪ**

ಕ್ರಿ.ಶ.೧೬-೧೭ನೇ ಶತಮಾನದಲ್ಲಿ ಮಧ್ಯಕರ್ನಾಟಕ ಭಾಗದಲ್ಲಿ ನೆಲೆನಿಂತ ದೈವಗಳಾದ ಪಂಚಗಣಾಧೀಶ್ವರರನ್ನು ಮತ್ತು ಅವರ ಪವಾಡಗಳನ್ನು ಕುರಿತು ಚಿತ್ರಿಸುವುದೇ ಮಹಾಪ್ರಬಂಧದ ಆಶಯ.

ಪಂಚಗಣಾಧೀಶ್ವರರ ಪವಾಡಗಳು: ಸಾಂಸ್ಕೃತಿಕ ಸಂಕಥನ ಪ್ರಬಂಧವನ್ನು ಅಧ್ಯಯನದ ದೃಷ್ಟಿಯಿಂದ ಒಟ್ಟು ಎಂಟು ಅಧ್ಯಾಯಗಳಲ್ಲಿ ವಿಸ್ತರಿಸಿಕೊಳ್ಳಲಾಗಿದೆ. ಎಂಟು ಅಧ್ಯಾಯಗಳು ಈ ಕೆಳಗಿನ ವಿಷಯಗಳನ್ನು ಒಳಗೊಂಡಿರುತ್ತವೆ.

ಒಂದನೆಯ ಅಧ್ಯಾಯವು ಮಹಾಪ್ರಬಂಧದ ತಾತ್ವಿಕ ಅಂಶಗಳನ್ನು ವಿವರಿಸುತ್ತದೆ. ಅಧ್ಯಯನದ ಉದ್ದೇಶ, ವಿಧಾನ, ವ್ಯಾಪ್ತಿ ಹಾಗೂ ಆಕರ ಸಾಮಾಗ್ರಿಗಳನ್ನು ಕುರಿತಾಗಿದೆ.

ಎರಡನೆಯ ಅಧ್ಯಾಯವು ಪಂಚಗಣಾಧೀಶ್ವರರ ಹುಟ್ಟು, ಅವರು ಯಾರು, ಮೂಲ, ನೆಲೆನಿಂತ ಕ್ಷೇತ್ರ ಮತ್ತು ಶೈವನಾಥಸಿದ್ಧರು, ಪಂಚಗಣಾಧೀಶ್ವರರ ಮೇಲೆ ಬೀರಿದ ಪ್ರೇರಣೆ ಮತ್ತು ಪ್ರಭಾವಗಳನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ.

ಮೂರನೆಯ ಅಧ್ಯಾಯವು ಪಂಚಗಣಾಧೀಶ್ವರರು ರೂಪುಗೊಂಡ ಬಗೆ, ನೆಲೆನಿಂತ ನಂತರದ ಬದುಕು, ಸಲ್ಲಿಸಿದ ಸೇವೆ ಮತ್ತು ಸಾಮಾಜಿಕ ಬದುಕು ಹಾಗೂ ಅವರ ಕೆಳವರ್ಗದವರೊಂದಿಗಿನ ಸಂಬಂಧ, ಪ್ರಭುತ್ವದೊಂದಿಗಿನ ಸಂಬಂಧ ಒಟ್ಟಾರೆ ಅವರು ಲೋಕಕಲ್ಯಾಣಕ್ಕಾಗಿ ಶ್ರಮಿಸಿ, ಸಮಾಜವನ್ನು ಹಸನುಗೊಳಿಸುವ ನಿಟ್ಟಿನಲ್ಲಿ ಮಾಡಿದಂತಹ ಕೆಲಸಕಾರ್ಯಗಳನ್ನು ಕುರಿತು ವಿವರಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ಪಂಚಗಣಾಧೀಶ್ವರರ ಪವಾಡಗಳು, ಪವಾಡಗಳ ಅರ್ಥ, ಸ್ವರೂಪ, ಹುಟ್ಟು ಮತ್ತು ಬೆಳವಣಿಗೆ, ಪವಾಡಗಳ ವರ್ಗೀಕರಣ ಮತ್ತು ವಿಶ್ಲೇಷಣೆ, ವ್ಯಕ್ತಿ ಸಂಬಂಧಿ ಪವಾಡ, ಸ್ಥಳಸಂಬಂಧಿ ಪವಾಡ, ಪ್ರಾಣಿ ಸಂಬಂಧಿ ಪವಾಡ ಹಾಗೂ ಘಟನಾ ಸಂಬಂಧಿ ಪವಾಡ, ಪವಾಡಗಳ ಆಶಯ, ಪವಾಡಗಳು ಮತ್ತು ನಂಬಿಕೆಯ ಜೊತೆಗಿರುವ ಸಂಬಂಧವನ್ನು ಕುರಿತು ವಿಶ್ಲೇಷಿಸಲಾಗಿದೆ.

ಐದನೆಯ ಅಧ್ಯಾಯವು ಪಂಚಗಣಾಧೀಶ್ವರರ ಆಚರಣೆಗಳು, ಕಾರ್ತಿಕಮಾಸ ಪೂಜೆ, ಧನುರ್ಮಾಸ ಪೂಜೆ, ಪಾಲ್ಗುಣಮಾಸದ ಪೂಜೆ, ನಾಗಾರಧನೆ, ಕೊಬ್ಬರಿ ಸುಡುವ ಆಚರಣೆ, ತೆಪ್ಪೋತ್ಸವ, ಗುಗ್ಗರಿಹಬ್ಬ, ಹುಟ್ಟು, ನಾಮಕರಣ, ಮದುವೆ, ಉಪನಯನ ಮೊದಲಾದ ಆಚರಣೆಗಳನ್ನು ಕುರಿತು ಹೇಳಲಾಗಿದೆ.

ಆರನೆಯ ಅಧ್ಯಾಯವು ಪಂಚಗಣಾಧೀಶ್ವರರ ಪವಾಡಗಳು ಮತ್ತು ಅನನ್ಯತೆ, ಪವಾಡಗಳ ಬಗ್ಗೆ ಜನಪದರ ಕಲ್ಪನೆ ಹಾಗೂ ಪ್ರಸ್ತುತ ಸಂದರ್ಭದಲ್ಲಿ ಪವಾಡಗಳನ್ನು ನೋಡುವ ಕ್ರಮವನ್ನು ಕುರಿತು ವಿಶ್ಲೇಷಿಸಲಾಗಿದೆ.

ಏಳನೆಯ ಅಧ್ಯಾಯವು ಪಂಚಗಣಾಧೀಶ್ವರರ ಸಾಹಿತ್ಯ, ಕಥೆ, ಗೀತೆ, ಲಾವಣಿ, ಮುತ್ತಿಗೆ ಪದ, ಗಾದೆ, ಒಡಪು, ಕೋಲಾಟ ಪದಗಳು, ಪಂಚಗಣಾಧೀಶ್ವರರ ಕುರಿತು ಸ್ವರವಚನಗಳು, ಬಿಡಿ ಪದಗಳ ಕುರಿತು ಮತ್ತು ಜನಪದ ಗೀತೆಗಳ ಆಶಯಗಳನ್ನು ಕುರಿತು ವಿವರಿಸಲಾಗಿದೆ.

ಎಂಟನೆಯ ಅಧ್ಯಾಯವು ಸಮಾರೋಪವಾಗಿದ್ದು, ಒಟ್ಟಾರೆ ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

**೫. ಆಕರ ಸಾಮಾಗ್ರಿ ಮತ್ತು ಈವರೆಗಿನ ಅಧ್ಯಯನಗಳು**

ಧಾರ್ಮಿಕ ಪಂಥಗಳನ್ನಾಗಲಿ ಅಥವಾ ಸಮುದಾಯವನ್ನು ಕುರಿತು ಅಧ್ಯಯನ ಮಾಡುವಾಗ ಜನಮುಖಿ

ವಿಷಯಗಳ ಕಡೆ ಮಾತ್ರ ಆಸಕ್ತಿ ವಹಿಸುತ್ತಿದ್ದರು. ಪಂಚಗಣಾಧೀಶ್ವರರಿಗೆ ಸಂಬಂಧಿಸಿದಂತೆ ಸಂಶೋಧನಾತ್ಮಕ ಅಧ್ಯಯನಗಳು ಹೆಚ್ಚಾಗಿ ನಡೆದಿಲ್ಲ. ಆದರೆ ಪ್ರತಿಯೊಬ್ಬ ಸಂತರಿಗೂ ಸಂಬಂಧಿಸಿದಂತೆ ಅಧ್ಯಯನಗಳು ನಡೆದಿವೆ. ಪುರಾಣಗಳು, ಕಥನಗಳು, ಪವಾಡಗಳು, ಕಾವ್ಯಗಳು, ಸ್ತೋತ್ರಗಳು ಹಾಗೂ ನಾಮಾವಳಿಗಳು ರಚಿತವಾಗಿವೆ.

ಪಂಚಗಣಾಧೀಶ್ವರರಿಗೆ ಸಂಬಂಧಿಸಿದಂತೆ 'ಪಂಚಗಣಾಧೀಶ್ವರರು' (ಹೀರೇಮಠ ಎಸ್.ಎಸ್., ೧೯೯೭) ಎನ್ನುವ ಕೃತಿ ಮೊದಲ ಬಾರಿಗೆ ಪಂಚಗಣಾಧೀಶ್ವರರನ್ನು ಕುರಿತು ಪರಿಚಯ ಮಾಡಿಕೊಡುವ ಮಹತ್ವದ ಕೃತಿಯಾಗಿದೆ. ಇದನ್ನು ಅಧ್ಯಯನಕ್ಕೆ ಆಕರ ಗ್ರಂಥವಾಗಿ ಬಳಸಿಕೊಳ್ಳಲಾಗಿದೆ.

ಸಿ.ಸದ್ಯೋಜಾತಮೂರ್ತಿ, (೧೯೮೪), 'ಶ್ರೀಪಂಚಗಣಾಧೀಶ್ವರರು' ಎನ್ನುವ ಕೃತಿಯನ್ನು ರಚಿಸಿದ್ದಾರೆ. ಇದು ಪಂಚಗಣಾಧೀಶ್ವರರನ್ನು ಪರಿಚಯ ಮಾಡಿಕೊಡುವ ಕೃತಿಯಾಗಿದೆ. ಪ್ರಮುಖ ಆಕರವನ್ನಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ನಾಯಕನಹಟ್ಟಿ ತಿಪ್ಪೇಸ್ವಾಮಿಗೆ ಸಂಬಂಧಿಸಿದಂತೆ ಬಸಪ್ಪ ಎಂ., 'ಅವತಾರ ಪುರುಷ ಶ್ರೀ ತಿಪ್ಪೇರುದ್ರಸ್ವಾಮಿಯವರ ಮಹಾತ್ಮೆ' (೧೯೫೮). ಎನ್ನುವ ಪುಟ್ಟ ಕೃತಿ ವದನಕಲ್ಲಿನ ಬಗ್ಗೆ ಮಾಹಿತಿ ನೀಡುತ್ತದೆ.

ಬಸವರಾಜ ಮಹದೇವಪುರ, 'ಶ್ರೀಗುರು ತಿಪ್ಪೇರುದ್ರಸ್ವಾಮಿ ಮಹಾತ್ಮೆ' ಎಂಬ ಕಥನಕಾವ್ಯ (೧೯೮೩) ತಿಪ್ಪೇಸ್ವಾಮಿಯ ಪವಾಡಗಳನ್ನು ಕಾವ್ಯರೂಪದಲ್ಲಿ ಕಟ್ಟಿಕೊಟ್ಟಿದೆ.

ಚಂದ್ರಶೇಖರ ವಿ.ದಾವಣಗೆರೆ ಅವರು ರಚಿಸಿದ 'ಕಾಯಕಯೋಗಿ ಶ್ರೀಗುರು ತಿಪ್ಪೆರುದ್ರಸ್ವಾಮಿ' (೨೦೦೧) ಎನ್ನುವ ಕೃತಿಯ ಜೀವನ ಮತ್ತು ಚರಿತ್ರೆ, ಕ್ಷೇತ್ರ ದರ್ಶನದ ಬಗ್ಗೆ ಮಾಹಿತಿಯನ್ನು ನೀಡುತ್ತದೆ.

ಕೊಟ್ರಪ್ಪಯ್ಯಶಾಸ್ತ್ರಿ ಎಂ.ವಿ.ಎಸ್. ಅವರ ನಾಯಕನಹಟ್ಟಿ ಶ್ರೀಗುರು ತಿಪ್ಪೇರುದ್ರ ಸ್ವಾಮಿ ಚರಿತ್ರೆ ಎನ್ನುವ ಪುಟ್ಟ ಕೃತಿ ತಿಪ್ಪೇಸ್ವಾಮಿಯ ಬಗ್ಗೆ ಮಾಹಿತಿ ನೀಡುತ್ತದೆ.

ಅಂಬಳಿಕೆ ಹಿರಿಯಣ್ಣ (೧೯೭೮) ಸಂಪಾದಿಸಿದ ಕಾಡುಗೊಲ್ಲರು ಹಾಡಿರುವ ಕಾವ್ಯದಲ್ಲಿ ತಿಪ್ಪೇಸ್ವಾಮಿ ಜೀವನ, ಪವಾಡಗಳನ್ನು ಕುರಿತು ಅಧ್ಯಯನವಾಗಿದೆ. ಇದನ್ನು ಪ್ರಮುಖ ಆಕರವಾಗಿ ಬಳಸಿಕೊಳ್ಳಲಾಗಿದೆ.

ಕೃಷ್ಣಮೂರ್ತಿ ಹನೂರು (೧೯೯೩) ಅವರು 'ಮ್ಯಾಸಬೇಡರ ಸಂಸ್ಕೃತಿ' ಎನ್ನುವ ಕೃತಿಯನ್ನು ರಚಿಸಿದ್ದಾರೆ. ತಿಪ್ಪೇಸ್ವಾಮಿ ರಥೋತ್ಸವದ ಬಗ್ಗೆ ಒಳಮಠ, ಹೊರಮಠಗಳನ್ನು ಕುರಿತು ಪರಿಚಯ ಮಾಡಿಕೊಡುತ್ತದೆ.

ರುದ್ರಪ್ಪಕರಿಶೆಟ್ಟಿ (೧೯೯೫) ಅವರ ಪ್ರೌಢ ಪ್ರಬಂಧ 'ಮ್ಯಾಸನಾಯಕರು ಒಂದು ಜನಾಂಗಿಕ ಅಧ್ಯಯನ'ವು ತಿಪ್ಪೇಸ್ವಾಮಿಯನ್ನು ಆರಾಧಿಸುವ ಬೇಡ ಜನಾಂಗದ ಆಚರಣೆ ಸಂಪ್ರದಾಯಗಳನ್ನು ಕುರಿತು ಹೇಳುತ್ತದೆ. ತಿಪ್ಪೇಸ್ವಾಮಿಗೆ ಸಂಬಂಧಿಸಿದ ಗೀತೆಯನ್ನು ಕಟ್ಟಿಕೊಟ್ಟಿದ್ದಾರೆ.

ಮೀರಸಾಬಿಹಳ್ಳಿ ಶಿವಣ್ಣನವರು ಗೊಲ್ಲಕಡಗ (೧೯೯೯) ಹಾಗೂ ದುರುಗ ಜಾನಪದ ಎನ್ನುವ ಕೃತಿಯಲ್ಲಿ ನಾಯಕನಹಟ್ಟಿ ಪರಿಸರವನ್ನು ಕುರಿತು ಹೇಳುತ್ತದೆ. ಡಾ.ವಿರೂಪಾಕ್ಷಿ ಪೂಜಾರಹಳ್ಳಿಯವರು

ಹಂಪಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ (೨೦೦೨) 'ಮಧ್ಯಕಾಲೀನ ಕನ್ನಡ ಕಾವ್ಯಗಳಲ್ಲಿ ನಿರೂಪಿತವಾಗಿರುವ ಬೇಟೆ ಮತ್ತು ಬೇಡರ ಸಂದರ್ಭಗಳು: ಒಂದು ಚಾರಿತ್ರಿಕ ಅಧ್ಯಯನ" ಎನ್ನುವ ಕೃತಿ ಹಾಗೂ ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು (೨೦೦೨) ಎನ್ನುವ ಕೃತಿ ತಿಪ್ಪೇಸ್ವಾಮಿ ಆಚರಣೆ, ಹಾಡು, ನಂಬಿಕೆಗಳನ್ನು ಕುರಿತಾಗಿವೆ.

'ನಾಯಕನಹಟ್ಟಿ ತಿಪ್ಪೇಸ್ವಾಮಿ: ಒಂದು ಸಾಂಸ್ಕೃತಿಕ ಅಧ್ಯಯನ' ಎನ್ನುವ ಪ್ರೌಢ ಪ್ರಬಂಧವನ್ನು ಬಿ.ಆರ್.ಸತೀಶ (೨೦೦೧) ಅವರು ಕುವೆಂಪು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರಬಂಧದಲ್ಲಿ ತಿಪ್ಪೇಸ್ವಾಮಿ ಚರಿತ್ರೆ, ವಂಶಾವಳಿ, ಆಚರಣೆ, ಹಾಡು, ಜಾತ್ರೆ, ದೇವಾಲಯಗಳ ವಿವರಗಳನ್ನು ಪಾಳೆಯಗಾರಿಕೆಯ ವಂಶಾವಳಿಯ ಬಗ್ಗೆ ವಿವರಿಸುತ್ತದೆ.

ಪ್ರೊ.ಲಕ್ಷ್ಮಣ್ ತೆಲಗಾವಿ (ಜನಪದ ಸಾಹಿತ್ಯ, ಚಾರಿತ್ರಿಕ ವಿವೇಚನೆ) ಬಿ.ಪಿ.ವಿರೇಂದ್ರಕುಮಾರ, (ಬುಡಕಟ್ಟು ಸಂಸ್ಕೃತಿಯ ಹಿನ್ನಲೆಯಲ್ಲಿ ನಾಯಕನಹಟ್ಟಿ ಶ್ರೀ ತಿಪ್ಪೇಸ್ವಾಮಿ ಜಾತ್ರೆ). ಎಂ.ವಿ.ಚಿತ್ರಲಿಂಗಯ್ಯ (ನಾಯಕನಹಟ್ಟಿ ಬಖೈರು), ರಾಜಶೇಖರಪ್ಪ ಬಿ. (ನಾಯಕನಹಟ್ಟಿ ತಾಮ್ರಪಟ) ಮುಂತಾದವರು ನಾಯಕನಹಟ್ಟಿ ತಿಪ್ಪೇಸ್ವಾಮಿ ಅಲ್ಲಿಯ ಪರಿಸರ, ಆಚರಣೆ, ಸಂಪ್ರದಾಯ ಕುರಿತು ಮಾಹಿತಿ ಒದಗಿಸುತ್ತದೆ.

ಕೊಟ್ಟೂರು ಗುರುಬಸವನಿಗೆ ಸಂಬಂಧಿಸಿದಂತೆ ಬಸವಲಿಂಗಕವಿ ಬರೆದ (೧೯೭೮) 'ಕೊಟ್ಟೂರು ಬಸವೇಶ್ವರ ಚಾರಿತ್ರ್ಯ' ಎನ್ನುವ ಕೃತಿ ಗುರುಬಸವನು ಕೈಲಾಸದಿಂದ ಭೂಲೋಕಕ್ಕೆ ಬಂದು ಹುಚ್ಚನಂತೆ ತಿರುಗುತ್ತ ಕುಪ್ಪಿನಕೆರೆಯಿಂದ ಕೊಟ್ಟೂರಿಗೆ ಬಂದು ಪವಾಡಗಳನ್ನು ಮಾಡಿದ ಮಾಹಿತಿಯನ್ನು ನೀಡುವ ಮಹತ್ವದ ಕೃತಿಯಾಗಿದೆ. ಇದನ್ನು ಅಧ್ಯಯನಕ್ಕೆ ಆಕರವಾಗಿ ಬಳಸಿಕೊಳ್ಳಲಾಗಿದೆ.

ಮಂಜುನಾಥ ಶಾಸ್ತ್ರಿಗಳು ಸಂಪಾದಿಸಿದ (೧೯೮೫) ಕೊಟ್ಟೂರೇಶ್ವರ ಮುತ್ತಿಗೆ ಪದ್ಯಾವಳಿಗಳು ಎಂಬ ಕೃತಿ ಪವಾಡಗಳ ಬಗ್ಗೆ ವಿವರಿಸುತ್ತದೆ.

ಷಡಕ್ಷರಾನಂದ ಶಿವಾಚಾರ್ಯಸ್ವಾಮಿ (೧೯೭೭) ಕೊಟ್ಟೂರು ಶ್ರೀ ಗುರುಬಸವರಾಜೇಂದ್ರನ ಲೀಲೆ ಎನ್ನುವ ಕೃತಿಯು ಬಸವಲಿಂಗ ಕವಿಯ ಕೊಟ್ಟೂರು ಬಸವೇಶ್ವರ ಚಾರಿತ್ರ್ಯ ಕೃತಿಯನ್ನು ಗದ್ಯರೂಪದಲ್ಲಿ ವಿವರಿಸಿದೆ.

ದಿ.ಎಂ.ಶರಣಪ್ಪ ಅವರು (೧೯೯೭) 'ಕೊಟ್ಟೂರೇಶ್ವರ: ಒಂದು ಸಾಂಸ್ಕೃತಿಕ ಅಧ್ಯಯನ' ಎನ್ನುವ ಎಂಫಿಲ್ ಪ್ರಬಂಧವನ್ನು ಧಾರವಾಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ್ದಾರೆ. ಕೊಟ್ಟೂರೇಶ್ವರನ ಆಚರಣೆಗಳ ಬಗ್ಗೆ ವಿವರಗಳನ್ನು ತಿಳಿಸಿಕೊಡುತ್ತದೆ.

ಎಸ್.ಎಂ.ನಾಗಭೂಷಣ್ ಅವರು 'ಕೊಟ್ಟವ್ವೆಯ ಊರು ಕೊಟ್ಟೂರು' ಎನ್ನುವ ಲೇಖನ ಕೊಟ್ಟೂರಿನ ಬಗ್ಗೆ ಮಾಹಿತಿಯನ್ನು ನೀಡುತ್ತದೆ.

ಪಂಡಿತ್ ಎಸ್.ಎಂ.ರುದ್ರಮುನಿ ಅಯ್ಯ (೨೦೦೫) ಅವರ 'ಕೊಟ್ಟೂರು ಶ್ರೀಗುರುಬಸವ ರಾಜೀಯಂ' ಷಟ್ಪದಿ ಕಾವ್ಯದಲ್ಲಿ ರಚಿಸಿದ್ದಾರೆ. ಪವಾಡಗಳನ್ನು ಕುರಿತ ಮಹತ್ವದ ಕೃತಿಯಾಗಿದೆ. ಅಧ್ಯಯನಕ್ಕೆ ಆಕರ ಗ್ರಂಥವಾಗಿದೆ.

ಕೂಲಹಳ್ಳಿ ಮದ್ದಾನಸ್ವಾಮಿಗೆ ಸಂಬಂಧಿಸಿದ ಪ್ರಮುಖ ಆಕರ ಗ್ರಂಥವೆಂದರೆ 'ಗೋಣಿ ಬಸವೇಶ್ವರ ಚರಿತ್ರೆ' (೧೯೯೦) ಈಡಿಗರ ಚಂದ್ರಪ್ಪನವರು ಬರೆಸಿದ ಕೃತಿ. ಮದ್ದಾನಸ್ವಾಮಿ ಮಗ ಗೋಣಿ ಬಸವನ ವಿವರವಾದ ಮಾಹಿತಿಯನ್ನು ಒದಗಿಸುತ್ತದೆ. ಇದನ್ನು ಅಧ್ಯಯನಕ್ಕೆ ಆಕರವಾಗಿ ಬಳಸಿಕೊಳ್ಳಲಾಗಿದೆ.

ವೆಂಕಟೇಶ ಇಂದ್ವಾಡಿ ಅವರು (೨೦೦೬) 'ಬಾಲಬಸವರ ತುಮನೆಪ್ಪ' ಅವರಿಂದ ಹಾಡಿಸಿದ 'ಗೋಣಿ ಬಸಪ್ಪನ ಕಾವ್ಯ'ವು ಗೋಣಿಬಸಪ್ಪನನ್ನು ಕುರಿತು ಬಾಲಬಸವರು ಹಾಡಿದ ಹಾಡುಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಗೋಣಿ ಬಸವನ ಚರಿತ್ರೆಯನ್ನು ಕಟ್ಟಿಕೊಡುತ್ತದೆ.

ಸಾವಳಗಿ ನಾಗಪ್ಪ (೨೦೦೦) ಬರೆದ 'ಗೋಣಿಬಸವೇಶ್ವರ ಮಹಾತ್ಮೆ' ಕೃತಿ ಗೋಣಿ ಬಸಪ್ಪನ ಬಗ್ಗೆ ಮಾಹಿತಿಯನ್ನು ಕೊಡುತ್ತದೆ.

ಡಾ.ಯಲ್ಲಪ್ಪ.ಕೆ.ಕೆ.ಪುರ ಅವರು ಬರೆದಿರುವ ಲೇಖನ 'ಕಾಲಜ್ಞಾನದ ಬಾಲಬಸವರು' ಎನ್ನುವುದು ಗೋಣಿಬಸವ ಕಾವ್ಯ ಹಾಡುವ ಬಾಲಬಸವರ ಜೀವನ ಆಚರಣೆಗಳನ್ನು ಕುರಿತು ಹೇಳುತ್ತದೆ.

ಎನ್.ಎಂ.ರವಿಕುಮಾರ್, ಡಾ.ಎ.ವೃಷಬೇಂದ್ರಪ್ರಸಾದ್ ಅವರ (೧೯೯೮) 'ಮುನ್ನಡೆಯ ಕೂಡ್ಲಿಗಿ'ಯಲ್ಲಿ ಪಂಚಗಣಾಧೀಶ್ವರರ ೧೬-೧೭ನೇ ಶತಮಾನದಲ್ಲಿ ಬಂದರು ಎಂಬುದರ ಬಗ್ಗೆ ಮಾಹಿತಿ ನೀಡುತ್ತದೆ.

ಡಾ.ಕೆ.ರವೀಂದ್ರನಾಥ (೨೦೦೭), 'ಕರ್ನಾಟಕ ವೀರಶೈವ ಮಠಗಳು ಮತ್ತು ಕನ್ನಡ ಸಾಹಿತ್ಯ' ಎಂಬ ಕೃತಿಯಲ್ಲಿ ಕೋಲ ಶಾಂತಯ್ಯನೆಂಬ ವಚನಕಾರ ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕು ಅರಸೀಕೆರೆಯಲ್ಲಿದ್ದರು. ನೀಲಗುಂದದ ಭೀಮೇಶ್ವರಲಿಂಗ ಈತನ ಆರಾಧ್ಯ ದೈವ ಎಂಬುದನ್ನು ಹೇಳಿದ್ದಾರೆ.

ಕುಂ.ಬಾ.ಸದಾಶಿವಪ್ಪ 'ಹರಪನಹಳ್ಳಿ ತಾಲೂಕು ಪರಿಚಯ' ಕೃತಿಯಲ್ಲಿ ಕ್ರಿ.ಶ.೧೭೦೦ರಲ್ಲಿ ಕೋಲಶಾಂತೇಶ್ವರ ಇದ್ದರು ಎಂಬಂತಹ ಮಾಹಿತಿಯನ್ನು ನೀಡುತ್ತದೆ.

ಸಣ್ಣಯ್ಯ ಬಿ.ಎಸ್.(೨೦೦೫) ಕನ್ನಡ ವಿಷಯ ವಿಶ್ವಕೋಶ (ಕರ್ನಾಟಕ ಸಂಪುಟ.೧)ದಲ್ಲಿ ೧೧೬೦ರಲ್ಲಿ ಬರುವ ಶರಣರಾದ ಬಸವಣ್ಣ, ಬಿಜ್ಜಳ ಸಮಕಾಲೀನರಾದ ಕೋಲಶಾಂತಯ್ಯನ ಬಗ್ಗೆ ವಿವರವನ್ನು ನೀಡುತ್ತದೆ. 'ವಚನಸಂಪುಟ'(೭)ದಲ್ಲಿ ಕೋಲಶಾಂತಯ್ಯನ ೧೦೩ ವಚನ ಕಂಡುಬರುತ್ತವೆ.

ಕೆಂಪಯ್ಯನಿಗೆ ಸಂಬಂಧಿಸಿದಂತೆ (೨೦೦೧), ಈಡಿಗರ ಚಂದ್ರಪ್ಪ ಬರೆದ 'ಗೋಣಿಬಸವೇಶ್ವರ ಚರಿತ್ರೆ' ಕೃತಿಯಲ್ಲಿ ಬಿಟ್ಟರೆ ತೆಲುಗಿನಲ್ಲಿ ಹುಲಿಕುಂಟೆಮೂರ್ತಿ ಆರ್.ಸಿ. (೨೦೦೧) ಬರೆದ 'ಚರಿತ್ರೆ ವಲಗುಲೋ ರಾಯದುರ್ಗಮು' ಎನ್ನುವ ಕೃತಿಯಲ್ಲಿ ಕಂಡುಬರುತ್ತದೆ. ಈ ಕೃತಿಯಲ್ಲಿ ಕೆಂಪಯ್ಯನ ಸಮಾಧಿ ರಾಯದುರ್ಗದಲ್ಲಿದೆ ಎಂಬ ಅಂಶ ತಿಳಿಸುತ್ತದೆ.

ಪರಮೇಶ್ವರಪ್ಪ ಕುದುರಿ (ಸಂ) (೨೦೦೩), 'ಹಟ್ಟಿ ಸಿರಿ' ಎಂಬ ಸಂಪಾದನೆ ಕೃತಿಯಲ್ಲಿ ತಿಪ್ಪೇಸ್ವಾಮಿಯ ಜಾತ್ರೆ ಮತ್ತು ಪರಿಸರದ ಬಗ್ಗೆ ವಿವರಗಳಿವೆ.

ಎ.ಕರಿಬಸಪ್ಪ, ೨೦೦೩, 'ಬಳ್ಳಾರಿ ಜಿಲ್ಲೆಯ ಐತಿಹ್ಯಗಳು' ಕೃತಿಯಲ್ಲಿ ಕೊಟ್ಟೂರೇಶ್ವರ ಮತ್ತು ಗೋಣಿ ಬಸವೇಶ್ವರರ ಬಗೆಗಿರುವ ಐತಿಹ್ಯಗಳ ಬಗ್ಗೆ ಮಾಹಿತಿಯನ್ನು ನೀಡುತ್ತದೆ.

ಚೇತನಕುಮಾರ, 'ಬಳ್ಳಾರಿ ಜಿಲ್ಲೆಯ ವೃತ್ತಿಗಾಯಕರು' ಕೃತಿಯಲ್ಲಿ ಗೋಣಿಬಸಪ್ಪನ ಕಾವ್ಯವನ್ನು ಕುರಿತು ಪರಿಚಯಿಸುತ್ತದೆ.

ಈ ಎಲ್ಲ ಕೃತಿಗಳು ಲಿಖಿತರೂಪದ ಆಕರಗಳಾದರೆ ಗೋಣಿ ಬಸವನ ಕಾವ್ಯ ಹಾಡುವ ಹರಿಜನರು ಗುರುಬಸವನ ಕುರಿತು ಹಾಡುವ ಬಿಡಿ ಪದಗಳು, ಕೋಲಾಟ ಪದಗಳು, ಮಿತ್‌ಗಳು ಮೌಖಿಕ ಆಕರಗಳಾಗಿವೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಆಚರಣೆ, ಜಾತ್ರೆ, ಉತ್ಸವಗಳ ಬಗ್ಗೆ ವಕ್ತೃಗಳ ಹೇಳಿಕೆಗಳು ಆಕರಗಳಾಗಿವೆ. ಒಟ್ಟಾರೆ ಮೇಲಿನ ಎಲ್ಲಾ ಅಂಶಗಳು ಈ ಪ್ರೌಢ ಪ್ರಬಂಧವನ್ನು ರಚಿಸುವಲ್ಲಿ ಆಕರಗಳನ್ನಾಗಿ ಬಳಸಿ ಕೊಳ್ಳಲಾಗಿದೆ.

## ಅಧ್ಯಾಯ - ಎರಡು

## ಪಂಚಗಣಾಧೀಶ್ವರರ ಹುಟ್ಟು

---

೨.೧. ಪಂಚಗಣಾಧೀಶ್ವರರ ಹೆಸರು ಮತ್ತು ವಿಶೇಷತೆ

೨.೨. ಪಂಚಗಣಾಧೀಶ್ವರರ ಮೂಲ

೨.೩. ಪಂಚಗಣಾಧೀಶ್ವರರ ಪ್ರೇರಣೆ ಮತ್ತು ಪ್ರಭಾವಗಳು

೨.೪. ಶೈವನಾಥಸಿದ್ಧರ ಪ್ರಭಾವ

೨.೫. ಪಂಚಗಣಾಧೀಶ್ವರರು ನೆಲೆನಿಂತ ಕ್ಷೇತ್ರಗಳು

- ೨.೫.೧. ಕೊಟ್ಟೂರು ಗುರುಬಸವೇಶ್ವರ
- ೨.೫.೨. ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿ
- ೨.೫.೩. ಕೂಲಹಳ್ಳಿ ಶ್ರೀಮದ್ದಾನೇಶ್ವರಸ್ವಾಮಿ
- ೨.೫.೪. ಕೂಲಹಳ್ಳಿ ಗೋಣಿಬಸವೇಶ್ವರ
- ೨.೫.೫. ಅರಸೀಕೆರೆ ಕೋಲಶಾಂತಯ್ಯ
- ೨.೫.೬. ಹರಪನಹಳ್ಳಿ ಕೆಂಪಯ್ಯ
- ೨.೫.೭. ಪಂಚಗಣಾಧೀಶ್ವರರು ಸಂಚರಿಸಿದ ಸ್ಥಳಗಳು

# ಅಧ್ಯಾಯ-ಎರಡು

# ಪಂಚಗಣಾಧೀಶ್ವರರ ಹುಟ್ಟು

**ಪಂಚಗಣಾಧೀಶ್ವರರ ಹುಟ್ಟು**

ಕ್ರಿ.ಶ. ೧೩ ಮತ್ತು ೧೪ನೆಯ ಶತಮಾನಗಳು ವೀರಶೈವ ಸಾಹಿತ್ಯದಲ್ಲಿ ಮಹತ್ವದ ಬದಲಾವಣೆಯ ಕಾಲಘಟ್ಟವಾಗಿತ್ತು. ಶರಣರು ಕಂಡ ಕಲ್ಯಾಣವೆಂಬ ಪ್ರಣತೆ ಭಕ್ತಿರಸದ ತೈಲ, ತೊಳಗಿ ಬೆಳಗುವ ಶಿವನಪ್ರಕಾಶ' ವನೆಲ್ಲವೂ ಹಾಳಾಗಿ ಹೋಳಾಗಿ ಹೋಗಿ ಎಲ್ಲೆಲ್ಲೂ ಮಬ್ಬುಗತ್ತಲೆ ಕವಿಯಿತು. ಆದರೂ ಕಲ್ಯಾಣದ ಶರಣರ ಸತ್ತ್ವ, ಆಶಯ, ಸಂದೇಶಗಳು ಬೂದಿಮುಚ್ಚಿದ ಕೆಂಡದಂತೆ ಜನಮನದಲ್ಲಿ ಉಳಿದವು. ಅವರು ಪುನಃ ಅವತರಿಸಿ ಧರ್ಮವನ್ನು ಮೇಲೆತ್ತುವರೆಂಬ ನಂಬಿಕೆ ಉತ್ಕಟವಾಗಿತ್ತು. ಆದರೆ ಕಲಿಯ ಕಾಲದ ದಬ್ಬಾಳಿಕೆಗೆ ತುರುಕರ ಹಾವಳಿಗಳು ಪ್ರತೀಕವೆಂಬಂತೆ ನಡೆದವು. ಅಂದು ವೀರಶೈವ ಧರ್ಮಕ್ಕೊದಗಿದ ಆಘಾತವನ್ನು ನೀಡಿದವು. ಈ ಅನಿಶ್ಚಿತತೆಯಿಂದ ಪಾರಾಗಲು ವೀರಶೈವ ಧರ್ಮ ಹವಣಿಸುತ್ತಿತ್ತು.

ವಿಜಯನಗರೋತ್ತರವಾಗಿ ಪತನದ ಹಾದಿ ಹಿಡಿದಿದ್ದ ವೀರಶೈವ ಧರ್ಮವನ್ನು ಉದ್ಧರಿಸಲು ಸಾಮಾಜಿಕ ಅಸಮಾನತೆ ಹೋಗಲಾಡಿಸಲು ಪಂಚಗಣಾಧೀಶ್ವರರ ಹುಟ್ಟು ಅಂದು ಅನಿವಾರ್ಯವಾಯಿತು. ಹೀಗಾಗಿ ಮಧ್ಯ ಕರ್ನಾಟಕ ಭಾಗದಲ್ಲಿ ಪಂಚಗಣಾಧೀಶ್ವರರ ಪರಂಪರೆ ಉದಯಿಸಿತು. ಶರಣ ಚಳುವಳಿಯೊಂದಿಗೆ ಹಾಗೂ ಅಂದಿನ ಸಮಕಾಲೀನ ಪರಂಪರೆಗಳೊಂದಿಗೆ ಈ ಪಂಥ ನಿಕಟ ಸಂಬಂಧವನ್ನು ಹೊಂದಿತು. ಅವು ಒಂದನ್ನೊಂದು ಆಧರಿಸಿಕೊಂಡು ಪರಸ್ಪರ ಸಮರ್ಥನೆಯನ್ನು ಕಾಯ್ದುಕೊಂಡು ಬಂದಿರುವುದರಿಂದ, ಪಂಚಗಣಾಧೀಶ್ವರರನ್ನು ಮಧ್ಯಕಾಲೀನ ಶರಣ ಚಳುವಳಿಯಿಂದಾಗಲಿ ಸಮಕಾಲೀನ ಪಂಥ ಪರಂಪರೆಗಳಿಂದಾಗಲಿ ಬೇರ್ಪಡಿಸಿ ಅರ್ಥ ಮಾಡಿಕೊಳ್ಳಲು ಆಗಲಾರದು.

"ಸಾಮಾಜಿಕ ಅಸಮಾನತೆಯನ್ನು ಸಮರ್ಥಿಸುತ್ತಿದ್ದ ದೇವಾಲಯ-ಅಗ್ರಹಾರಗಳಲ್ಲಿದ್ದ ಪುರೋಹಿತಶಾಹಿ, ಇನ್ನೊಂದೆಡೆ ಉಂಬಳಿಗಮಾನ್ಯ ಪದ್ಧತಿಯನ್ನು ಪೋಷಿಸಿಕೊಂಡು ಬಂದ ಭೂ ಮಾಲೀಕರು, ಅರಸರು ಒಬ್ಬರನ್ನೊಬ್ಬರು ಸಮರ್ಥಿಸುತ್ತ ಸಾಮಾಜಿಕ ಮತ್ತು ಆರ್ಥಿಕ ವೈಷಮ್ಯದಿಂದೊಡಗೂಡಿದ ಸಮಾಜ ನಿರ್ಮಾಣದಲ್ಲಿ ತೊಡಗಿದರು. ದೇವಾಲಯಗಳು ಧರ್ಮದ ಹೆಸರಿನಲ್ಲಿ ಸಾಮಾಜಿಕ ಅಸಮಾನತೆಯನ್ನು ಸಮರ್ಥಿಸುತ್ತಿದ್ದರೆ, ಅರಸರು ಪ್ರಭುತ್ವದ ಅಸ್ತಿತ್ವಕ್ಕಾಗಿ, ದೇವಾಲಯಗಳನ್ನು ಬೆಂಬಲಿಸುತ್ತಿದ್ದರು. ಹೀಗಾಗಿ ೧೨ನೇ ಶತಮಾನದ ಕಾಲಕ್ಕಾಗಲೇ ದುಡಿಯುವ ವರ್ಗ ಹಾಗೂ ಧಾರ್ಮಿಕ, ರಾಜಕೀಯ ಪ್ರಭುತ್ವಕ್ಕೂ ತಿಕ್ಕಾಟ ಶುರುವಾಯಿತು."[1] ದುಡಿಯುವ ವರ್ಗಗಳು ಸಾಮಾಜಿಕ ಕ್ರಾಂತಿಯಲ್ಲಿ ತೊಡಗಿದರು.

ಪಂಚಗಣಾಧೀಶ್ವರರು ಹುಟ್ಟಲು ಪ್ರಮುಖವಾದ ಕಾರಣ ಸಮಾಜದ ಅನೀತಿ, ಅನ್ಯಾಯ, ಅಕ್ರಮವನ್ನು ಹೊಡೆದೋಡಿಸುವುದಾಗಿತ್ತು. ದಾರಿದ್ರ್ಯ, ದುರ್ನಡತೆ, ದುರಾಚಾರಗಳನ್ನು ನಿಯಂತ್ರಿಸಲು ಶಿವಮತ ಧರ್ಮಕ್ಕೆ ಕೊರತೆ ಬಾಧೆಯನ್ನು ಕೊಡತಕ್ಕ, ಪರಮತದ ಹಾವಳಿಯಿಂದ ರಕ್ಷಿಸಲು ಜನರನ್ನು ಅಂಧಕಾರದಿಂದ, ಮೌಢ್ಯತೆಯ ಬಲೆಯಿಂದ ಬಿಡಿಸಿ, ನೀತಿಯನ್ನು ಸಾರಲು ಹಿಂಸೆಯನ್ನು ತಡೆಯಲು ಶಿವನ ಆಜ್ಞೆಯ ಮೇರೆಗೆ ಉದಯಿಸಿ ಬಂದವರು ಧರ್ಮವನ್ನು ಪ್ರಸಾರ ಮಾಡುವುದರ ಜೊತೆಗೆ ಜನರ ಪ್ರೀತಿಗೆ ಪಾತ್ರರಾಗಿ ಕಷ್ಟ ಸುಖಗಳಿಗೆ ಸ್ಪಂದಿಸುತ್ತ ಬದುಕನ್ನು ನಡೆಸಲು, ಜನರನ್ನು ಉದ್ಧರಿಸಲು ಮಧ್ಯಕರ್ನಾಟಕ ಭಾಗದಲ್ಲಿ ಪಂಚಗಣಾಧೀಶ್ವರರ ಹುಟ್ಟು ಪ್ರಾಮುಖ್ಯತೆಯನ್ನು ಪಡೆಯಿತು.

ಪಂಚಗಣಾಧೀಶ್ವರರು ೧೬ನೇ ಶತಮಾನದಲ್ಲಿ ಜೀವಿಸಿದವರು. ಇವರು ಶಿವನ ಸ್ವರೂಪಿಗಳಾಗಿದ್ದರು ಎಂಬುದು ಕೊಟ್ಟೂರು ಗುರುಬಸವ ಪುರಾಣಗಳಿಂದ ವಿಧಿತವಾಗಿದೆ. ಯಾವ ಯಾವ ಕಾಲಕ್ಕೆ ಶಿವಧರ್ಮಕ್ಕೆ ಹಾನಿಯೊದಗುವುದೋ ಆಗ ಈಶ್ವರನ ಅಪ್ಪಣೆಯಿಂದ ಶರಣರು ಭೂಮಿಯಲ್ಲಿ ಅವತರಿಸಿ ದ್ರೋಹಿಗಳನ್ನು ಸದೆಬಡಿದು ಶಿವಧರ್ಮವನ್ನು ಸ್ಥಿರಗೊಳಿಸಿ ಪುನಃ ಶಿವಲೋಕ ಸೇರುವರು ಎಂದಿದ್ದಾರೆ. ಪಂಚಗಣಾಧೀಶ್ವರರ ಹುಟ್ಟಿನ ಬಗ್ಗೆ ನಿಖರವಾದ ಮಾಹಿತಿಯಿಲ್ಲ. ಆದರೆ "ಪುರಾಣಗಳ ಪ್ರಕಾರ ಪರಶಿವನು ಕೈಲಾಸದಲ್ಲಿರುವಾಗ ನಾರದನು ಭೂಲೋಕ ಸಂಚಾರ ಮಾಡಿ ಶಿವನ ಹತ್ತಿರ ಬಂದು ಭೂಲೋಕದಲ್ಲಿ ನಡೆಯುವಂತಹ ಸಂಗತಿಗಳನ್ನು ತಿಳಿಸಿ ಅಲ್ಲಿ ವೀರಶೈವ ಧರ್ಮಕ್ಕೆ ಬಲವಾದ ಹೊಡೆತವಿರುವುದನ್ನು ಶಿವನಿಗೆ ತಿಳಿಸಿದನು. ಆಗ ಶಿವನು ಬಸವೇಶನನ್ನು ಈಶ್ವರ ಭಕ್ತಿಯನ್ನು ಪ್ರಚುರಗೊಳಿಸುವಂತೆ ಹೇಳಿ ಕಳುಹಿಸಿದ. ಭೂಲೋಕದಲ್ಲಿ ಜನರು ಶಿವತತ್ವದಲ್ಲಿ ಶಿವಭಕ್ತಿಯಲ್ಲಿ ಶಿವಕಾರುಣ್ಯದ ಮೂಲ ಮಾಹಿತಿಯನ್ನೇ ಮರೆತು ಮೂಢರಾಗಿ ದಟ್ಟ ದರಿದ್ರರಾಗಿದ್ದಾರೆ. ಧರ್ಮದ ಹಂಬಲ ನಶಿಸಿ ಅನಾಚಾರ, ಅತ್ಯಾಚಾರಗಳತ್ತ ಮಾನವನು ಸಾಗಿ ಮ್ಲೇಂಚರ ದುಷ್ಟ ಭೋದೆಯಿಂದ ಕಳವು, ಕೊಲೆ, ಸುಲಿಗೆ, ಶಿಶುಹತ್ಯೆ, ಗೋಹತ್ಯೆ, ಪರಸ್ತ್ರೀಯರ ಮಾನಹಾನಿ, ಭೂಸುರರು ಅನೇಕರ ಧರ್ಮ, ಶ್ರೇಷ್ಟತೆಯ ಉಪಟಳ ಹೆಚ್ಚಾಗಿ ಶಿವಧರ್ಮದ ತೆಗಳಿಕೆ, ಶಿವದೇವಾಲಯಗಳನ್ನು ನಾಶಪಡಿಸುವ ಕಾರ್ಯಗಳು ಎಡಬಿಡದೆ ಸಾಗಿರುವುದನ್ನು ಕಂಡರು".[೨] ಭೂಲೋಕದಲ್ಲಿ ನಡೆಯುವಂತಹ ಅನ್ಯಾಯ, ಅಕ್ರಮಗಳನ್ನು ನಿಯಂತ್ರಿಸಲು ಜನರ ಅಂಧಕಾರದ ಕಣ್ಣನ್ನು ತೆರೆಸಲು ಶಿವನು ಪಂಚಗಣಾಧೀಶ್ವರರನ್ನು ಭೂಲೋಕಕ್ಕೆ ಕಳುಹಿಸಿದ ಎಂಬುದು 'ಕೊಟ್ಟೂರು ಬಸವೇಶ್ವರ ಚಾರಿತ್ರ್ಯ' ಕೃತಿಯಿಂದ ತಿಳಿದು ಬರುತ್ತದೆ.

ಮಹಿಮ ಪುರುಷರು ಅಥವಾ ಸಾಂಸ್ಕೃತಿಕ ನಾಯಕರುಗಳ ಹುಟ್ಟು ಸಹಜ ರೀತಿಯದಾಗದೆ ಅಸಹಜ ರೀತಿಯದ್ದಾಗಿದೆ. ಇವರನ್ನು ಅಯೋನಿಜರು ಎಂದಿದ್ದಾರೆ. ಮಂಟೇಸ್ವಾಮಿ, ಮಾದೇಶ್ವರ, ಜುಂಜಪ್ಪ, ಮೈಲಾರಲಿಂಗ ಹೀಗೆ ಅನೇಕ ಸಾಂಸ್ಕೃತಿಕ ನಾಯಕರ ಹುಟ್ಟು ವಿಭಿನ್ನ ರೀತಿಯಿಂದ ಗುರುತಿಸಿಕೊಂಡಿರುವುದನ್ನು ಕಾಣುತ್ತೇವೆ. ಹಾಗೆಯೇ ಪಂಚಗಣಾಧೀಶ್ವರರ ಹುಟ್ಟಿನ ಹಿನ್ನಲೆಯಲ್ಲಿ ಗೊಂದಲವಿದೆ. ನಿಖರವಾದ ಮಾಹಿತಿಯಿಲ್ಲ. ಸಂತರು ಎಲ್ಲೂ ಸಹ ತಂದೆ ತಾಯಿಗಳ ಬಗ್ಗೆ ಹೇಳಿಕೊಂಡಿಲ್ಲ. ದೀಕ್ಷಾ ಗುರುವಿನ ಹೆಸರನ್ನು ಉಲ್ಲೇಖಿಸುತ್ತಾರೆ. ಪಂಚಗಣಾಧೀಶ್ವರರಿಗೆ ಶ್ರೀ ಗುರುರಾಜ ದೇಶೀಕೇಂದ್ರರು ಎಂಬ ಗುರುಗಳಿದ್ದರು

ಎಂಬುದು ತಿಳಿದು ಬರುತ್ತದೆ. ಎಲ್ಲಾ ಧಾರ್ಮಿಕ ಸಂತರಿಗೂ ಒಬ್ಬೊಬ್ಬ ದೀಕ್ಷಾ ಗುರುಗಳಿರುವ ಹಾಗೆ ಪಂಚಗಣಾಧೀಶ್ವರರು ಗುರುವಿನ ಮೂಲಕ ಗುರುತಿಸಿಕೊಂಡಿರುವುದನ್ನು ಕಾಣಬಹುದು.

ಪಂಚಗಣಾಧೀಶ್ವರರನ್ನು ಕುರಿತು "ಶ್ರೀ ಗುರುರಾಜ ದೇಶೀ ಕೇಂದ್ರರು ತಮ್ಮ ಶಿಷ್ಯರನ್ನು ಕುರಿತು ರುದ್ರಮುನಿ, ಬಸವರಾಜು, ಕೋಲಶಾಂತೇಶ, ಮದ್ವಾನೇಶ್ವರ, ಕೆಂಪೇಶ ಎಂದು ಮುದ್ದಾಗಿ ಗದ್ಗದ ಕಂಠದಿಂದ ಸಂಭೋದಿಸಿ, ವತ್ಸರೆ ಇಂದಿಗೆ ನಿಮ್ಮ ಶಿಕ್ಷಣ ಪೂರ್ಣಗೊಂಡಿತು. ಬ್ರಹ್ಮಚರ್ಯೆ ಲೌಕಿಕ ಪಾರಮಾರ್ಥಿಕ ಶಿಕ್ಷಣವನ್ನು ಯಶಸ್ವಿಯಾಗಿ ಪೂರೈಸಿದ್ದಾಯಿತು. ಇನ್ನು ಧರ್ಮ ಪ್ರಚಾರಕ್ಕಾಗಿ ಲೋಕ ಸಂಚಾರ ಕೈಗೊಂಡು ನಿಮ್ಮ ಧರ್ಮಕ್ಕೆ, ಕರ್ತವ್ಯಕ್ಕೆ ಲೋಪ ಬಾರದಂತೆ ಕಾರ್ಯನಿರ್ವಹಿಸಿ ಎಂದು ಆಶೀರ್ವದಿಸಿ ಕಳುಹಿಸಿಕೊಟ್ಟರಂತೆ."[೩] "ತಿಪ್ಪೇರುದ್ರರಿಗೆ ದೀಕ್ಷೆ ನೀಡಿದವರು ಆಧ್ಯಾತ್ಮಗಣನಾಥ ಎಂದು ಎಸ್.ಎಸ್.ಹಿರೇಮಠ ಹೇಳಿದ್ದಾರೆ."[೪] ಧಾರ್ಮಿಕ ಸಂತರಾದ ಪಂಚಗಣಾಧೀಶ್ವರರು ಎಲ್ಲೂ ಸಹ ದೀಕ್ಷಾಗುರುಗಳ ಕುರಿತು ಹೇಳಿಕೊಂಡಿಲ್ಲ. ಪಂಚಗಣಾಧೀಶ್ವರರು ದೀಕ್ಷಾ ಗುರುಗಳನ್ನು ವಿದ್ವಾಂಸರು ಬೇರೆ ಬೇರೆ ರೀತಿಯಲ್ಲಿ ಗುರುತಿಸಿಕೊಂಡಿರುವುದು ಕಂಡುಬರುತ್ತದೆ.

"ಶ್ರೀ ರೇಣುಕರ ಮಗನಾದ ರುದ್ರಮುನಿಯೇ ಚಿತ್ರದುರ್ಗ ಜಿಲ್ಲೆಯಲ್ಲಿ ಬರುವ ನಾಯಕನಹಟ್ಟಿಯಲ್ಲಿ ಅನೇಕ ಪವಾಡಗಳನ್ನು ಮೆರೆದ ತಿಪ್ಪೇರುದ್ರಸ್ವಾಮಿಯೆಂದು ತಿಳಿದುಬರುತ್ತದೆ. ಜನಜನಿತವಾಗಿರುವ ದಂತಕಥೆಗಳಿಂದಲೂ ಸ್ಥಳ ಮಹಾತ್ಮೆಗಳಿಂದಲೂ ತಿಳಿದುಬರುತ್ತದೆ ಎಂದು ಶಿವಶರಣ ಕಥಾರತ್ನಕೋಶದಲ್ಲಿ ಹೇಳಿದ್ದಾರೆ."[೫] ಹೀಗೆ ಹಲವು ಆಧಾರಗಳ ಮೂಲಕ ತಿಪ್ಪೇಸ್ವಾಮಿಯ ಕುರಿತು ಮಾಹಿತಿ ದೊರೆಯುತ್ತದೆ.

೧೨ನೇ ಶತಮಾನದಲ್ಲಿ ಕಲ್ಯಾಣದ ಪ್ರಸಿದ್ಧತೆಯನ್ನು ತಿಳಿದು ನಾಡಿನ ಮೂಲೆ ಮೂಲೆಯಿಂದ ಶರಣರು, ಸಂತರು ಬಂದು ಸೇರಿದಂತೆ ಪಂಚಗಣಾಧೀಶ್ವರರು, ಪುಣ್ಯಕ್ಷೇತ್ರವಾದಂತಹ ಹಂಪೆಯ ಪರಿಸರದ ಸುತ್ತಮುತ್ತ ನೆಲೆನಿಂತರು. ನಂತರ ಅವರು ಅಲ್ಲಿಂದ ತಮ್ಮ ಧರ್ಮ ಪ್ರಚಾರಕ್ಕಾಗಿ ಅಥವಾ ವೀರಶೈವ ಧರ್ಮವನ್ನು ಪುನರ್ ಉದ್ಧರಿಸುವ ಸಲುವಾಗಿ ತೊಡಗಿಕೊಂಡವರಾಗಿದ್ದಾರೆ.

"ಹಂಪೆ ಹಲವು ಮತಗಳ, ಪಂಥಗಳ ಒಂದು ಪವಿತ್ರ ಧಾರ್ಮಿಕ ಕ್ಷೇತ್ರವಾಗಿತ್ತು. ಜೈನ, ವೈಷ್ಣವ, ಶೈವ ಹಾಗೂ ವೀರಶೈವ ಧರ್ಮಗಳಿಗೆ ಆಸ್ಥಾನದಲ್ಲಿ ರಾಜಾಶ್ರಯ ದೊರಕಿತು. ಆ ಸಂದರ್ಭದಲ್ಲಿ ಎಲ್ಲ ಧರ್ಮಕ್ಕಿಂತ ವೀರಶೈವ ಧರ್ಮದ ವರ್ಚಸ್ಸು ಅಧಿಕವಾಗಿತ್ತು. ರಾಜನಾದ ಪ್ರೌಢದೇವರಾಯ ವೀರಶೈವ ಧರ್ಮವನ್ನು ಹೆಚ್ಚು ಬೆಂಬಲಿಸಿದ. ಅಲ್ಲದೇ ಅವನ ಆಸ್ಥಾನದಲ್ಲಿದ್ದ ಮಂತ್ರಿಗಳು ಪಂಡಿತ ಪಾಮರರೆಲ್ಲರೂ ವೀರಶೈವ ಧರ್ಮವನ್ನು ಸಂಘಟಿಸಿ ಅದನ್ನು ಬೆಳೆಸಲು ಶ್ರಮಿಸಿದವರು. ಆ ವೇಳೆಯಲ್ಲಿ ಪೌರಾಣಿಕ ಹಿನ್ನೆಲೆಯಲ್ಲಿ ಹಲವು ಸಾಹಿತ್ಯ ಕೃತಿಗಳ ಮೂಲಕ ಆ ಧರ್ಮದ ತತ್ವಗಳನ್ನು ಪ್ರಚಾರಗೈದರು. ತೀರ್ಥಕ್ಷೇತ್ರವಾಗಿ ಪ್ರಸಿದ್ಧಿಪಡೆದ ಹಂಪೆಗೆ ಅಂದು ಆಂಧ್ರ ಹಾಗೂ ತಮಿಳುನಾಡಿನಿಂದ ಬಂದ ಶೈವ ಶಾಖೆಗಳು ಈ ಪರಿಸರದಲ್ಲಿ ನೆಲೆ ನಿಂತಿದ್ದಕ್ಕೆ ಹಲವು ಆಧಾರಗಳಿವೆ. ಅಲ್ಲದೆ ಕಾಪಾಲಿಕರು, ಕಾಳಮುಖರಂತಹ ಪಂಥಗಳು ಹಲವು ಸಾಧು ಸನ್ಯಾಸಿ, ಆರೂಢರು, ಅವಧೂತರಂತಹ ಮಹಾನುಭಾವಿಗಳು ಹಂಪೆಯಲ್ಲಿ

ಸ್ಥಾನಪಡೆದಿದ್ದರು."[೬] ಅವರ ನಂತರ ಬಂದವರು ಪಂಚಗಣಾಧೀಶ್ವರರು. ಇವರು ಸಹ ಎಡೆಯೂರು ಸಿದ್ಧಲಿಂಗ ಯತಿಯವರಿಂದ ಪ್ರೇರಣೆ ಪಡೆದುಕೊಂಡು ಹಂಪೆಯ ಪರಿಸರದಲ್ಲಿ ಕೆಲವು ದಿನಗಳ ಕಾಲ ನೆಲೆಸಿ ಆನಂತರ ಅಲ್ಲಿಂದ ಮುಂದೆ ಕೂಡ್ಲಿಗಿ ತಾಲ್ಲೂಕು ಕುಪ್ಪಿನಕೆರೆಗೆ ಪ್ರಯಾಣ ಬೆಳೆಸಿದರು.

**೨.೧. ಪಂಚಗಣಾಧೀಶ್ವರರ ಹೆಸರು ಮತ್ತು ವಿಶೇಷತೆ**

೧. ಗುರು ಬಸವೇಶ್ವರ (ಕೊಟ್ಟೂರು)

೨. ತಿಪ್ಪೇರುದ್ರಸ್ವಾಮಿ (ನಾಯಕನಹಟ್ಟಿ)

೩. ಕೋಲಶಾಂತಯ್ಯ (ಅರಸೀಕೆರೆ)

೪. ಕೆಂಪಯ್ಯ (ಹರಪನಹಳ್ಳಿ)

೫. ಮದ್ದಾನೇಶ್ವರ (ಕೂಲಹಳ್ಳಿ ಮತ್ತು ಗೋಣಿ ಬಸವೇಶ್ವರ)

"ಕರ್ನಾಟಕದಲ್ಲಿ ಜೈನಮತ ಪ್ರಬಲವಾಗಿದ್ದ ೬-೧೦ನೇ ಶತಮಾನಗಳ ಶಾಸನಾದಿಗಳಲ್ಲಿ ಜೈನ ಮುನಿಗಳ ಗುಂಪಿಗೆ, ಗಣ, ಗುಚ್ಛ, ಸಂಘ ಮೊದಲಾದ ಪಾರಿಭಾಷೆಯನ್ನು ಬಳಸಿರುವುದು ಕಂಡು ಬರುತ್ತದೆ. ಇಂಥದೇ ಪದ್ಧತಿ ಕಾಳಾಮುಖಾದಿ ಶೈವ ಪಂಥಗಳಲ್ಲಿಯೂ ಇತ್ತು. ಪರ್ಷೆ, ಸಂತತಿ, ಅಮ್ನಾಯ ಎಂಬ ಪರಿಭಾಷೆಗಳಿಂದ ಕರೆಯುತ್ತಾರೆ. ೧೨ನೇ ಶತಮಾನದ ಹಿರಿಯೂರು ಶಾಸನವೊಂದು ಕಾಳಾಮುಖರಿಗೆ 'ಗಣ'ಗಳೆಂದು ಹೇಳುತ್ತದೆ. ಕಾಳಾಮುಖ ಮಹೇಶ್ವರ ಗಣಂಗಳೆಂದರೆ 'ಜಂಗಮರೇ' ಎಂದು ಮಧುರಚೆನ್ನರು ಅಭಿಪ್ರಾಯಪಡುತ್ತಾರೆ."[೭]

"ಬಸವಣ್ಣನ ಹತ್ತು ವಚನಗಳಲ್ಲಿ ಮಾತ್ರಗಣ, ಅಮೃತಗಣ, ದೇವಗಣ, ಗಣ ತಿಂಥಿಣಿ, ಗಣನಾಥ, ಗಣಪದವಿ, ಗಣಮೇಳಾಪ, ಗಣೇಶ್ವರ ಎಂಬ ಪದಗಳು ಬಂದಿವೆ. ೭೭೭ ಅಮರಗಣಂಗಳು, ೧,೯೬,೦೦೦ ಜಂಗಮರು ಶಿವಗಣ ನಿತ್ಯತ್ವವನ್ನು ಗ್ರಹಿಸಿಕೊಡಲ್ಪಟ್ಟ ನಿಃಕಲ ಬ್ರಹ್ಮನೆಂಬ ಗಣಾಧೀಶ್ವರ ಎಂಬ ಅರ್ಥವನ್ನು ಹಂಪಿ ಪ್ರದೇಶದ ೧೯ನೇ ಶತಮಾನದ ಟೀಕಾಕಾರ ಕೊಟ್ಟಿದ್ದಾನೆ. 'ಗಣೇಶ್ವರ' ಎಂಬ ಬಸವಣ್ಣನ ಮಾತಿಗೆ ಈತ 'ಗಣಾಧೀಶ್ವರ' ಎಂಬ ಅರ್ಥವನ್ನೇ ನೀಡಿದ್ದಾನೆ."[೮] ಹೀಗೆ ಗಣ ಪರಿಕಲ್ಪನೆ ಕುರಿತಾಗಿ ಮಾಹಿತಿ ದೊರೆಯುತ್ತದೆ.

"ಕೊಟ್ಟೂರಯ್ಯ, ಕೋಲಶಾಂತಯ್ಯ, ರಾಮಪ್ಪೊಡೆಯರೇ" ಎಂದು ಟೀಕಾಕಾರನ ಕಾಲಕ್ಕೆ ಮೂವರು ಗಣಾಧೀಶ್ವರರು ದಾಖಲೆಗೊಳ್ಳುತ್ತಿರುವ ಮಟ್ಟಿಗೆ ಪ್ರಸಿದ್ಧರಾಗಿದ್ದರೆಂದು ಊಹಿಸಲಾಗಿದೆ. ರಾಮಪ್ಪೊಡೆಯರೇ ತಿಪ್ಪೇರುದ್ರಸ್ವಾಮಿಗಳಿಗೆ ಈ ಹೆಸರು ಇತ್ತೇ? ಎಂಬುದು ಟೀಕಾಕಾರ 'ಗಣೇಶ್ವರ' ಎಂಬುದಕ್ಕೆ ಗಣಾಧೀಶ್ವರ"[೯] ಎಂಬರ್ಥಗಳಿವೆ.

ಅಪರಿಮಿತ ಗಣದೊಡನೆ ಭೂಲೋಕಕ್ಕೆ ಬರುತ್ತಾನೆ ಬಸವ. ಈ ಪರಿಕಲ್ಪನೆ ಗಮನಾರ್ಹ. ನೂರೊಂದು ವಿರಕ್ತರ ಕಾಲದ ನಂತರ ಪಂಚಗಣಾಧೀಶ್ವರರು ಬರುತ್ತಾರೆ. ಪಂಚ ಅಲ್ಲ ಅಪರಿಮಿತ ಗಣಗಳೊಡನೆ ಭೂಮಿಗೆ ಬಂದರು ಎಂಬುದು. ಉತ್ತರ ಕರ್ನಾಟಕದ ಜಂಗಮರಿಗೆ ಹಳ್ಳಿಗಳಲ್ಲಿ ಐನಾರು (ಅಯ್ಯನವರು) ಅಪಗೋಳು, ಮಟದಾರು (ಮಠದವರು) ಎಂದೂ ಮಧ್ಯಕರ್ನಾಟಕದ ಬಳ್ಳಾರಿ ಮುಂತಾಡೆದೆ 'ಗಣಂಗಳು'

ಎನ್ನುತ್ತಾರೆ. ಗಣಂಗಳಿಗೆ ಅಧೀಶ್ವರರಾಗಿ ಅಂದರೆ ಜಂಗಮರಿಗೆ ಜಂಗಮರಾಗಿ ಐದು ಜನರಿದ್ದರೆಂದು ಕಲ್ಪಿಸಿಕೊಳ್ಳಬಹುದು. ಟೀಕಾಕಾರ ಐದು ಜನರ ಹೆಸರು ಹೇಳುವುದಿಲ್ಲ ಎಂಬುದು ಅಷ್ಟೇ ಮುಖ್ಯ. ಅಲ್ಲದೆ ಪಂಚಗಣಾಧೀಶ್ವರರು ಎಂಬ ಸ್ಪಷ್ಟ ಉಲ್ಲೇಖವೂ ಇಲ್ಲ. ಹೀಗೆ 'ಪಂಚ' ಅನ್ನುವ ಪರಿಭಾಷೆ ವೀರಶೈವ ಲಿಂಗಾಯತದಲ್ಲಿ ವಿಶಿಷ್ಟವಾದುದಾಗಿದೆ.

ವೀರಶೈವ ಧರ್ಮದ ತಾತ್ವಿಕ ಚಿಂತನೆ ಮತ್ತು ಧಾರ್ಮಿಕ ಮಾರ್ಗಗಳಿಗೆ ಪೂರಕವಾಗಿ ನೈತಿಕ ನಿಯಮಗಳಿವೆ. ಅವುಗಳನ್ನು ಪಂಚಾಚಾರಗಳೆಂದು ಕರೆಯುತ್ತಾರೆ. ೧. ಲಿಂಗಾಚಾರ ೨. ಸದಾಚಾರ ೩. ಗಣಾಚಾರ ೪. ಶಿವಾಚಾರ ೫. ಭೃತ್ಯಾಚಾರ ಇವುಗಳನ್ನು ಪಂಚಾಚಾರ್ಯ ಎಂದು ಕರೆಯುವರು. ಲಿಂಗನಿಷ್ಠೆ, ಸದಾಚಾರದಲ್ಲಿ ಒಳ್ಳೆಯ ಆಚಾರದ ಅನುಷ್ಠಾನ, ಗಣಚಾರದಲ್ಲಿ ವ್ಯಕ್ತಿ ಸಮಾಜದ ಮಧುರ ಸಂಬಂಧ, ಸಹಕಾರ ತತ್ವ, ಶಿವಾಚಾರದಲ್ಲಿ ಎಲ್ಲರನ್ನೂ ತನ್ನಂತೆ ಕಾಣುವ ಶಿವತತ್ವ, ಎಲ್ಲರಿಗೂ ಒಳಿತನ್ನುಂಟು ಮಾಡುವ ನಡವಳಿಕೆ. ಭೃತ್ಯಾಚಾರದಲ್ಲಿ ತಾನು ಸಮಾಜ ಸೇವಕನೆಂಬ ಭಾವನೆ ಬೆಳೆದು ನಿಸ್ವಾರ್ಥ ಸೇವೆ ಸಲ್ಲಿಸುವುದೇ ಭೃತ್ಯಾಚಾರ. ಧರ್ಮದ ಉದಾತ್ತ ನಿಲುವಿಗೆ ವ್ಯಕ್ತಿ ಏರಬೇಕಾದರೆ ಧಾರ್ಮಿಕ ಸಾಧನೆಯಲ್ಲಿ ಆಚಾರ-ವಿಚಾರ-ನಿಷ್ಠೆ ಈ ಮೂರು ಬೇಕಾಗುತ್ತದೆ. ವೀರಶೈವ ಸಾಹಿತ್ಯದಲ್ಲಿ ಐದು ಎಂಬ ಸಂಖ್ಯೆ ತುಂಬಾ ಪವಿತ್ರವಾದುದು ಎನ್ನುವ ನಂಬಿಕೆಯಿದೆ. ಪಂಚಾಕ್ಷರಿ ಮಂತ್ರ, ಶಿವನ ಪಂಚಮುಖ ಎಂಬ ಮಾತುಗಳನ್ನು ಕಾಣಬಹುದು.

೧೯ನೇ ಶತಮಾನದಲ್ಲಿ ವೀರಶೈವ ಧರ್ಮ ಸಾಂಸ್ಕೃತಿಕ ಅನನ್ಯತೆಯನ್ನು ಕಟ್ಟಿಕೊಳ್ಳುವಾಗ ಈ ಪರಂಪರೆಯನ್ನು ಅಷ್ಟೇನೂ ಗಂಭೀರವಾಗಿ ಪರಿಗಣಿಸಲಿಲ್ಲ. ಈ ಕಾರಣದಿಂದಲೇ ಜನಪದ ಪರಂಪರೆಯಲ್ಲಿ ಬಹುದೊಡ್ಡ ಪರಂಪರೆಯಾಗಿ ಬೆಳೆಯಲು ಕಾರಣವಾಗಿದೆ. ಪಂಚಗಣಾಧೀಶ್ವರರು ಜನಪದ ಪರಿಕಲ್ಪನೆಯಲ್ಲಿ ಐದು ಎಂಬ ಸಂಖ್ಯೆಗೆ ವಿಶೇಷವಾದ ಸ್ಥಾನವನ್ನು ಕಲ್ಪಿಸಿದ್ದಾರೆ. ಜನಪದರು ತಮ್ಮ ನೆಲೆಯೊಳಗೆ ಪಂಚಗಣಾಧೀಶ್ವರರು ಎಂದು ಕರೆದಿದ್ದಾರೆ.

೧೨ನೇ ಶತಮಾನದ ನಂತರ ವೀರಶೈವದ ಪ್ರಾಬಲ್ಯದಡಿಯಲ್ಲಿ ಬಹುಪಾಲು ಪಂಥಗಳು ಸಮ್ಮಿಳಿತಗೊಂಡವು. ಕರ್ನಾಟಕದಲ್ಲಿ ನಾಥರು, ಆರೂಢರು, ನೂರೊಂದು ವಿರಕ್ತರು, ಆವಧೂತರು, ಶಾಕ್ತರು, ಲಾಕುಳರು 'ಪಂಚಗಣಾಧೀಶ್ವರರು, ಅವಧೂತ' ಪರಂಪರೆಯವರಾಗಿ ಕಂಡುಬರುತ್ತಾರೆ. ಸಾಮಾಜಿಕ ಕಾರ್ಯ ಚಟುವಟಿಕೆಗಳಿಗೆ ತಮ್ಮನ್ನು ಅರ್ಪಿಸಿಕೊಂಡಿದ್ದರು. ಕೊನೆಗೆ ತಾವು ಅಳಿದ ಮೇಲೆ ಮಠಸ್ಥಾನಗಳು ದೇಗುಲಗಳ ಸ್ವರೂಪವನ್ನು ಪಡೆದವು. ಆಚರಣಾತ್ಮಕ ಜಾನಪದೀಯ ಪಂಥವನ್ನು ರಚಿಸಿಕೊಂಡವು.

ಕ್ರಿ.ಶ.೧೪-೧೫ನೇ ಶತಮಾನದ ಹಂಪಿಯಲ್ಲಿದ್ದ ನೂರೊಂದು ವಿರಕ್ತರು, ಈ ನಾಥ ಯೋಗಿಗಳಿಗೆ ತುಂಬಾ ಹತ್ತಿರವಾದವರು. 'ಹಸಿವಾದೊಡೆ ಭಿಕ್ಷಾನ್ನಗಳುಂಟು ತೃಷೆಯಾದೊಡೆ ತೊರೆಬಾವಿಗಳುಂಟು, ಶಯನಕ್ಕೆ ಹಾಳು ದೇಗುಲಗಳುಂಟು' ಎಂಬ ಅಕ್ಕಮಹಾದೇವಿಯ ವಚನದಂತೆ ನೂರೊಂದು ವಿರಕ್ತರು ಬದುಕುತ್ತಿದ್ದ ಪರಿಯನ್ನು ನೋಡಿದರೆ ಇವರು ನಾಥಪಂಥದವರಾಗಿ ಕಾಣುವರು. ಡಾ.ಕಲಬುರ್ಗಿಯವರು ಹೇಳುವಂತೆ

ನಾಥ ಪಂಥದ ಆಧ್ಯಾತ್ಮ ಜೀವಿಗಳು ಅವಧೂತರಾಗಿರುವರು. "ಅವಧೂತ ಪಂಥ ಎಂಬ ಪದವು ಪ್ರಾಚೀನ ಕಾಲದಿಂದಲೂ ಬಳಕೆಯಾಗಿದೆ. ಅಲ್ಲದೆ ಪಂಪನಿಂದ ಹಿಡಿದು ಇಂದಿನವರೆಗೂ ವಿಶಿಷ್ಟ ರೀತಿಯಲ್ಲಿ ಬಳಕೆಯಾಗುತ್ತಲೇ ಬಂದಿದೆ. ಆದರೆ ಅದು ಹೆಚ್ಚು ಜನಪ್ರಿಯಗೊಂಡದ್ದು ೧೭-೧೮ನೇ ಶತಮಾನದಲ್ಲಿ. ಮಧ್ಯಕಾಲೀನ ಸಂದರ್ಭದಲ್ಲಿ ಶರಣ ಸೂಫಿ ಪಂಥಗಳಂತೆ ಈ ಅವಧೂತ ಪಂಥವು ಬೆಳೆದು ಬಂದಿರುವ ಸಾಧ್ಯತೆಗಳಿವೆ. ಹೀಗಾಗಿ 'ಅವಧೂತ' ಎಂದರೆ ಸಂಸಾರ ಬಂಧನದಿಂದ ದೂರವಾಗಿ ಆತ್ಮನಲ್ಲಿಯೇ ವಿಹರಿಸುವವನು. ವರ್ಣಾಶ್ರಮಗಳನ್ನು ಮೀರಿದವನು, ಗುರುವಿನ ಮೂಲಕ ಸದ್ಗತಿಯನ್ನು ಹೊಂದಿದವನು ಎಂಬರ್ಥಗಳಿವೆ. ಮತ್ತೊಂದು ಅರ್ಥದಲ್ಲಿ 'ಅವಧೂತ' ಎಂದರೆ ಎಲ್ಲವನ್ನು ಕಳೆದುಕೊಂಡವನು. ಎಲ್ಲವನ್ನು ತೊರೆದವನು ಎಂದು, ನಾವು ಭೇದ ಭಾವಗಳ ಜೊತೆಗೆ ಬದುಕಿದ್ದೇವೆ. ಇಂತಹ ಭೇದಗಳನ್ನು ಬಿಟ್ಟವನನ್ನೇ ಅವಧೂತ ಎಂದು ಕರೆಯುತ್ತಾರೆ. ಜಾತಿ, ವರ್ಗ, ಮೇಲು, ಕೀಳು, ನೀಚ, ಉಚ್ಚ, ನಾನು, ನೀನು ಇಂಥ ಭೇದಗಳೇ ಇಲ್ಲದವನು ಯಾರೋ ಅವನು ಅವಧೂತ"[೨೦]. ಇಂತಹ ಪಂಥಕ್ಕೆ ಒಳಪಟ್ಟವರು ಈ ಗಣಾಧೀಶ್ವರರು. ಸಂಸಾರಿಕ ಬದುಕಿನಿಂದ ಹೊರ ಬಂದವರನ್ನು ಅವಧೂತರೆನ್ನಲಾಗಿದೆ.

ನೂರೊಂದು ವಿರಕ್ತರ ನಂತರ ಬರುವ ಪಂಚಗಣಾಧೀಶ್ವರರು ವಿರಕ್ತರ ಸಾಲಿನಲ್ಲಿ ಸೇರುವವರಾಗಿದ್ದಾರೆ. ಅವರ ಬದುಕಿನ ಕ್ರಮಗಳು ವಿರಕ್ತರನ್ನು ಹೋಲುತ್ತವೆ. ಪಂಚಗಣಾಧೀಶ್ವರರು ಅವಧೂತರೆಂದು ಗುರುತಿಸಲಾಗಿದೆ. "ಸಾಧಕನಲ್ಲಿ ಭಕ್ತಿ ಹಾಗೂ ಜ್ಞಾನ ಪಕ್ವವಾಗಿದ್ದರೆ ಮತ್ತು ದೈವಾನುಗ್ರಹ ದೊರೆತರೆ ಆಧ್ಯಾತ್ಮದಲ್ಲೂ ಮಹಾನ್ ಜಿಗಿತ ಸಂಭವಿಸಬಹುದು. ತನ್ಮೂಲಕ ಅಜ್ಞಾನ ಮಾಯವಾಗುತ್ತದೆ. ದೈವಾನುಗ್ರಹ ಇಳಿದು ಬಂದಾಗ ಅಸಾಧ್ಯಗಳು ಸಾಧ್ಯವಾಗುತ್ತವೆ. ಅದು ಬರಬೇಕಾದರೆ ಸಾಧಕನ ಅಸ್ತಿತ್ವದಲ್ಲಿ ಭಕ್ತಿ ತುಂಬಿರಬೇಕು. ಭಕ್ತಿಯ ಶಕ್ತಿ ತರ್ಕಾತೀತವಾದುದು. ಸಂತರ ಜೀವನ ಚರಿತ್ರೆಗಳನ್ನು ಪರಿಶೀಲಿಸಿದರೆ, ಅಲ್ಲಿ ಅನೇಕ ಪವಾಡಗಳು ಗೋಚರಿಸುತ್ತವೆ."[೨೧] ಮಹಾತ್ಮರು ಸಿದ್ಧಿ, ಸಾಧನೆಗಳ ಮೂಲಕ ಅದ್ಭುತ ಶಕ್ತಿಯನ್ನು ಪಡೆದುಕೊಂಡಾಗ ಅಸಾಮಾನ್ಯವಾದಂತಹ ಘಟನೆಗಳು ಘಟಿಸುತ್ತವೆ. ಅವುಗಳಲ್ಲಿ ರೋಗ, ಬರಗಾಲ, ಸಾವು, ಪುತ್ರಸಂತಾನ ಹೀಗೆ ಮುಂತಾದ ಜನಪರ ಕೆಲಸಗಳನ್ನು ಮಾಡಿ ಜನತೆಯ ಕಷ್ಟಗಳಲ್ಲಿ ಪರಿಹಾರ ನೀಡುವಂತಹ ಕೆಲಸವನ್ನು ಸಂತರು ಮಾಡುತ್ತಿದ್ದರು. ಈ ಎಲ್ಲಾ ಕಾರಣಗಳಿಂದ ಅವರು ಮಾಡಿದಂತಹ ಪವಾಡಗಳಿಗೆ ಬೆರಗಾದ ಜನ ಅವರಿಗೆ ಶರಣಾಗಿ ಭಕ್ತಿಯನ್ನು ಸಲ್ಲಿಸುತ್ತಿದ್ದರು.

ಪಂಚಗಣಾಧೀಶ್ವರರು ಪವಾಡಗಳನ್ನು ನಡೆಸುತ್ತ ಜನರ ಕಷ್ಟ ಪರಿಹಾರವನ್ನು ಮಾಡುತ್ತ ಇದ್ದರು. ಇಂತಹ ವ್ಯಕ್ತಿಗಳು ಜನರ ದೃಷ್ಟಿಯಲ್ಲಿ ಅಸಾಮಾನ್ಯ ವ್ಯಕ್ತಿಗಳಾಗಿ ರೂಪಿತವಾದರು. ಆ ಭಾಗದ ಜನತೆಗೆ ಸಾಂಸ್ಕೃತಿಕ ದೈವಿ ಪುರುಷರಾಗಿ ನೆಲೆನಿಂತರು. ಊರಿಂದ ಊರಿಗೆ ಸಂಚರಿಸುತ್ತಿದ್ದ ಅವಧೂತರನ್ನು ಕೊನೆಗೆ ಎಲ್ಲಿಯೂ ಹೋಗದಂತೆ ಊರಲ್ಲೇ ಮಠಮಾನ್ಯಗಳನ್ನು ಕಟ್ಟಿಸಿ ಅಲ್ಲಿಯೇ ಉಳಿಯುವಂತೆ ಮಾಡಿದರು. ಇವರಿಗೆ ಹಲವು ರೀತಿಯ ಪೂಜೆ ಪುನಸ್ಕಾರ ಮಾಡಿ ದಾನ ದತ್ತಿಗಳನ್ನು ನೀಡಿ ಇವರ ಕೀರ್ತಿಯನ್ನು ನಾಡಿನಾದ್ಯಂತ ಹಬ್ಬಿಸಿದರು. ಇವರು ತಮ್ಮ ಅಪಾರವಾದ ಪವಾಡಗಳಿಂದ ತನ್ನ ಮೂಲ ಹೆಸರನ್ನು

ಕಳೆದುಕೊಂಡು, ಜನರಿಂದ ತಾತ, ಅಜ್ಜ, ಅಪ್ಪ, ಕೆಲವೊಮ್ಮೆ ಊರಿನ ಹೆಸರಿನಿಂದಲೇ ಗುರುತಿಸಿಕೊಂಡಿದ್ದಾರೆ. ಅವಧೂತರನ್ನು ಕಡೆಗಣಿಸಿದ ಜನಸಾಮಾನ್ಯರು ಕೊನೆಗೆ ಅವರ ಅಪಾರ ಶಕ್ತಿಯನ್ನು ಮನಗಂಡು ತಲೆಬಾಗಿ ಪೂಜಿಸಲಾರಂಭಿಸಿದರು. ಅವಧೂತರು ಹುಚ್ಚರಂತೆ, ಅರೆಮರುಳರಂತೆ ಸದಾ ಸಂಚರಿಸುತ್ತಿದ್ದರು. ಸ್ಥಿರವಾದ ನೆಲೆಗಳಿಲ್ಲದ ಇವರಿಗೆ ಹಾಳು ಬಿದ್ದ ಗುಡಿ-ಗುಂಡಾರಗಳೇ ನೆಮ್ಮದಿಯ ಕೇಂದ್ರಗಳಾಗಿದ್ದವು. ಅವಧೂತ ಪರಂಪರೆಯಲ್ಲಿ ಬರುವ ಪಂಚಗಣಾಧೀಶ್ವರರಾದ ಗುರುಬಸವೇಶ್ವರ, ತಿಪ್ಪೇರುದ್ರಸ್ವಾಮಿ, ಮದ್ದಾನಸ್ವಾಮಿ, ಕೋಲಶಾಂತಯ್ಯ, ಕೆಂಪಯ್ಯ, ಮದ್ದಾನಸ್ವಾಮಿ ಮತ್ತು ಅವನ ಮಗ ಗೋಣಿಬಸವೇಶ್ವರರು ಇವರು ಪವಾಡಗಳ ಮೂಲಕ ಆ ಭಾಗದ ಜನರಲ್ಲಿ ಸಾಂಸ್ಕೃತಿಕ ನಾಯಕರುಗಳಾಗಿ ರೂಪಿತರಾದರು. ನಂತರದ ದಿನಗಳಲ್ಲಿ ಜನರು ದೈವದ ಸ್ಥಾನ ಕಲ್ಪಿಸಿ ಆರಾಧಿಸತೊಡಗಿದರು. ಹೀಗಾಗಿ ಪಂಚಗಣಾಧೀಶ್ವರರನ್ನು ಅವಧೂತರೆಂದು ಗುರುತಿಸಲಾಗಿದೆ.

ವಿಜಯನಗರ ಪತನಾನಂತರ ಕರ್ನಾಟಕದಲ್ಲಿ ಪಾಳೆಗಾರರ ವ್ಯವಸ್ಥೆ ಪ್ರಾರಂಭವಾಯಿತು. ಮಧ್ಯಕರ್ನಾಟಕದಲ್ಲಿ ಹರಪನಹಳ್ಳಿ ಪಾಳೆಗಾರರು, ಚಿತ್ರದುರ್ಗ ಪಾಳೆಗಾರರು, ಜರಿಮಲೆ ಪಾಳೆಗಾರರು, ಗುಡೇಕೋಟೆ ಪಾಳೆಗಾರರು, ನಾಯಕನಹಟ್ಟಿ ಪಾಳೆಗಾರರು ಹೀಗೆ ಪಾಳೆಗಾರರ ಅಸ್ತಿತ್ವ ಗೋಚರಿಸುತ್ತದೆ. ಪಾಳೆಗಾರರ ನಡುವೆ ಮೇಲಿಂದ ಮೇಲೆ ಯುದ್ಧಗಳು ಸಂಭವಿಸತೊಡಗಿದವು. ಈ ವೇಳೆಯಲ್ಲಿ ಪಾಳೆಗಾರರಿಗೆ ಅಪಾರ ಜನಮನ್ನಣೆ ಅವಶ್ಯಕವಾಗಿದ್ದಿತು. ಹೀಗಾಗಿ ಸಮಾಜದಲ್ಲಿ ಜನಪ್ರಿಯರಾಗಿದ್ದ ಧಾರ್ಮಿಕ ಸಂತರನ್ನು ಗೌರವಿಸುವುದರ ಮೂಲಕ ಜನ ಬೆಂಬಲ ಪಡೆಯುತ್ತಿದ್ದರು. ಧಾರ್ಮಿಕ ಸಂತರನ್ನು ಗೌರವಿಸಿದರು. ಇವರು ಪವಾಡಗಳ ಮೂಲಕ ಅಂದು ಜನರ ಮನಸ್ಸಿನಲ್ಲಿ ನೆಲೆನಿಂತರು.

### ೨.೨.ಪಂಚಗಣಾಧೀಶ್ವರರ ಮೂಲ

ಕರ್ನಾಟಕ ಹಲವು ಧರ್ಮಗಳ ಆಶ್ರಯ ತಾಣವಾಗಿತ್ತೆನ್ನುವುದಕ್ಕೆ ಇಲ್ಲಿ ಹಿಂದೂ, ಬೌದ್ಧ, ಜೈನ, ವೀರಶೈವ, ಸೂಫಿ ಹೀಗೆ ಮೊದಲಾದ ಧಾರ್ಮಿಕ ಪಂಥಗಳು ನೆಲೆನಿಂತಿದ್ದು ನಮಗೆ ಇತಿಹಾಸದಿಂದ ತಿಳಿದುಬರುತ್ತದೆ. ಮನುಷ್ಯ ತನ್ನ ಅಗತ್ಯಗಳಿಗೆ ಮತ್ತು ಅನಿವಾರ್ಯತೆಗಳಿಗೆ ತಕ್ಕಂತೆ ಧರ್ಮಗಳು ಹುಟ್ಟಿಸಿ ಹೊಸ ಧಾರ್ಮಿಕ ಸಿದ್ಧಾಂತಗಳಿಗೆ ದಾರಿ ಮಾಡಿಕೊಡುತ್ತ ಸಾಗಿದ್ದವು. ಮಧ್ಯಕಾಲೀನ ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯ ಸಂದರ್ಭದಲ್ಲಿ ೧೨ನೇ ಶತಮಾನದ ಶರಣ ಚಳುವಳಿಗೆ ಮಹತ್ವದ ಸ್ಥಾನವಿದೆ. “೧೨ನೇ ಶತಮಾನದ ಕ್ರಾಂತಿಯಲ್ಲಿ ಹೆಚ್ಚು ಜನ ದುಡಿಯುವ ವರ್ಗದವರಾಗಿದ್ದರು. ಅಂಬಿಗರ ಚೌಡಯ್ಯ, ಆಯ್ದಕ್ಕಿ ಮಾರಯ್ಯ, ಜೋದರ ಮಾಯಣ್ಣ, ಮೇದಾರ ಕೇತಯ್ಯ, ಬಹುರೂಪಿ ಚೌಡಯ್ಯ, ತುರುಗಾಹಿ ರಾಮಣ್ಣ, ನುಲಿಯ ಚಂದ್ರಯ್ಯ, ಡೋಹರ ಕಕ್ಕಯ್ಯ ಹೀಗೆ ಮೊದಲಾದ ಶರಣರನ್ನು ನೋಡಿದಾಗ ಇವರೆಲ್ಲ ವಿವಿಧ ಉತ್ಪಾದಕ ವೃತ್ತಿಯಿಂದ ಬಂದವರಾಗಿದ್ದರು. ಬಸವ, ಅಲ್ಲಮ, ಚೆನ್ನ ಬಸವಣ್ಣನಂತಹ ಶರಣರು, ಅಕ್ಕಮಹಾದೇವಿ, ನಾಗಲಾಂಬಿಕೆ, ನೀಲಮ್ಮ, ಆಯ್ದಕ್ಕಿ ಲಕ್ಕಮ್ಮನಂತಹ ಶರಣೆಯರು ಕ್ರಾಂತಿಯಲ್ಲಿ ಪಾಲ್ಗೊಂಡಿದ್ದರು”.[೨] ಕಲ್ಯಾಣ ಕ್ರಾಂತಿಯ ಪೂರ್ವದಲ್ಲಿ ಹೆಚ್ಚು ಪ್ರಸಿದ್ಧಿಯಿಂದ ಮೆರೆದಿದ್ದ ವೀರಶೈವ ಧರ್ಮ, ಕ್ರಾಂತಿಯ ನಂತರ ಅನೇಕ ಏಳು ಬೀಳುಗಳನ್ನು ಅನುಭವಿಸಬೇಕಾಯಿತು.

"೧೨ನೇ ಶತಮಾನದ ಶರಣರ ಕಾಲದಲ್ಲಿ ಕುಲೇಳು ಹದಿನೆಂಟು ಜಾತಿಗಳು ಒಂದೇ ಎಂದು ಸಾರಿದ್ದರೂ ನಂತರದ ಶತಮಾನದಲ್ಲಿ ವೀರಶೈವ ಧರ್ಮ ಸಾಂಸ್ಥಿಕ ಪ್ರಕ್ರಿಯೆಯಿಂದ ಒಡೆದು ಹೋಯಿತು. ವೀರಶೈವ ಧರ್ಮದ ಆಚಾರ ಮಾರ್ಗದಿಂದ ಅನೇಕ ಸಮುದಾಯಗಳು ಹೊರಗುಳಿದವು ೧೨ನೇ ಶತಮಾನದಲ್ಲಿ ಅದಕ್ಕೂ ಹಿಂದೆ ಲಾಕುಳ, ಕಾಳಾಮುಖ, ಪಾಶುಪತ, ಲೋಕಾಯತ ಪಂಥಗಳು ಜೀವಂತವಾಗಿದ್ದವು. ಲಕುಲೀಶರು ಹುಚ್ಚರಂತೆ ನಟಿಸುವ, ಹೌ ಹಾಕು ಎಂದು ಕೂಗುವ ಹೋರಿಯಂತೆ ಡುರುಕಿ ಹೊಡೆಯುವ ನಿದ್ರೆ ಬಂದಂತೆ ವರ್ತಿಸುವ ಆಚಾರವುಳ್ಳವರಾಗಿದ್ದರು. ಕಾಳಾಮುಖರು ತಲೆ ಬುರುಡೆಯಲ್ಲಿ ಊಟ ಮಾಡುವ ಭಸ್ಮವನ್ನು ಮೈಗೆ ಬಡಿದುಕೊಳ್ಳುವ ಸೆರೆಯ ಕೊಡ ಸ್ಥಾಪಿಸುವ ಮೊದಲಾದ ಆಚರಣೆವುಳ್ಳವರಾಗಿದ್ದರು. ಶಾಕ್ತ ಪಂಥೀಯರು ಪಂಚಮಕಾರಾದಿ ಪೂಜೆ ಮಾಡುತ್ತಿದ್ದರು. ಇವೆಲ್ಲ ವ್ಯವಸ್ಥೆ ನೀತಿ ನಿಯಮ, ಸ್ಥಿತಿ-ಗತಿಗಳನ್ನು ವಿರೋಧಿಸುವ ಭಯಾನಕವೆನ್ನುವಂಥ ಪಂಥದ ಕ್ರಮಗಳಾಗಿದ್ದವು"[೧೩]. ಕಲ್ಯಾಣ ಕ್ರಾಂತಿಯ ಪ್ರಭಾವದಿಂದ ಶರಣರೆಲ್ಲ ಚದುರಿ ಹೋಗಿದ್ದರಿಂದ ವೀರಶೈವ ಧರ್ಮಕ್ಕೆ ಬಲವಾದ ಪೆಟ್ಟುಬಿತ್ತು. ವೀರಶೈವ ಧರ್ಮವು ಒಂದು ಸ್ಪಷ್ಟ ರೂಪರೇಷೆಯನ್ನು ಕಂಡುಕೊಂಡದ್ದು ೧೨ನೆಯ ಶತಮಾನದ ಬಸವಾದಿ ಶಿವಶರಣರು ನಡೆಸಿದ ಜನತಾ ಆಂದೋಲನದಲ್ಲಿ. ಈ ಆಂದೋಲನದಲ್ಲಿ ತಿಳಿದವರು, ತಿಳಿಯದವರು, ಇಲ್ಲದವರು ಒಟ್ಟುಗೂಡಿ ನಡೆಸಿದ ಸಂಘಟನೆ, ಐತಿಹಾಸಿಕವಾದುದು. ಏಕೆಂದರೆ ಇದು ಕೆಲವು ವರ್ಷಗಳಲ್ಲಿ ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ, ಸಾಂಸ್ಕೃತಿಕ ರಂಗಗಳಲ್ಲಿ ಅತ್ಯದ್ಭುತವಾದ ಬದಲಾವಣೆಗಳನ್ನು ತಂದಿತು. ಅಲ್ಪ ಕಾಲಾವಧಿಯಲ್ಲಿ ಕಾಣಿಸಿಕೊಂಡಂತಹ ಈ ಮಾರ್ಪಾಡು, ವಿಶ್ವದ ಬೇರೆ ಯಾವ ಆಂದೋಲನದಲ್ಲಿ ಆದಂತೆ ತೋರುವುದಿಲ್ಲ. ಕಲ್ಯಾಣ ಕ್ರಾಂತಿಯಿಂದಾಗಿ ಎಲ್ಲೆಲ್ಲೂ ಭಯದ ವಾತಾವರಣ ತಲೆ ದೋರಿದ್ದರಿಂದಾಗಿ ಬಸವಾದಿ ಶಿವಶರಣರ ಸಂಘಟನೆ ಮುರಿಯಿತು. ಶಿವಶರಣರು ಕಲ್ಯಾಣದಿಂದ ಚದುರಿ ಹೋದರು. ಜೇನುಗೂಡಿಗೆ ಬೆಂಕಿ ಬಿದ್ದಾಗ ಜೇನು ಹುಳುಗಳು ಚೆಲ್ಲಾಪಿಲ್ಲಿಯಾದಂತೆ ಸಂಘಟನೆ ಶಕ್ತಿಗುಂದಿದರೂ ಬಸವಾದಿ ಶಿವಶರಣರ ಜೀವನಾದರ್ಶ ಬೋಧಿಸಿದ ತತ್ವಗಳು ಮರೆಯಾಗಲಿಲ್ಲ. ಎರಡುನೂರು-ಮೂರುನೂರು ವರ್ಷಗಳು ಶರಣರ ತತ್ವಗಳು ಗುಪ್ತಗಾಮಿನಿಯಾಗಿ ಹರಿಯಿತು. ಮತ್ತೆ ಹದಿನೈದನೇ ಶತಮಾನದಲ್ಲಿ ನೂರೊಂದು ವಿರಕ್ತರು ಸಂಘಟಿಸಲು ಕಾರಣಕರ್ತರಾದರು. ಹಂಪೆಯ ವಿಜಯ ನಗರ ಅರಸರ ಪ್ರೌಢದೇವರಾಯನ ಕಾಲದಲ್ಲಿ ನೂರೊಂದು ವಿರಕ್ತರು ಇದಕ್ಕೆ ಹೊಸ ಚೈತನ್ಯ ತಂದರು. ಹಂಪೆಯನ್ನು ಬಿಟ್ಟು ಹೋದ ವೀರಶೈವರನ್ನು ಪುನರ್ ಸಂಘಟಿಸಿದವರು ಎಡೆಯೂರು ಸಿದ್ಧಲಿಂಗೇಶ್ವರರು. ಈ ವೀರಶೈವೋದಯಕ್ಕೆ ಮತ್ತೆ ಬಸವಣ್ಣನೇ ಉದಿಸಿ ಬಂದಂತಾಯಿತು. ಈತ ಅಲ್ಲಮನಂತೆ ಸೌರ್ವಭೌಮನಾಗಿ, ಚನ್ನಬಸವಣ್ಣನಂತೆ ಷಟ್ಥಲಜ್ಞಾನ ಚಕ್ರವರ್ತಿಯಾಗಿ ವೀರಶೈವ ಧರ್ಮ ನಿರ್ಮಾಣ ಮಾಡಿದ ಪರಮಾವತಾರಿಯಾಗಿ ಮೂಡಿಬಂದ.

ಕ್ರಿ.ಶ. ೧೪ ಮತ್ತು ೧೫ನೇ ಶತಮಾನದ ಮಧ್ಯಕಾಲೀನ ಕರ್ನಾಟಕ ಸಂದರ್ಭದಲ್ಲಿ ಅಲಕ್ಷಿತ ಧಾರ್ಮಿಕ ಪಂಥಗಳು ನೆಲೆಯೂರಲು ಪ್ರಯತ್ನಿಸುತ್ತಿದ್ದವು. ಇವುಗಳಲ್ಲಿ ಕಾಳಾಮುಖರು, ಪಾಶುಪತರು, ನಾಥರು, ಆರೂಢರು, ಆವಧೂತ ಹಾಗೂ ಸೂಫಿಗಳಂತಹ ಹಲವಾರು ಪಂಥಗಳು ಬೆಳೆದು ಬಂದವು. ಅವುಗಳಲ್ಲಿ "ಸೂಫಿ-ನಾಥಸಿದ್ಧ ಪಂಥಗಳಾದ ಕೊಡೇಕಲ್ ಬಸವಣ್ಣ, ತಿಂಥಿಣಿ ಮೋನಪಯ್ಯ, ಶಿರಹಟ್ಟಿ ಫಕ್ಕೀರೇಶ,

ಸಾವಳಗಿ ಶಿವಲಿಂಗ ಪಂಥಗಳು ಹಾಗೂ ಮೌಖಿಕ ಮಹಾಕಾವ್ಯವನ್ನು ಕಟ್ಟಿಕೊಂಡ ನೀಲಗಾರ ಪಂಥ (ಮಂಟೇಸ್ವಾಮಿ), ದೇವರ ಗುಡ್ಡರ ಪಂಥ (ಮಲೇ ಮಾದೇಶ್ವರ) ಬಾಲ ಬಸವರ ಪಂಥಗಳು (ಗೋಣಿಬಸವೇಶ್ವರ) ಮುಖ್ಯವಾದವುಗಳು".[೧೪] ಎಲ್ಲ ಪರಂಪರೆಗಳು ಸಮಾನತೆಯ ನೆಲೆಗಟ್ಟಿನ ಮೇಲೆ ಹೊಸ ಸಮಾಜವನ್ನು ನಿರ್ಮಿಸಲು ಪ್ರಯತ್ನಿಸಿದವು. ಹೀಗೆ ರೂಪಿತವಾದ ಪಂಥಗಳಲ್ಲಿ ಪಂಚಗಣಾಧೀಶ್ವರರ ಪಂಥ ಮಧ್ಯ ಕರ್ನಾಟಕದ ಬಳ್ಳಾರಿ, ಚಿತ್ರದುರ್ಗ, ಕೊಪ್ಪಳ, ದಾವಣಗೆರೆ, ಹಾವೇರಿ, ಗದಗ ಭಾಗದಲ್ಲಿ ನೆಲೆನಿಂತ ದೈವಿ ಪುರುಷರಾಗಿದ್ದಾರೆ.

ವಿಜಯನಗರೋತ್ತರ ಕಾಲದಲ್ಲಿ ಪತನದ ಹಾದಿ ಹಿಡಿದಿದ್ದ ವೀರಶೈವ ಧರ್ಮವನ್ನು ಉದ್ಧರಿಸಲು ಸಾಮಾಜಿಕ ಅಸಮಾನತೆ ಹೋಗಲಾಡಿಸಲು ಪಂಚಗಣಾಧೀಶ್ವರರು ಅವತರಿಸಿದರು. ಎಲ್ಲ ಶೈವ ಸಂತರಿಗೆ ಮೂಲ ನೆಲೆಯಾಗಿದ್ದ ಗುರು ಬಸವೇಶ್ವರರು ತಮಿಳ್ನಾಡಿನಿಂದ ಕರ್ನಾಟಕಕ್ಕೆ ಆಗಮಿಸಿದರು. "ಪುರಾಣದಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ಸರಸೀಪುರ, ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಹೊಸೂರು ಇವರ ತವರೂರಾಗಿದೆ. ಸರಸೀಪುರವು ಸೌಂದರ್ಯಪುರಿ ಎಂಬ ಇನ್ನೊಂದು ಹೆಸರನ್ನು ಹೊಂದಿತ್ತು. ಈಗ ಅದನ್ನು ಹೊಸೂರು ಎಂದು ನಾಮಕರಣ ಮಾಡಿ ತಮಿಳುನಾಡಿನ ಧರ್ಮಪುರಿ ಜಿಲ್ಲೆಗೆ ಸೇರಿಸಲಾಗಿದೆ ಎಂದು ಚಾರಿತ್ರಿಕ ಅಂಶಗಳಿಂದ ಸ್ಪಷ್ಟಪಡಿಸಲಾಗಿದೆ. ಧರ್ಮಪುರಿಯ ಹೊಸೂರಿನಿಂದ ಹೊರಟ ಶಿವಯೋಗಿ ಗುರು ಬಸವೇಶ್ವರರು ಕೋಲಾರ ಸೀಮೆಯ ಮೂಲಕ ತಮ್ಮ ಹಿರಿಯ ಸಮಕಾಲೀನರಾಗಿದ್ದ ಎಡೆಯೂರ ಸಿದ್ಧಲಿಂಗಯತಿಗಳಲ್ಲಿ ಕೆಲವು ದಿನಗಳು ಶಿಷ್ಯರಾಗಿದ್ದರು. ಹಾಗೆಯೇ ಮುಂದುವರಿದು ಅನೇಕ ಪ್ರದೇಶಗಳಲ್ಲಿ ಸಂಚರಿಸುತ್ತ ಆಂಧ್ರ, ಕಾಶ್ಮೀರ, ಕೇರಳ, ತಮಿಳುನಾಡುಗಳಲ್ಲಿ ಸಂಚರಿಸಿ ಶ್ರೀಶೈಲ, ಹಂಪಿಗಳ ಮೂಲಕ ನಿಜ ಸ್ವರೂಪ ಮರೆಮಾಡಿ ಹುಚ್ಚರಂತೆ ಕೊಟ್ಟೂರು ಪ್ರವೇಶಿಸುವ ವಿಚಾರ ಕೊಟ್ಟೂರು ಗುರು ಬಸವೇಶ್ವರ ಕಾವ್ಯದ ೭ನೇ ಸಂಧಿಯಲ್ಲಿದೆ."[೧೫] ಪಂಚಗಣಾಧೀಶ್ವರರು ತಮಿಳುನಾಡಿಂದ ಬಂದು ಹಲವು ಪ್ರದೇಶಗಳನ್ನು ಸಂಚರಿಸಿ ಕೊನೆಗೆ ಹಂಪೆ ಪ್ರದೇಶಕ್ಕೆ ಬಂದರು.

"ಧಾರ್ಮಿಕವಾಗಿ ಆಧ್ಯಾತ್ಮಿಕವಾಗಿ ತುಂಬ ಪ್ರಸಿದ್ಧಿ ಹೊಂದಿದ ಸ್ಥಳಗಳೆಲ್ಲ ಅನುಭಾವಿಗಳ, ಯೋಗಿಗಳ ವಾಸದ ಕೇಂದ್ರಗಳಾಗಿದ್ದವು. ಇದಕ್ಕೆ 'ಹಂಪೆ' ಸಹ ಹೊರತಾಗಿಲ್ಲ. ಅಂದು ಸಾಧು-ಸಂತರು, ಸತ್ಪುರುಷರು, ಸ್ವಾಮಿಗಳು, ಮುನಿಗಳು, ಯತಿಗಳು, ಗುರುಗಳು, ಸನ್ಯಾಸಿಗಳು ಹೀಗೆ ಇವರೆಲ್ಲ ಆಧ್ಯಾತ್ಮದ ಗುರಿಸಾಧನೆಗೆ ತೊಡಗಿದವರು"[೧೬]. ಧಾರ್ಮಿಕ ಪುರುಷರಿಗೆ ನಿಶ್ಚಿತವಾದಂತಹ ಒಂದು ನೆಲೆಯೆಂಬುದು ಇರಲಿಲ್ಲ. ಹೀಗಾಗಿ ಅವರು ಅಲೆಮಾರಿಗಳಾಗಿ ಒಂದು ಕಡೆ ನೆಲೆನಿಲ್ಲದೆ ಸಂಚರಿಸುವವರಾಗಿದ್ದರು. ನದಿಮೂಲ, ಋಷಿಮೂಲ ಹುಡುಕಲು ಸಾಧ್ಯವಿಲ್ಲ ಎಂಬುವಂತೆ. ಇವರ ಮೂಲದ ಬಗ್ಗೆ ನಿಖರವಾದಂತಹ ಲಿಖಿತ ಮಾಹಿತಿಗಳಿಲ್ಲದ ಕಾರಣ ಪಂಚಗಣಾಧೀಶ್ವರರ ಮೂಲವನ್ನು ಪುರಾಣದ ಹಿನ್ನೆಲೆಯಲ್ಲಿ ತಮಿಳುನಾಡಿನ ಮೂಲದವರು ಎಂದು ಗುರುತಿಸಲಾಗಿದೆ. ಹೀಗೆ ಇವರು ಅಲ್ಲಿಂದ ಸಂಚರಿಸುತ್ತ ಹಂಪೆಯ ಕಡೆ ಬಂದವರು.

### ೨.೩. ಪಂಚಗಣಾಧೀಶ್ವರರ ಪ್ರೇರಣೆ ಮತ್ತು ಪ್ರಭಾವಗಳು

೧೨ನೇ ಶತಮಾನದ ಹೊತ್ತಿಗಾಗಲೇ ಕರ್ನಾಟಕದಲ್ಲಿ ಬೌದ್ಧಧರ್ಮ ಕಣ್ಮರೆಯಾಗಿತ್ತು. ಜೈನಧರ್ಮ

ಅತಿಯಾದ ಅಹಿಂಸೆ, ಅದರ ಕಟ್ಟುನಿಟ್ಟಿನ ಜೀವನಕ್ರಮದಿಂದ ಬೇಸತ್ತಿದ್ದರು ಮಹಿಳೆಯರನ್ನು ಕಡೆಗಣಿಸಿದ್ದು, ರಾಜಾಶ್ರಯವನ್ನು ಬಯಸುತ್ತಿದ್ದುದರಿಂದ ಜನಸಾಮಾನ್ಯರಿಂದ ದೂರಾಗಲಾರಂಭಿಸಿತ್ತು. "ವೈದಿಕ ಧರ್ಮ ಕಾಲಕಾಲಕ್ಕೆ ಹೊಸ ರೂಪವನ್ನು ಪಡೆಯುತ್ತಾ ಪ್ರಬಲವಾಗಿಯೇ ಇತ್ತು. ಅಲ್ಲದೆ ವರ್ಣಾಶ್ರಮ ಪದ್ಧತಿಯನ್ನು ಅನುಸರಿಸುವ ಮೂಲಕ ದುಡಿಯುವ ವರ್ಗವನ್ನು ಕೀಳಾಗಿ ಕಾಣುತ್ತಿತ್ತು. ದೇವಾಲಯಗಳು ಅದಕ್ಕೆ ಹೊಂದಿಕೊಂಡ ಪ್ರಾಚೀನ ಶೈವ ಮಠಮಾನ್ಯಗಳು ಸಂಪದ್ಭರಿತವಾಗಿ ಸಮಾಜದ ಅಧಿಕಾರವನ್ನು ಹಿಡಿತದಲ್ಲಿಟ್ಟುಕೊಂಡಿದ್ದವು. ಭೂ ಮಾಲೀಕರು ಪ್ರಭುತ್ವ ಮತ್ತು ಸಮಾಜದ ನಡುವೆ ಮಧ್ಯವರ್ತಿಗಳಾಗಿದ್ದರು. ಈ ಭೂಮಾಲೀಕ ವರ್ಗವು ರೈತರನ್ನು, ದುಡಿಯುವ ವರ್ಗವನ್ನು ಸುಲಿಯುತ್ತಿತ್ತು. ಪುರೋಹಿತಶಾಹಿ ಶಕ್ತಿ ಮತ್ತು ಭೂ ಮಾಲಿಕತ್ವದ ಶೋಷಣೆಯಿಂದ ಬೇಸತ್ತ ಬಹುಸಂಖ್ಯಾತ ದುಡಿಯುವ ವರ್ಗದ ರೈತರು, ಕುಶಲಕರ್ಮಿಗಳು, ಸಮಾಜದಲ್ಲಿ ಬದಲಾವಣೆಯನ್ನು ಬಯಸಿದ್ದರು."[೧೭] ಈ ವ್ಯವಸ್ಥೆಯಿಂದ ಹೊರಬಂದಂತ ಶ್ರೀಸಾಮಾನ್ಯ ಜನರು ೧೨ನೇ ಶತಮಾನದಲ್ಲಿ ಬಸವಣ್ಣನ ನಾಯಕತ್ವದಲ್ಲಿ ಅಂಬಿಗರ ಚೌಡಯ್ಯ, ಡೋಹರ ಕಕ್ಕಯ್ಯ, ಮಾದರ ಚೆನ್ನಯ್ಯ, ತುರುಗಾಹಿ ರಾಮಣ್ಣ, ನುಲಿಯ ಚಂದಯ್ಯ, ಬಹುರೂಪಿ ಚೌಡಯ್ಯ, ಮೋಳಿಗೆ ಮಾರಯ್ಯ, ಆಯ್ದಕ್ಕಿ ಮಾರಯ್ಯ, ಮೇದಾರ ಕೇತಯ್ಯ, ತುಳಿತಕ್ಕೊಳಗಾದ ಶ್ರಮಜೀವಿಗಳು, ಚೆನ್ನ ಬಸವಣ್ಣ, ಸಿದ್ಧರಾಮ, ಅಲ್ಲಮನಂತಹ ಕಾಯಕ ಜೀವಿಗಳು ಅಕ್ಕಮಹಾದೇವಿ, ನೀಲಮ್ಮ, ನಾಗಲಾಂಬಿಕೆ ಮೊದಲಾದವರಿದ್ದರು. ಜನರು ತತ್ವಸಿದ್ಧಾಂತ ಅನುಭವ ಹಾಗೂ ಆಲೋಚನೆಗಳನ್ನು ಸಾಹಿತ್ಯಿಕವಾಗಿ ಮಂಡಿಸಲು ಶಕ್ತವಾಗಿದ್ದ ಕಾಲಘಟ್ಟವನ್ನು ನಾವು ಈ ಹಿಂದೆ ನೋಡಲು ಸಾಧ್ಯವಿಲ್ಲ. ಈ ವಚನಗಳು ಭಾಷೆ ಆಲೋಚನೆ ಮತ್ತು ತಾತ್ವಿಕವಾಗಿ ಹೊಸ ಪರಂಪರೆಯನ್ನೇ ಸೃಷ್ಟಿಸಿದವು. ವ್ಯಾಪಾರಸ್ಥರು, ರೈತರು, ಕಸುಬುದಾರರು ವೀರಶೈವ ಧರ್ಮದಲ್ಲಿ ಸೇರಿಕೊಂಡು ಸಮಾಜದಲ್ಲಿ ತಮ್ಮ ನಡೆಯ ಮೂಲಕ, ವಚನಗಳ ಮೂಲಕ ಹೊಸ ಸ್ವರೂಪವನ್ನು ಕೊಡಲು ಪ್ರಯತ್ನಿಸಿದರು.

"೧೨ನೇ ಶತಮಾನದ ವಚನ ಸಾಹಿತ್ಯದಲ್ಲಿ ಮತ್ತೆ ಮತ್ತೆ ಮರುಕಳಿಸುವ ವಸ್ತುವೆಂದರೆ ಜಾತಿ. ಊಳಿಗಮಾನ್ಯ ವ್ಯವಸ್ಥೆಯು ಶ್ರಮದ ಮೌಲ್ಯವನ್ನು ದೋಚುವುದಕ್ಕೆ ಜಾತಿಯನ್ನೆ ಒಂದು ಮಾನದಂಡವನ್ನಾಗಿ ಬಳಸಿಕೊಂಡಿತ್ತು. ಹಾಗಾಗಿ ಜಾತಿ ಪದ್ಧತಿಯನ್ನು ಹೋಗಲಾಡಿಸಲು ಈ ಕಾಲದಲ್ಲಿ ಪ್ರಮುಖವಾಗಿ ಚಳುವಳಿ ಪ್ರಯತ್ನಿಸಿತು. ಬಸವಣ್ಣ ಬರೆದ ವಚನಗಳಲ್ಲಿ 'ಅಪ್ಪನು ನಮ್ಮ ಮಾದಾರ ಚೆನ್ನಯ್ಯ, ಬೊಪ್ಪನು ನಮ್ಮ ಡೋಹರ ಕಕ್ಕಯ್ಯ, ಚಿಕ್ಕಯ್ಯ ನಮ್ಮಯ್ಯ, ಕಾಣಯ್ಯ, ಅಣ್ಣನು ನಮ್ಮ ಕಿನ್ನರ ಬೊಮ್ಮಯ್ಯ ಎಂದು ಮತ್ತೆ ಮತ್ತೆ ಕೆಳವರ್ಗದೊಂದಿಗೆ ತನ್ನನ್ನು ಸಮೀಕರಿಸಿಕೊಳ್ಳಲು ಪ್ರಯತ್ನಿಸುವುದನ್ನು ಕಾಣಬಹುದು."[೧೮] ಜಾತಿ ಗುಂಪುಗಳಾಗಿ ಸಮಾಜವನ್ನು ವರ್ಗೀಕರಿಸಿದ್ದ ಪೂರ್ವಾಗ್ರಹಗಳ ವಿರುದ್ಧ ಚಳವಳಿ ದೊಡ್ಡ ಹೋರಾಟವನ್ನೇ ಸಂಘಟಿಸಿತು. ವೀರಶೈವವನ್ನು ಒಪ್ಪಿಕೊಂಡವರೆಲ್ಲ ತಮ್ಮ ಪೂರ್ವಾಶ್ರಮದ ಸಂಬಂಧಗಳನ್ನೆಲ್ಲಾ ಕಡಿದುಕೊಂಡು ಜಾತಿ ಆಧಾರಿತ ವಿಂಗಡನೆಯನ್ನು ತ್ಯಜಿಸಬೇಕಾಗಿತ್ತು. ಕೆಳವರ್ಗಗಳಲ್ಲಿ ಆಚರಣೆಯಲ್ಲಿದ್ದ ಅನಿಷ್ಟ ಪದ್ಧತಿಗಳನ್ನು ಖಂಡಿಸಲಾಯಿತು.

ವಿಜಯನಗರ ಕಾಲದ ರಾಜಕೀಯ ಪರಿಸ್ಥಿತಿ ಎಲ್ಲಾ ಹಿಂದು ಮತಧರ್ಮಗಳಿಗೆ ಅನುಕೂಲಕರ ವಾಗಿರಲಿಲ್ಲ. ಇಂಥ ಸ್ಥಿತಿಯಲ್ಲಿ ೧೫ನೇ ಶತಮಾನದಲ್ಲಿ ವೀರಶೈವ ಚಳುವಳಿ ಮತ್ತು ವಚನ ಸಾಹಿತ್ಯದ ಅಧ್ಯಯನ ಗಂಭೀರವಾಗಿ ನಡೆಯಿತು. ಇದು ಪ್ರೌಢದೇವರಾಯನ ಕಾಲದಲ್ಲಿ ಹಾಗೂ ನಂತರದ ದಿನಗಳಲ್ಲಿ ನೂರೊಂದು ವಿರಕ್ತರು ವೀರಶೈವವನ್ನು ಪ್ರಾಯೋಗಿಕ ನೆಲೆಯಲ್ಲಿ ಪುನರಧ್ಯಯನ ಮಾಡಲು ಯತ್ನಿಸಿದರು. ಇತಿಹಾಸವನ್ನು ಪುನರ್ ನಿರ್ಮಿಸಲೆತ್ನಿಸಿದರು. ಈ ಪ್ರಯತ್ನ ಬದಲಾದ ಕಾಲಸ್ಥಿತಿಯಲ್ಲಿ ನಡೆಯಬೇಕಿತ್ತು. ಅದರಲ್ಲಿ ನೆನಪುಳಿದವರು ಕೆಲವು ಆಧ್ಯಾತ್ಮ ಪುರುಷರು ಮಾತ್ರ. ಇವರಲ್ಲಿ ಮಧ್ಯಕರ್ನಾಟಕದ ಕೆಲವೆಡೆ ಪಂಚಗಣಾಧೀಶ್ವರರು ಜನಮನದಲ್ಲಿ 'ಹಸಿಹಸಿ'ಯಾಗುಳಿದರು. ವಿಜಯನಗರವನ್ನು ಬಿಟ್ಟು ಹೋದ ಹಲವು ಹತ್ತು ಲೀಲಾ ಪುರುಷರಲ್ಲಿ ಐವರು ಗಣಾಧೀಶ್ವರರೂ ಸೇರುತ್ತಾರೆ. ತೋಂಟದ ಸಿದ್ಧಲಿಂಗ ಯತಿಗಳ ನೇತೃತ್ವದ ವೀರಶೈವ ಸಂಘಟನೆಗೆ ಪ್ರೇರಣೆಯನ್ನು ಒದಗಿಸಿದವರು ನೂರೊಂದು ವಿರಕ್ತರು.

"ನೂರೊಂದು ವಿರಕ್ತರ ಕಾಲ ಒಂದು ದೃಷ್ಟಿಯಿಂದ ವೀರಶೈವ ಧರ್ಮದ ಪುನರುಜ್ಜೀವನಕ್ಕೆ ಕಾರಣವಾದಂತೆ ವಿಪುಲವಾದ ವೀರಶೈವ ಸಾಹಿತ್ಯ ಸೃಷ್ಟಿಗೂ ಪ್ರೇರಕವಾಯಿತು. ಬಸವಣ್ಣನ ಕಾಲಘಟ್ಟದಲ್ಲಿ ಅವನನ್ನು ಸುತ್ತುವರೆದಿದ್ದ ಶರಣರ ಸಾಮಾಜಿಕ ಮತ್ತು ಧಾರ್ಮಿಕ ಆಂದೋಲನವು ಕಲ್ಯಾಣದಲ್ಲಿ ಕೇಂದ್ರೀಕೃತವಾಗಿತ್ತು. ಕಲ್ಯಾಣದ ಕ್ರಾಂತಿಯ ನಂತರ ಇಡೀ ಶರಣ ಸಮುದಾಯ ಅಲ್ಲಿಂದ ಚದುರಿ ಕರ್ನಾಟಕದ ದಕ್ಷಿಣ ಭಾಗ ಮತ್ತು ಆಂಧ್ರಪ್ರದೇಶದ ಭಾಗಗಳನ್ನು ಸೇರಿಕೊಂಡಿತು. ಈ ವಿಪ್ಲವದಿಂದ ಚದುರಿದ ವಚನಗಳನ್ನು ಸಂಕಲಿಸುವುದು, ಸ್ಥಲಕಟ್ಟುಗಳನ್ನು ಸಂಯೋಜಿಸುವುದು, ಸಿದ್ಧಾಂತ ಪ್ರತಿಪಾದಿಸುವುದು, ಸೂತ್ರ ರಚನೆ ಮಾಡುವುದು, ತತ್ವಕಾವ್ಯಗಳನ್ನು ಬರೆಯುವುದು ಇನ್ನಿತರ ಕೆಲಸಗಳನ್ನು ನೂರೊಂದು ವಿರಕ್ತರು ಮಾಡಿದರು."[೧೯] ಇವರು ಸಾಹಿತ್ಯ ರಚನೆಯಲ್ಲಿ ತೊಡಗಿ ಹಲವಾರು ಸಾಹಿತ್ಯ ಕೃತಿಗಳನ್ನು ರಚಿಸಿದರು. ವೀರಶೈವಧರ್ಮ ಪ್ರೌಢದೇವರಾಯನ ಕಾಲದಲ್ಲಿ ಮತ್ತೆ ಸಾಂಸ್ಥಿಕ ರೂಪವನ್ನು ಪಡೆಯಿತು.

"ಪ್ರೌಢದೇವರಾಯನೇ ಸ್ವತಃ ವಿದ್ವಾಂಸನಾಗಿದ್ದು 'ಬ್ರಹ್ಮಸೂತ್ರ ವೃತ್ತಿ' ಎಂಬ ಟೀಕು ಗ್ರಂಥವನ್ನು ಬರೆದಿದ್ದಾನೆ. ಅಲ್ಲದೆ ಲಕ್ಕಣ್ಣ ದಂಡೇಶ (ಶಿವತತ್ವ ಚಿಂತಾಮಣಿ), ಕರಸ್ಥಲದ ವೀರಣ್ಣೊಡೆಯ (ಕರಸ್ಥಲದ ವೀರಣ್ಣೊಡೆಯರ ಕಂದ, ಲಿಂಗಸೂತ್ರದ ವಚನ, ಇಷ್ಟಲಿಂಗ ಚರಿತೆ), ಕರಸ್ಥಲದ ನಾಗಿದೇವ ಕರಸ್ಥಲ ನಾಗಿದೇವನ ತ್ರಿವಿದಿ, ಅಕ್ಷರ ಚೌಪದ, ಏಕ ವಿಂಶತಿ ದೀಕ್ಷಾವಿಧಾನ, ಮಡಿವಾಳಯ್ಯನ ತಾರಾವಳಿ, (ಕರಸ್ಥಲ ನಾಗಿದೇವನ ವಚನಗಳು), ಗುರುಬಸವ (ಶಿವಯೋಗಾಂಗ ತ್ರಿವಿಧಿ, ಸದ್ಗುಣ ರಹಸ್ಯ, ಕಲ್ಯಾಣೇಶ್ವರ ಸ್ವರೂಪಾಮೃತ, ವೃಷಭಗೀತೆ, ಅವಧೂತಗೀತೆ, ಮನೋವಿಜಯ ಕಾವ್ಯ, ಗುರುಬಸವಾರ್ಯರ ವಚನ), ಬತ್ತಲೇಶ್ವರ (ಬತ್ತಲೇಶ್ವರರ ಹಾಡುಗಳು), ನಿರ್ವಾಣಿ ಬೋಳೇಶ (ನಿರ್ವಾಣಿ ಬೋಳೇಶನ ಹಾಡುಗಳು), ಷಟ್‌ಸ್ಥಲ ನಿರ್ಣಾಯಕರಾದ ಮಾಗ್ಗೆಯ ಮಾಯಿದೇವ (ಏಕೋತ್ತರ ಷಟ್‌ಸ್ಥಲ, ವಿಶೇಷಾರ್ಥ ಪ್ರಕಾಶಿಕೆ, ಅನುಭವ ಸೂತ್ರ, ಪ್ರಭುಗೀತೆ, ಷಟ್‌ಸ್ಥಲ ಗದ್ಯ, ಶತಕತ್ರಯ, ಮಾಯಿ ದೇವರಾರ್ಯ ವಚನ), ವಚನ ಸಂಕಲನಕಾರರಾದ ಮಹಲಿಂಗದೇವ (ಏಕೋತ್ತರ ಶತಸ್ಥಲ), ಜಕ್ಕಣಾರ್ಯ (ನೂರೊಂದು ಸ್ಥಲ), ಟೀಕೆ

ವ್ಯಾಖ್ಯಾನಕಾರರಾದ ಕುಮಾರ ಬಂಕನಾಥ (ಷಟ್‌ಸ್ಥಲ ತಿಲಕ ಅಥವಾ ಪ್ರಭುದೇವರ ಟೀಕಿನ ವಚನ), ಕಲ್ಲುಮಠದ ಪ್ರಭುದೇವ (ಲಿಂಗಲೀಲಾ ವಿಲಾಸ ಚಾರಿತ್ರ್ಯ, ಪ್ರಭುದೇವರ ಮಂತ್ರಗೋಪ್ಯ), ಶ್ರೀಗಿರೀಂದ್ರ (ನೂರೊಂದು ಸ್ಥಲ ಟೀಕೆ), ಚಾಮರಸ (ಪ್ರಭುಲಿಂಗ ಲೀಲೆ), ಮೊದಲಾದವರು ವೀರಶೈವ ಸಾಹಿತ್ಯವನ್ನು ರಚನೆ ಮಾಡಿದರು. ಈ ನೂರೊಂದು ವಿರಕ್ತರ ಕಾಲಘಟ್ಟದಲ್ಲಿನ ಸಾಹಿತ್ಯವನ್ನು ಗಮನಿಸಿದರೆ, ಧಾರ್ಮಿಕ ತತ್ವ ಸಿದ್ಧಾಂತಗಳು, ಸಾಮಾಜಿಕ ಸಾಂಘಿಕ ಧೋರಣೆಗಳು ಸಾಹಿತ್ಯದ ವಿಭಿನ್ನ ಪ್ರಕಾರಗಳಲ್ಲಿ ರೂಪುಗೊಂಡಿದೆ."[೨೦]

ನೂರೊಂದು ವಿರಕ್ತರು ವೀರಶೈವ ಧರ್ಮಕ್ಕೆ ಹೊಸ ರೂಪವನ್ನು ಕೊಟ್ಟರು. ನೂರೊಂದು ವಿರಕ್ತರನ್ನು ಅನುಸರಿಸಿ ಪಂಚಗಣಾಧೀಶ್ವರರ ಪಂಥ ಪ್ರೇರಣೆ ಪಡೆದಿದೆ. ನೂರೊಂದು ವಿರಕ್ತರು ಮರುಳುತನದಿಂದ ಹುಚ್ಚರಂತೆ ಜನತೆಗೆ ಕಾಣಿಸಿಕೊಂಡರೊ ಹಾಗೆ ಪಂಚಗಣಾಧೀಶ್ವರರಲ್ಲಿ ಒಬ್ಬರಾದ ಕೊಟ್ಟೂರೇಶ, ತಿಪ್ಪೇರುದ್ರಸ್ವಾಮಿಗಳು ಸಹ ಮರುಳತನದಿಂದ ವರ್ತಿಸಿ ಜನತೆಯ ಮನದಲ್ಲಿ ನಿಂತವರು. ನೂರೊಂದು ವಿರಕ್ತರ ಪ್ರಭಾವವು ಇವರ ಮೇಲೆ ಆಗಿದೆ.

"ಚನ್ನವೀರಾಚಾರ್ಯ (ವಿಶೇಷಾನುಭವ ಷಟ್ಸ್ಥಲ), ಗುಬ್ಬಿಯ ಮಲ್ಲಣಾರ್ಯ (ಭಾವಚಿಂತಾರತ್ನ, ವೀರಶೈವಾಮೃತ ಪುರಾಣ), ಸಪ್ಪೆಯಾರ್ಯ (ಅಮೃತೇಶ್ವರ ಭಾಷ್ಯ), ಬೋಳು ಬಸವೇಶ (ಮಹಾಚಾರ್ಯ ವಚನಕಾರ), ವಿರಕ್ತ ತೋಂಟದಾರ್ಯ (ತೋಂಟದ ಸಿದ್ದೇಶ್ವರ ಪುರಾಣ), ಕವಿ ಹರೀಶ್ವರ (ಪ್ರಭುದೇವರ ಪುರಾಣ), ಘನಲಿಂಗದೇವ (ಘನಲಿಂಗದೇವನ ವಚನಗಳು), ಕಟ್ಟಿಗಿಹಳ್ಳಿ ಸಿದ್ಧಲಿಂಗಸ್ವಾಮಿ (ಏಕೋತ್ತರ ಸಾರ), ಜಿಗುನಿ ಮರುಳದೇವ (ಜಿಗುನಿ ಮರುಳದೇವರ ಸ್ವರ ವಚನಗಳು), ಮುರಿಗಾ ಶಾಂತವೀರ (ವೈರಾಗ್ಯ ಷಟ್ಪದಿ), ಇಮ್ಮಡಿ ಗುರುಸಿದ್ಧಸ್ವಾಮಿ (ಕೈವಲ್ಯ ಸೋಪಾನ, ನಾಮೈಕೋತ್ತರ ಶತಸ್ಥಲ, ಶಾಂತೇಶ (ತೋಂಟದ ಸಿದ್ದೇಶ್ವರ ಪುರಾಣ), ಗುರುನಂಜ (ಯಜರ್ವೇದ ಭಾಷ್ಯಟೀಕು), ವಚನಗಳ ಸಂಪಾದನಾಕಾರರಾದ ಚನ್ನಂಜೇ ದೇವರು, ಎಳಮಲೆಯ ಗುರುಶಾಂತದೇವ, ಸಂಪಾದನೆಯ ಸಿದ್ಧವೀರಣ್ಣೊಡೆಯ, ಸಂಪಾದನೆಯ ಬೋಳ ಬಸವದೇವರು (ಷಟ್ಸ್ಥಲ ಬ್ರಹ್ಮಾನಂದ ವಿರಕ್ತ ಚಾರಿತ್ರ), ಸಂಪಾದನೆಯ ಗುರುಲಿಂಗದೇವ (ಶೀಲವಂತನ ತ್ರಿವಿಧ ಟೀಕು), ಸಂಪಾದನೆ ಪರ್ವತೇಶ (ಚತುರಾಚಾರ್ಯ ಪುರಾಣ), ಶೂನ್ಯ ಸಂಪಾದನಕಾರರಾದ ಗುಮ್ಮಳಾಪುರದ ಸಿದ್ಧಲಿಂಗಯತಿ, ಗೂಳೂರು ಸಿದ್ಧವೀರಣ್ಣೊಡೆಯರು"[೨೧] ಹೀಗೆ ನೂರಾರು ಮಂದಿ ತಮ್ಮ ಕೃತಿಗಳ ಮೂಲಕ ವೀರಶೈವ ಧರ್ಮಕ್ಕೆ ಸಾಂಸ್ಥಿಕ ರೂಪ ನೀಡುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿದರು. ವೀರಶೈವ ಧರ್ಮದ ಬೆಳವಣಿಗೆ ಪಂಡಿತವರ್ಗದ ಶ್ರಮ ಅಧಿಕವಿದೆ. ಪಂಚಗಣಾಧೀಶ್ವರರು ೧೨ನೇ ಶತಮಾನದ ಶರಣರ ಆದರ್ಶಗಳು, ತತ್ವಗಳು, ವಿಚಾರಧಾರೆಗಳಿಂದ ಪ್ರಭಾವಿತರಾದವರು.

ಕರ್ನಾಟಕದ ಸೂಫಿ ಪರಂಪರೆಯಲ್ಲಿ ಅಲ್ಲಮಪ್ರಭು ಮತ್ತು ಚನ್ನಬಸವಣ್ಣನವರ ಹೆಸರುಗಳು ಪ್ರಸ್ತಾಪಿಸಲ್ಪಡುತ್ತವೆ. ಸೂಫಿಗಳಲ್ಲಿ ಬಹಳಷ್ಟು ಸಂತರನ್ನು ಅಲ್ಲಮನ ಅವತಾರವೆಂದೋ ಇಲ್ಲವೆ ಚನ್ನಬಸವಣ್ಣನ ಅವತಾರವೆಂದೋ ಗುರುತಿಸಲಾಗುತ್ತದೆ. ಅಲ್ಲಮಪ್ರಭು ಧಾರೆಯು ಸೂಫಿ ಅಥವಾ ನಾಥ

ಧಾರೆಗಳ ಜೊತೆ ಬೆರೆತು ಅನೇಕ ಸಂತರ ರೂಪಗಳನ್ನು ಸೃಷ್ಟಿಸಿದೆ. ಇವು ಬಂದೇ ನವಾಜರಂತೆ ಪೂರ್ಣ ಸೂಫಿಯೂ ಅಲ್ಲ ಅಥವಾ ಕದ್ರಿಯ ನಾಥಪಂಥದಂತೆಯೂ ಅಲ್ಲ. ಆ ಎರಡು ಪರಂಪರೆಯನ್ನು ಅರಗಿಸಿಕೊಂಡು ಅವುಗಳಿಗಿಂತ ಭಿನ್ನವಾದ ಅನುಭಾವಿ ಪರಂಪರೆ ಪಂಚಗಣಾಧೀಶ್ವರರದಾಗಿದೆ. ಕೊಡೇಕಲ್ಲು ಬಸವಣ್ಣ, ತಿಂಥಿಣಿ ಮೋನಪ್ಪ, ಶಿರಹಟ್ಟಿ ಫಕೀರಸ್ವಾಮಿ, ಸಾವಳಗಿ ಶಿವಲಿಂಗ, ಮಂಟೇಸ್ವಾಮಿ, ಮಲೇಮಾದೇಶ್ವರ ಈ ಪಂಥಗಳು ಕೆಳವರ್ಗವನ್ನೇ ಆಶ್ರಯಿಸಿದ್ದವು.

ಬಸವಣ್ಣ ಆಚಾರ ಮಾರ್ಗವನ್ನು ಕೇಂದ್ರವಾಗಿಸಿಕೊಂಡು ವೀರಶೈವ ಧರ್ಮಕ್ಕೆ ಒಂದು ಸಿದ್ಧಾಂತದ ರೂಪುಕೊಡಲು ವಚನಗಳನ್ನು ವೀರಶೈವ ಧರ್ಮದ ಚೌಕಟ್ಟಿಗೆ ತರುವ ಪ್ರಯತ್ನ ಒಂದು ದಿಕ್ಕಿನಲ್ಲಿ ನಡೆದರೆ, ಅದರಿಂದ ಹೊರಗುಳಿದ ಕೆಳವರ್ಗದ ಸಮುದಾಯಗಳು ಅಲ್ಲಮ ಬಸವರನ್ನು ಕೇಂದ್ರವಾಗಿಟ್ಟುಕೊಂಡು ತಮ್ಮ ಕಾಲದ ಸಾಂಸ್ಕೃತಿಕ ನಾಯಕರನ್ನು ಕಲ್ಯಾಣದ ನಾಯಕರೊಟ್ಟಿಗೆ ಸಮೀಕರಿಸುವ ಪ್ರಯತ್ನಮಾಡುವುದರೊಂದಿಗೆ ಪಂಥಗಳನ್ನು ಕಟ್ಟಿಬೆಳೆಸಿದ್ದು ಇನ್ನೊಂದು ದಿಕ್ಕಾಯಿತು. ಇವುಗಳಲ್ಲಿ ಮುಖ್ಯವಾಗಿ ಕೊಡೇಕಲ್ಲು ಬಸವಣ್ಣನ ಪರಂಪರೆ, ನೀಲಗಾರ ಪರಂಪರೆ ದೇವರಗುಡ್ಡರ ಪರಂಪರೆ ರೇವಣಸಿದ್ಧ ಪರಂಪರೆ ಹುಟ್ಟಿ ಬೆಳೆದವು.

ಈ ಎಲ್ಲಾ ಪಂಥಗಳು ಮಧ್ಯಕಾಲೀನ ಕರ್ನಾಟಕದಲ್ಲಿ ಉದಯಿಸಿದವು. ಕ್ರಿ.ಶ.೧೫ನೇ ಶತಮಾನವು ವಿಜಯನಗರ ಅರಸರ ವಿಜೃಂಭಣೆಯ ಆಳ್ವಿಕೆಯ ಕಾಲ. ಹಂಪೆಯು ವಿಜಯನಗರ ಅರಸರ ರಾಜಧಾನಿ. ಹಾಗೆ ಹಲವಾರು ಧಾರ್ಮಿಕ ಪಂಥಗಳ ರಾಜಧಾನಿಯೂ ಇದಾಗಿತ್ತು. ವೀರಶೈವ ಕವಿಗಳಿಗೆ ಆಶ್ರಯ ತಾಣವಾಗಿದ್ದ ಹಂಪಿ ಧಾರ್ಮಿಕ ಕ್ಷೇತ್ರವೂ ಸಹ ಆಗಿತ್ತೆಂಬುದನ್ನು ಮರೆಯುವಂತಿಲ್ಲ. ಸೂಫಿಸಂತರ ದರ್ಗಗಳಿರುವಂತೆಯೇ ನಾಥ ಪಂಥೀಯರ ಮಠಗಳು ಇವೆ. ಶೈವ ಮತ್ತು ವೀರಶೈವರ ಪಂಥಗಳು, ಮಠಗಳು, ದೇವಾಲಯಗಳ ಆಚರಣೆಗಳು ಇಲ್ಲಿ ಹೇರಳವಾಗಿ ಕಂಡುಬರುತ್ತವೆ. ಆದುದರಿಂದಲೇ ಇವುಗಳೆಲ್ಲವುಗಳ ಪ್ರಭಾವ ಸಹಜವಾಗಿ ಕೆಳವರ್ಗಗಳ ಸಾಂಸ್ಕೃತಿಕ ನಾಯಕರಾದ ಕೊಡೇಕಲ್ಲು ಬಸವಣ್ಣ, ತಿಂಥಿಣಿ ಮೊನಪ್ಪಯ್ಯ, ಅವರ ಪ್ರಭಾವ ಪಂಚಗಣಾಧೀಶ್ವರರ ಮೇಲೂ ಆಗಿದೆ. ಪಂಚಗಣಾಧೀಶ್ವರರ ದೇವಾಲಯಗಳು ಬಹುಪಾಲು ಸೂಫಿ ಪ್ರಭಾವಕ್ಕೆ ಒಳಗಾಗಿರುವುದನ್ನು ಕಾಣಬಹುದು. ದೇವಾಲಯಗಳು ದರ್ಗಾಗಳ ಆಕಾರದಲ್ಲಿಯೇ ಕಟ್ಟಲ್ಪಟ್ಟಿವೆ. ಎಲ್ಲವನ್ನು ಗಮನಿಸಿದಾಗ ಸೂಫಿಸಿದ್ಧರ ಪ್ರಭಾವ ಪಂಚಗಣಾಧೀಶ್ವರರ ಮೇಲಾಗಿರುವುದು ಕಂಡುಬರುತ್ತದೆ.

ಈ ರಾಜಕೀಯ ಚರಿತ್ರೆಯ ಹಿನ್ನೆಲೆ ನಮ್ಮ ಅವಲೋಕನದ ದೃಷ್ಟಿಯಿಂದ ತುಂಬ ಮಹತ್ವದ್ದು. ಏಕೆಂದರೆ ನಮ್ಮ ವಿವಿಧ ಜನಗಳ ಸಾಂಸ್ಕೃತಿಕ ಏಳು-ಬೀಳು, ಅಧಿಕಾರ, ಸ್ವರೂಪವನ್ನು ಅವಲಂಬಿಸಿತ್ತು. ಅಧಿಕಾರ ಹೊಸ ಹೊಸ ಕಾನೂನು ಕ್ರಮಗಳನ್ನು ಆಧರಿಸಿತ್ತು. ಮುಸ್ಲಿಂ ಮತದ ಆಗಮನದ ಪ್ರಭಾವ ಇವೆಲ್ಲಕ್ಕಿಂತ ಅಗಾಧ ಪರಿಣಾಮ ಬೀರಿತ್ತು. ವೀರಶೈವ ಸಮಾಜ ಮತ್ತು ಸಂಸ್ಕೃತಿಯ ಮೇಲೆ ಅಚ್ಚಳಿಯದ ಪ್ರಭಾವ ಬೀರಿತು. ೧೨ನೇ ಶತಮಾನದ ವೀರಶೈವ ವೈದಿಕರ ಸಮಾಜೋರ್ಥಿಕ ರಚನೆಯನ್ನು ಒಡೆದುಹಾಕಿ

ಇಂಥದೇ ವಿಭಿನ್ನ ಮಾದರಿಯೊಂದನ್ನು ಮುಂದಿಡುತ್ತದೆ. ಆಗಲೇ ಹೇಳಿದಂತೆ ಬೌದ್ಧ, ಜೈನ, ಮುಸ್ಲಿಂ, ದ್ರಾವಿಡ ಪಂಥಗಳ ಇತ್ಯಾತ್ಮಕಾಂಶಗಳನ್ನು ಅರಿತೊ, ಅರಿವಿಲ್ಲದೆಯೋ ಚಳವಳಿ ಬಳುವಳಿಯಾಗಿ ಪಡೆಯಿತು. ಒಟ್ಟಾರೆ ಹಲವಾರು ಪ್ರಗತಿಪರ ಪಂಥಗಳ ಇತ್ಯಾತ್ಮಕಾಂಶಗಳನ್ನು ಒಳಗೊಂಡಿದೆ ಎಂದು ಹೇಳುವ ಲಕ್ಷಣಗಳನ್ನು ತೋರಿಸುತ್ತಿರುವುದು ಅಚ್ಚರಿಯೆ. ಪ್ರತ್ಯೇಕವಾಗಿರುವ ಸಮಾನ ರಾಚನಿಕ ಘಟಕಗಳನ್ನು ಒಂದು ನಿರ್ದಿಷ್ಟ ಕಾಲಘಟ್ಟ ತೋರ್ಪಡಿಸುತ್ತದೆನ್ನುವುದು ಸಮಾಜೊಚಾರಿತ್ರಿಕತೆಯ ಒಂದು ಅತ್ಯಂತ ಮಹತ್ವದ ನಿಯಮವಾಗುತ್ತದೆ.

ಮಧ್ಯಕಾಲೀನ ಭಕ್ತಿ ಪಂಥಗಳಿಗೆ, ಅನುಭಾವಿಗಳಿಗೆ ಮೂಲ ಪ್ರೇರಣೆಗಳಾಗಿ ನಿಂತುದು ಜನಸಾಮಾನ್ಯರ ಬದುಕನ್ನ ಹಸನುಗೊಳಿಸಬೇಕೆಂಬ ಹಂಬಲ. ಹಾಗೂ ಜಿಡ್ಡುಗಟ್ಟಿದ ವ್ಯವಸ್ಥೆಯನ್ನು ಒಡೆದು ಹಾಕಿ ಸರ್ವಸಮಾನತೆಯ, ಸುಂದರ ಸುಖೀ ಸಮಾಜ ನಿರ್ಮಿಸಬೇಕೆಂಬ ಉತ್ಕಟ ಬಯಕೆ ಹೀಗಾಗಿ ಎಲ್ಲ ಅನುಭಾವಿಗಳು ಗಹನವಾದ, ಗೂಢವಾದ ಪರತತ್ವದ ರಹಸ್ಯವನ್ನು ಬದುಕಿನ ಬೆಡಗನ್ನು ಪ್ರಾಂತದ ದೇಶ ಭಾಷೆಯಲ್ಲಿ ಬಿಡಿಸಿ ಹೇಳಲು ಪ್ರಯತ್ನಿಸಿದರು. ಕರ್ನಾಟಕದ ಶರಣರು ವೈದಿಕ ಧರ್ಮದಲ್ಲಿರುವ ಕರ್ಮಕಾಂಡವನ್ನು, ವರ್ಣಾಶ್ರಮ ಪದ್ಧತಿಯನ್ನು, ವರ್ಗ, ವರ್ಣ, ಲಿಂಗಭೇದದಿಂದ ಕೂಡಿದ ಶೋಷಣೆಸಹಿತ ವ್ಯವಸ್ಥೆಯನ್ನು ಸಂಸ್ಕೃತ ಭಾಷೆಯ ಬಂಧುರತೆಯನ್ನು ಪ್ರತಿಭಟಿಸಿದರು. ಶೋಷಣೆರಹಿತ ಸರ್ವಸಮಾನತೆಯ ಸುಂದರ ಸಮಾಜವನ್ನು ಆವಿಷ್ಕಾರಗೊಳಿಸಲು ಯತ್ನಿಸಿದರು. ೧೨ನೇ ಶತಮಾನದ ಬೌದ್ಧಧರ್ಮ, ಜೈನಧರ್ಮ, ವೀರಶೈವ, ಸೂಫಿ, ಆರೂಢರು, ಆವಧೂತ, ಸಿದ್ಧಲಿಂಗಯತಿ, ನೂರೊಂದು ವಿರಕ್ತರಂತಹ ಅನೇಕ ಆಧ್ಯಾತ್ಮಿಕ ಪಂಥಗಳ ಪ್ರೇರಣೆ, ಪ್ರಭಾವ ಪಂಚಗಣಾಧೀಶ್ವರರ ಮೇಲೆ ಬೀರಿರುವುದನ್ನು ಕಾಣಬಹುದು.

**೨.೪. ಶೈವನಾಥ ಸಿದ್ಧರ ಪ್ರಭಾವ**

ಮಧ್ಯಕರ್ನಾಟಕದ ಬಳ್ಳಾರಿ, ರಾಯಚೂರು, ಧಾರವಾಡ, ಹಾವೇರಿ, ಚಿತ್ರದುರ್ಗ ಮೊದಲಾದ ಪ್ರದೇಶಗಳಲ್ಲಿ ನಾಥ ಪರಂಪರೆಯನ್ನು ಅನುಸರಿಸಿಕೊಂಡು ಬಂದವರೆಂದರೆ ಕೊಡೇಕಲ್ ಬಸವಣ್ಣ, ತಿಂಥಿಣಿ ಮೋನಪ್ಪಯ್ಯ, ನುಂಕೆಮಲೆ ಸಿದ್ದೇಶ್ವರ, ಅಲ್ಲದೆ ಪಂಚಗಣಾಧೀಶ್ವರರಲ್ಲಿನ ಕೂಲಹಳ್ಳಿ ಗೋಣಿಬಸವ, ಕೊಟ್ಟೂರು ಗುರುಬಸವ, ನಾಯಕನಹಟ್ಟಿ ತಿಪ್ಪೇಸ್ವಾಮಿ ಮುಂತಾದವರನ್ನು ನೋಡಬಹುದು. ನಾಯಕನಹಟ್ಟಿ ತಿಪ್ಪೇಸ್ವಾಮಿ ಸಿದ್ಧಪರಂಪರೆಯವನೆನ್ನಲು ಜಾತ್ರೆಯ ಸಮಯದಲ್ಲಿ ಹೊರಮಠದಲ್ಲಿ ಹಲವಾರು ಜನ ನಾಥರು, ಸಿದ್ಧರು, ಜೋಗಿಗಳು ಬರುತ್ತಾರೆ. ಮೂರು ದಿನಗಳ ಕಾಲ ಹೊರಮಠದಲ್ಲಿದ್ದು ಭಂಗಿ ಸೇವನೆ ಮಾಡುವುದನ್ನು ನೋಡಬಹುದು.

ಬ್ಯಾಡರಸಂಗಾಕೆ ಹೋದಾನೆ ತಿಪ್ಪಯ್ಯ
ಮದ್ದು ಮಾಂಸಗಳ ಮಾಡಂದ ಹೊರಮಠಕೆ
ಎಡಿಯೋ ತಿಪ್ಪಯ್ಯಗೆ ಇರಲೆಂದ

ಇಂದಿಗೂ ಸಹ ಹೊರಮಠದಲ್ಲಿ ಮಾಂಸ ಎಡೆ ಕೊಡುವುದನ್ನು ಕಾಣಬಹುದು. ಬೇಡರ ಪೂಜಾರಿಗಳು ಹೊರಮಠದ ಪೂಜೆ ಮಾಡುವರು. ಸಿದ್ಧ ಪಂಥದಲ್ಲಿನ ಯೋಗಿಗಳು ಸಾಮಾನ್ಯವಾಗಿ ವೈದಿಕ ವಿರೋಧಿ

ನೀತಿಯನ್ನು ಅನುಸರಿಸುತ್ತಾ ಬಂದವರು. ಅದರಲ್ಲೂ ಅವರು ಹೆಚ್ಚಾಗಿ ನಿಮ್ನವರ್ಗದಿಂದ ಬಂದವರು. ಅವರು ನಿತ್ಯ ಬದುಕಿನಲ್ಲಿ ತುಚ್ಛೀಕರಿಸಲ್ಪಟ್ಟ, ಕೀಳೆಂದು ಪರಿಗಣಿಸಲ್ಪಟ್ಟ ಅಂಶಗಳನ್ನು ತೆಗೆದುಕೊಂಡು ಮೌಲೀಕರಿಸುವ ಪ್ರಯತ್ನವನ್ನು ಮಾಡುತ್ತಾರೆ. ಸಿದ್ಧಪರಂಪರೆಯಲ್ಲಿ ಬೆಳೆದಿರುವ ನಾಯಕನಹಟ್ಟಿ ತಿಪ್ಪೇಸ್ವಾಮಿ ಮಾಂಸಹಾರವನ್ನು ಒಪ್ಪಿಕೊಳ್ಳುವುದರ ಮೂಲಕ ಆ ಜೀವನ ಪದ್ಧತಿಗೆ ಮಾನ್ಯತೆಯನ್ನು ನೀಡುತ್ತಾನೆ. ಆ ಹೀಗೆ ಈ ಭಾಗದ ಜೀವನ ಪದ್ಧತಿಯನ್ನು ಒಪ್ಪಿಕೊಳ್ಳುವುದರ ಮೂಲಕ ಬೇಡ ಮತ್ತು ಇತರೆ ಎಲ್ಲ ಜನಾಂಗಕ್ಕೆ ಮಾನ್ಯತೆ ನೀಡಿರುವುದನ್ನು ನೋಡುತ್ತವೆ. ಹೊರಮಠದ ಪೂಜೆಯನ್ನು ಬೇಡ ಜನಾಂಗದ ಜನರು ಮುಂದುವರಿಸಿಕೊಂಡು ಬಂದಿರುವುದನ್ನು ನಾಯಕನಹಟ್ಟಿಯಲ್ಲಿ ಕಾಣುತ್ತೇವೆ.

"ಸಿದ್ಧ ಪರಂಪರೆಯಲ್ಲಿ ತಿಪ್ಪೇ, ಮಾಂಸ, ಭಂಗಿ, ಹೆಂಡ ಇವುಗಳು ಮೌಲ್ಯಯುತವಾಗಿ ಬಿಡುತ್ತವೆ. ವೈದಿಕ ಪರಂಪರೆ ಕೀಳೆಂದು ಪರಿಗಣಿಸಲ್ಪಟ್ಟ ಇವುಗಳನ್ನು ಸಿದ್ಧ ಪರಂಪರೆಯು ಹಠದಿಂದ ಮೌಲೀಕರಿಸುತ್ತದೆ. ವೈದಿಕ ಪರಂಪರೆಯ ಮೌಲ್ಯಗಳ ಪಾವಿತ್ರ್ಯನಾಶ ಆಶಯಗಳು ಸಿದ್ಧಪರಂಪರೆಯಲ್ಲಿ ಪ್ರಧಾನವಾಗಿ ಕಾಣುತ್ತವೆ. ಅವಧೂತರಿಗೂ, ಮರುಳ ಸ್ಥಿತಿಗೂ ಸಂಬಂಧವಿರುವಂತಿದೆ. ಹಂಪೆಯ ಪರಿಸರದಲ್ಲಿನ ನೂರೊಂದು ವಿರಕ್ತರೂ ಕೂಡ ಈ ರೀತಿ ಅರೆಮರುಳ ಸ್ಥಿತಿಯವರಾಗಿದ್ದರು. ಒಂದು ಬಗೆಯ ವಾಮಾಚಾರದ ಶಿವೋಪಾಸಕರಂತಿರುವ ಇವರು (ನೂರೊಂದು ವಿರಕ್ತರು) ನಾಥ ಪಂಥಿಯರಂತೆ ಕಾಣುತ್ತಾರೆ."[೨೨] ಈ ಪಂಥದ ಸಂತರಿಗೆ ಅವಧೂತರೆಂದು ಹೆಸರು. ನೂರೊಂದು ವಿರಕ್ತರ ಅರೆಮರುಳು ಸ್ಥಿತಿಯು ಅವಧೂತರನ್ನೇ ನೆನಪಿಸುತ್ತದೆ. ಕೊಟ್ಟೂರು ಗುರುಬಸವ ಮತ್ತು ನಾಯಕನಹಟ್ಟಿ ತಿಪ್ಪೇಸ್ವಾಮಿ ಕೂಡ ಮರುಳುತನದಿಂದ ಕೂಡಿದವರಾಗಿದ್ದರು.

ನಾಯಕನಹಟ್ಟಿ ತಿಪ್ಪೇಸ್ವಾಮಿಯ ಜೀವನದಲ್ಲಿ ಮಾಡಿದ ಪವಾಡಗಳನ್ನು ನೋಡಿದರೆ ಈತನು ರಸ ಸಿದ್ಧನಿರಬೇಕು ಎನಿಸುತ್ತದೆ. ರಸ ಸಿದ್ಧರಿಗೂ, ನಾಥ ಸಿದ್ಧರಿಗೂ ಅಂತಹ ಭೇದವೇನೂ ಇಲ್ಲ. ನಾಯಕನಹಟ್ಟಿ ಮತ್ತು ಕೊಟ್ಟೂರಿನಲ್ಲಿ ಕೊಬ್ಬರಿ ಸುಡುವ ಆಚರಣೆಯು ಕೂಡ ಸಿದ್ಧ ಪರಂಪರೆಯ ನೆನಪನ್ನು ತರಿಸುತ್ತದೆ. ಕೂಲಹಳ್ಳಿಯ ಮದ್ದಾನಸ್ವಾಮಿ ಮತ್ತು ಆತನ ಮಗ ಗೋಣಿಬಸವನ ಜೀವನ ಸಾಧನೆಗಳಂತೂ ಇವರು ಶೈವನಾಥ ಸಿದ್ಧರ ಪ್ರಭಾವಕ್ಕೆ ಒಳಗಾಗಿರುವುದು ಕಂಡುಬರುತ್ತದೆ. ಅದರಲ್ಲೂ ಗೋಣಿಬಸವನ ಬದುಕು, ಒಕ್ಕಲಾಗಿಸುವ ಬಗ್ಗೆ ಬಾಲಬಸವರ ಕಾಲಜ್ಞಾನ ವಚನಗಳು, ಗೋಣಿಬಸವ ಕಾವ್ಯ, ಇವೆಲ್ಲವುಗಳ ಮೇಲೆ ಶೈವನಾಥ ಸಿದ್ಧರ ಪ್ರಭಾವ ದಟ್ಟವಾಗಿ ಕಾಣುತ್ತದೆ.

**೨.೫. ಪಂಚಗಣಾಧೀಶ್ವರರು ನೆಲೆ ನಿಂತ ಕ್ಷೇತ್ರಗಳು**

ಅಧ್ಯಾತ್ಮ ಪುರುಷರು ಸಂಚಾರಿ ಜೀವಿಗಳು. ಇವರ ನಡೆ ಭಿನ್ನ ಮಾದರಿಯಲ್ಲಿರುವುದು. ಹೀಗಾಗಿ "ಧಾರ್ಮಿಕ ಸಂತರಿಗೆ ಸ್ಥಿರವಾದ ನೆಲೆಗಳಿರಲಿಲ್ಲ. ಇವರದು ಅಸ್ಥಿರವಾದ ಬದುಕು. ತಮ್ಮ ಮನಸ್ಸಿಗೆ ಎಲ್ಲಿ ನೆಮ್ಮದಿ, ಆನಂದ ಮತ್ತು ಶಾಂತಿ ದೊರೆಯುವುದೋ ಅಲ್ಲಿ ನೆಲೆವೂರುವರು. ಒಂದು ವೇಳೆ ಅಲ್ಲಿ ಏನಾದರೂ ತಮ್ಮ ಶಾಂತಿಗೆ ಬಂಗ ಉಂಟಾಗುವಂತಹ ಸಂದರ್ಭಗಳಾದರೂ ತಮ್ಮ ಅಂತರಾತ್ಮಕ್ಕೆ ಗೊತ್ತಾದರೆ ಬೇರೊಂದು ಸ್ಥಳಕ್ಕೆ ಹೋಗಿ ನೆಲೆಸುವರು. ಹೀಗಾಗಿ ಇವರು ಜಂಗಮ ಸ್ವರೂಪಿಗಳಾಗಿದ್ದರು. ಈ ರೀತಿಯ ಮಹತ್ವದ ಆಧ್ಯಾತ್ಮಿಕ ಪರಿಸರವು ಪಂಚಗಣಾಧೀಶ್ವರರಲ್ಲಿ ಕಂಡುಬರುವುದು.

ಜಂಗಮ ಸ್ವಭಾವದ ಅನುಭಾವಿಗಳು ನಾಡಿನಾದ್ಯಂತ ಸಂಚರಿಸಿ ಜನಸಾಮಾನ್ಯರಿಗೆ ತಮ್ಮ ಅಪರೂಪದ ವ್ಯಕ್ತಿತ್ವವನ್ನು ಮನಗಾಣಿಸಿದವರು. ಸ್ಥಳದಿಂದ ಸ್ಥಳಕ್ಕೆ ಸಂಚರಿಸುವಾಗ ಜನರ ಕಷ್ಟ ಸುಖಗಳಲ್ಲಿ ಕೆಲವೊಮ್ಮೆ ಭಾಗಿಯಾಗಿ ಅವರ ಸಮಸ್ಯೆಯನ್ನು ಪರಿಹರಿಸಲು ಪ್ರಯತ್ನಿಸಿದವರು. ಈ ಮಹಾಮಹಿಮರು ಯಾರೂ ನೆಲೆಸಲು ಸಾಧ್ಯವಿಲ್ಲದ ಹಳೆಯದಾದ ಗುಡಿಗುಂಡಾರಗಳು, ಬೆಟ್ಟ, ಗುಡ್ಡ, ಗುಹೆಗಳೇ ಇವರಿಗೆ ವಾಸದ ನೆಲೆಗಳಾಗಿದ್ದವು."[೨೩] ಹೀಗೆ ಬಂದಂತಹ ಪಂಚಗಣಾಧೀಶ್ವರರು ಹಲವಾರು ಪ್ರದೇಶಗಳಲ್ಲಿ ಸಂಚರಿಸಿಕೊಂಡು ಆಂಧ್ರ, ಗರ್ಜುರ, ಕಾಶ್ಮೀರ, ಕೇರಳ, ತಮಿಳುನಾಡು, ಶ್ರೀಶೈಲ ಮೂಲಕ ಹಂಪಿಯ ಪರಿಸರದಲ್ಲಿ ಕೆಲಕಾಲ ನೆಲೆಸಿ ಅಲ್ಲಿಂದ ಅವರು ಸಂಚಾರ ಮಾಡುತ್ತ ಬಂದು ಕೂಡ್ಲಿಗಿ ತಾಲ್ಲೂಕು ಕುಪ್ಪಿನಕೆರೆಗೆ ಆಗಮಿಸಿದರು. "ಕುಪ್ಪಿನಕೆರೆ ಆಂಜನೇಯ ಸ್ವಾಮಿ ದೇವಾಲಯದಲ್ಲಿ ಒಂದು ರಾತ್ರಿ ವಿಶ್ರಮಿಸಲು ತಂಗಿದ್ದರು. ಆಂಜನೇಯನಿಗೆ ಶಿವತತ್ವೋಪದೇಶವಾಗದದ್ದು ಅರಿತು, ಈತನನ್ನು ಮೊದಲು ಲಿಂಗಾಂಗಿಯನ್ನಾಗಿ ಮಾಡಿ ನಂತರ ಈ ಸ್ಥಳದಲ್ಲಿ ನಾವು ವಾಸಮಾಡುವುದು ಸೂಕ್ತವೆಂದು ತಿಳಿದ ಕೂಡಲೆ ಮಾರುತಿಯ ಶಿಲಾ ವಿಗ್ರಹಕ್ಕೆ ಲಿಂಗ ಕಟ್ಟಲುನುವಾದರು. ಶಿಲಾಮೂರ್ತಿಯಾಗಿದ್ದ ಆ ಮಾರುತಿಯು ಈ ಶಿವಶರಣರ ಹಸ್ತಸ್ಪರ್ಶದಿಂದ ನಿಜರೂಪಧರಿಸಿ ಶಿವ ಶರಣರೇ ನಾನು ಶ್ರೀರಾಮನ ಪರಮ ಭಕ್ತನು. ಸದಾ ತಾರಕ ಮಂತ್ರ ಧ್ಯಾನ ಮಾಡುತ್ತಾ ಚಿರಂಜೀವಿಯಾದ ನನಗೆ ಲಿಂಗಧಾರಣೆ ಮಾಡುವುದೇಕೆ? ಎಂದು ಕೇಳಲಾಗಿ ಪಂಚಗಣಾಧೀಶ್ವರರು ಎಲೈ ಭಕ್ತ ಶ್ರೇಷ್ಠನೇ ನೀನು ರಾಮಧೂತನಾಗಿದ್ದರೂ ಈ ತಾರಕ ಮಂತ್ರ ಶಿವತತ್ವಮಯವಾದ್ದರಿಂದ, ಈ ಹಿಂದೆ ವೀರಭದ್ರನು ನಿನಗೆ ಲಿಂಗಧಾರಣೆ ಮಾಡಿ ಭಕ್ತಿಯಿಂದ ಪೂಜಿಸಿ, ಶಿವಾನುಗ್ರಹಕ್ಕೆ ಪಾತ್ರನಾಗಿ ವರಪ್ರಸಾದವನ್ನು ಪಡೆದನು. ಆತನ ಭಕ್ತನಾದ ನೀನು ಸಹ ಲಿಂಗ ಧರಿಸುವುದು ಯೋಗ್ಯ ಎಂದು ಹೇಳಿ ಶಿವಲಿಂಗ ಸಂಸ್ಕಾರವನ್ನು ಮಾಡಿ ಮಾರುತಿ ದೇವಸ್ಥಾನದಲ್ಲಿ ಅಂದಿನ ರಾತ್ರಿಯನ್ನು ಕಳೆದರು."[೨೪] ಆಂಜಿನೇಯ ಸ್ವಾಮಿಗೆ ಲಿಂಗಧಾರಣೆ ಮಾಡುವುದರ ಮೂಲಕ ಆಂಜನೇಯ ಭಕ್ತರನ್ನು ತಮ್ಮ ಕಡೆ ಸೆಳೆದುಕೊಂಡರು. ದಲಿತ ಮಹಿಳೆಯ ಮನೆಯಿಂದ ಪ್ರಸಾದ ಸ್ವೀಕರಿಸಿ ದಲಿತ ಮಹಿಳೆಗೆ ಲಿಂಗಧಾರಣೆ ಮಾಡಿದರು. ಇಲ್ಲಿಂದಲೇ ಇವರ ಧರ್ಮಪ್ರಚಾರ ಕಾರ್ಯವನ್ನು ಆರಂಭ ಮಾಡಿದರು.

ಪಂಚಗಣಾಧೀಶ್ವರರು ಕುಪ್ಪಿನಕೆರೆಯಿಂದ ಒಬ್ಬೊಬ್ಬರು ಒಂದೊಂದು ಕಡೆ ಪ್ರಯಾಣವನ್ನು ಬೆಳೆಸಿದರು. ಪಂಚಗಣಾಧೀಶ್ವರರಲ್ಲಿ ಒಬ್ಬನಾದ ಗುರು ಬಸವೇಶ್ವರರು ಕೊಟ್ಟೂರನ್ನು ಪ್ರವೇಶಿಸಿದರು. ಗುರು ಬಸವೇಶ್ವರರು ಇಲ್ಲಿಗೆ ಬಂದು ನೆಲೆಸುವ ಮೊದಲೇ ಕೊಟ್ಟೂರು ಬಹಳ ಪ್ರಸಿದ್ಧಿಯನ್ನು ಪಡೆದಿತ್ತು. ವ್ಯಾಪಾರ ವಹಿವಾಟುಗಳು ನಡೆಯುತ್ತಿದ್ದವು. ಇಲ್ಲಿ ಹೆಚ್ಚು ಜನ ಲಿಂಗಾಯತ ಮತದಾರರು ನೆಲೆಸಿದ್ದರು. ಪೂಜೆ ಪುನಸ್ಕಾರಗಳು ನಡೆಯುತ್ತಿದ್ದವು. "ಭರತಖಂಡವನ್ನು ವೀಕ್ಷಿಸುತ್ತಾ ಸಾಗಲು ಅದರ ದಕ್ಷಿಣ ಭಾಗದಲ್ಲಿ ಗೋದಾವರಿಯಿಂದ ಕಾವೇರಿಯವರೆಗಿನ ಕರ್ನಾಟಕ ದೇಶದಲ್ಲಿಯ ಕಲ್ಯಾಣ ಪಟ್ಟಣದ ಸಮೀಪದಲ್ಲಿ ಇರುವ ಸರಸೀಪುರವು ಗೋಚರಿಸಿತು. ಅದು ಶಿವಭಕ್ತಿಯ ಸೌಭಾಗ್ಯದ ತವರು. ವಿವಿಧ ವಿದ್ವಜ್ಜನ, ವೇದಮಾಜ್ಞರ, ಭಕ್ತಾಗ್ರಣಿಗಳ ನೆಲೆಬೀಡಾಗಿತ್ತು. ಇಷ್ಟೇ ಏಕೆ? ಗುರುವೇ ಪರಶಿವನು ಭಕ್ತರ ಸಂತ ಸಹೋದರ ಶಿಷ್ಯರೇ ಶಿವಶರಣರು, ಪುರಜನರೇ ದೇವತೆಗಳು ರಾಣಿವಾಸವೇ ಶಿವಕನ್ನಿಕೆಯರು, ಗಿಡಗಳೇ ಕಲ್ಪವೃಕ್ಷಗಳು, ಕೆರೆ

ಬಾವಿಗಳೇ ತೀರ್ಥಗಳಾಗಿ ವೇದದಲ್ಲಿ ವರ್ಣಿಸಿದ ಶಂಕರಪುರ (ಕೈಲಾಸ)ವೆಂಬಂತೆ ಶೋಭಿಸುತ್ತಿರುವ ಈ ಸರಸೀಪುರಕ್ಕೆ ಆಗಮಿಸಿ, ಅಲ್ಲಿ ಶಿವತತ್ವೋಪದೇಶ ಹಾಗೂ ಗುರು, ಲಿಂಗ, ಜಂಗಮರ ಸಾಮರಸ್ಯವನ್ನು ಅರುಹಿದರು"[೨೫]. ಹೀಗೆ ಇವರು ಹಲವಾರು ಕ್ಷೇತ್ರಗಳನ್ನು ದರ್ಶಿಸಿ ಕೊನೆಗೆ ಕೊಟ್ಟೂರು ಗ್ರಾಮಕ್ಕೆ ಬಂದು ನೆಲೆಸಿ ಅಲ್ಲಿನ ಜನರಿಗೆ ಶಿವತತ್ವವನ್ನು ಉಪದೇಶಿಸಿ ಗುರು, ಲಿಂಗ, ಜಂಗಮರ ಸಾಮರಸ್ಯವನ್ನು ಜನತೆಗೆ ಅರುಹಿದರು.

### ೨.೫.೧. ಗುರುಬಸವೇಶ್ವರ

ಕೊಟ್ಟೂರು ಗುರುಬಸವೇಶ್ವರರು ಕುಪ್ಪಿನಕೆರೆಯಿಂದ ಕೊಟ್ಟೂರಿಗೆ ಬಂದರು. ಇವರು ಮರುಳರಾಗಿ ಕೊಟ್ಟೂರಿನಲ್ಲಿ ಕಾಣಿಸಿಕೊಂಡು ತಮ್ಮ ಮರುಳುತನದಿಂದ ಹಲವಾರು ಪವಾಡಗಳನ್ನು ಮೆರೆದು ಆ ಭಾಗದ ಆರಾಧ್ಯದೈವವಾಗಿ ಕೊಟ್ಟೂರಿನಲ್ಲಿ ನೆಲೆನಿಂತರು. ನಾಥಸಿದ್ಧರ ಅತ್ಯಂತ ಮುಖ್ಯವಾದ ಲಕ್ಷಣ ಮರುಳುತನ (ಹುಚ್ಚುತನ) ನಾಥರಲ್ಲಿ ಹಲವಾರು ವಿಧಗಳಿವೆ. ಬೂದಿನಾಥ, ರಸಸಿದ್ಧರು ಎಲ್ಲ ರೋಗಗಳನ್ನು ನಿವಾರಣೆ ಮಾಡುವಂತವರು ಕಣ್ಣಿಲ್ಲದವನಿಗೆ ಕಣ್ಣುಕೊಡುವುದು, ಸತ್ತ ಎಮ್ಮೆ ಬದುಕಿಸುವುದು, ರಸಸಿದ್ಧರಲ್ಲಿ ಬಹಳ ಮುಖ್ಯವಾದಂತಹದು. ಪಂಚಗಣಾಧೀಶ್ವರರಲ್ಲಿ ಹಿರಿಯವರಾದ ಗುರುಬಸವೇಶ್ವರರು ಈ ನೆಲೆಯೊಳಗೆ ಬರುವಂತಹವರು. ಗುರುಬಸವೇಶ್ವರರು ಬತ್ತಲೆಯಾಗಿ ಬೀದಿಯಲ್ಲಿ ತಿರುಗುತ್ತ ಶಿಖಾಪುರವನ್ನು (ಕೊಟ್ಟೂರು) ಪ್ರವೇಶಿಸಿದರು.

### ೨.೫.೨. ತಿಪ್ಪೇರುದ್ರ ಸ್ವಾಮಿ

ಮಧ್ಯಕಾಲೀನ ಕರ್ನಾಟಕ ಸಾಂಸ್ಕೃತಿಕ ಚರಿತ್ರೆಯಲ್ಲಿ ೧೨ನೇ ಶತಮಾನದ ಶರಣ ಚಳುವಳಿಗೆ ಮಹತ್ವದ ಸ್ಥಾನವಿದೆ. ಅಷ್ಟೇ ಮಹತ್ವದ ಮಾನವೀಯವಾದ ಸಮಾನತೆ ಸಾರಿದ ಸಾಂಸ್ಕೃತಿಕ ಆಂದೋಲನಗಳು ೧೨ನೇ ಶತಮಾನದ ನಂತರವೂ ನಡೆದಿವೆ. ೧೫-೧೬ನೇ ಶತಮಾನದ ವೇಳೆಗೆ ಆಧ್ಯಾತ್ಮಿಕ ಜೀವಿಗಳಾದ ಅವಧೂತರು, ಸೂಫಿ ಸಂತರು, ನಾಥರೂ, ಆರೂಢರು, ಸಿದ್ಧರು, ವಿರಕ್ತರು, ತತ್ವಪದಕಾರರು ಇವರುಗಳ ನಂತರ ಬರುವಂತಹವರು ಪಂಚಗಣಾಧೀಶ್ವರರು ಧರ್ಮ, ಜಾತಿ, ಮತ, ಲಿಂಗಾತೀತವಾಗಿ ಬದುಕಿದವರು. ಇವರೆಲ್ಲರು ಜಾತಿ, ಮತ, ಲಿಂಗಭೇದಗಳನ್ನು ಮುಖ್ಯವಾಗಿಸದೆ ಪ್ರಾಮಾಣಿಕ ಭಕ್ತಿ ಸಾಧನೆಯನ್ನು ಮೆರೆದವರು. ಪಂಚಗಣಾಧೀಶ್ವರರನ್ನು ಕುರಿತ ಚರಿತ್ರೆಗಳಲ್ಲಿ ಇವರು ಕೈಲಾಸದಿಂದ ಬಂದವರು ಎಂದಿದೆ.

"ಮುಲ್ಲೋಕಾಧಿಪ ಶಿವಾಜ್ಞೆಯಿಂದಲಿ | ಕಲ್ಯಾಣೆಂಬುವ ಪುರದಲ್ಲಿ |
ಉಲ್ಲಾಸದಿ ಪುಟ್ಟಿದನಲ್ಲಿ | ಜನರೆಲ್ಲಾ ಸಂತಸದಿರಲ್ಲಲಿ |
ನಿಲ್ಲದೆ ತಿಪ್ಪೇರುದ್ರನು ಹೊರಟನು ನೋಡುತ್ತ ಕ್ಷೇತ್ರಗಳಲ್ಲಲ್ಲಿ ||

ಮರುಳನ ಪರಿಯಲಿ ಚರಿಸುತ ಬಂದನು | ಹರುಷದಿಂದ ರಾಯದ್ದುರ್ಗಕ್ಕೆ |
ಪುರದಲಿ ಚಲಿಸುತ್ತಿರಲಿಕ್ಕೆ | ಜನ | ರೆರಗಿದರಾತನ ಪಾದಕ್ಕೆ |
ಶರಣನಾದ ಕೆಂಪಯ್ಯಗೆ ತತ್ವವ ನರುಪುತ ನಡೆದನು ಮುಂದಕ್ಕೆ"[೨೬] ||

ಕೈಲಾಸದಲ್ಲಿ ಅತ್ಯಂತ ಸಂತೋಷದಿಂದ ಇರುವಾಗ ಭೂಲೋಕವು ಅನ್ಯಾಯ, ಅಕ್ರಮಗಳಿಂದ ತುಂಬಿ ಹೋಗಿದೆ. ಅಲ್ಲಿರುವಂತಹ ಪಾಪ ನಿವಾರಣೆ ಮಾಡಲು ತಿಪ್ಪೇಶ ಕೈಲಾಸದಿಂದ ಹೊರಟು ಬಂದರು ತಿಪ್ಪೇರುದ್ರಸ್ವಾಮಿಯವರು ಕೂಡ್ಲಿಗಿ ತಾಲೂಕು ಕುಪ್ಪಿನಕೆರೆಯಿಂದ ಹೊರಟು ರಂಗಸಮುದ್ರ ಮಾರ್ಗವಾಗಿ ನಿಡುಗಲ್ಲಿಗೆ ಬರುತ್ತಾರೆ. ಆಂಧ್ರದ ಎರಡುಕೆರೆ ಮೊದಲಾದ ಕಡೆ ಸುತ್ತಾಡಿ ರಾಯದುರ್ಗಕ್ಕೆ ಬರುವರು. ತಿಪ್ಪೇರುದ್ರಸ್ವಾಮಿ ರಾಯದುರ್ಗದ ಶಿವಾಲಯದಲ್ಲಿ ರಾತ್ರಿಯಿಡೀ ಹುಚ್ಚನಂತೆ ಅಲೆಯುತ್ತಾ ಪರಮಾತ್ಮನ ಧ್ಯಾನದಲ್ಲಿ ಮಗ್ನನಾಗಿರುತ್ತಾನೆ. ಕೈಯಲ್ಲೊಂದು ಡೊಂಕುಕೋಲು ಹೆಗಲ ಮೇಲೆ ತೆಂಗಿನ ಕರಟ ಮೈ ಮೇಲೆ ಹರಕು ಕಂಬಳಿ ಹೊದ್ದು; ಮಾಸಲಾದ ಹರಕು ರುಮಾಲು ತಲೆಗೆ ಸುತ್ತಿಕೊಂಡು ಹುಚ್ಚನಂತೆ ಸುತ್ತಾಡುತ್ತಿದ್ದನು. ಶಿವಾಲಯಕ್ಕೆ ಬರುವ ಜನರನ್ನು ಕೆಕ್ಕರಿಸಿ ನೋಡುವುದು, ನಗುವುದು ಮಾಡುತ್ತ ಉನ್ಮತ್ತ ಲೀಲೆಯನ್ನು ಪ್ರದರ್ಶಿಸುತ್ತಿದ್ದನು. ಹೀಗೆ ಅಲ್ಲಿಂದ ತಿಪ್ಪೇರುದ್ರಸ್ವಾಮಿ ರಾಯದುರ್ಗಕ್ಕೆ ಬಂದು ಫಣಿಯಪ್ಪನಿಗೆ ದರ್ಶನವೀಯುತ್ತಾನೆ.

ಫಣಿಯಪ್ಪನೆಂಬ ವರ್ತಕನು ನಾಯಕನಹಟ್ಟಿಯಿಂದ ವಾರಕ್ಕೊಮ್ಮೆ ರಾಯದುರ್ಗದ ಸಂತೆಗೆ ಎತ್ತುಗಳ ಮೇಲೆ ಸಾಮಾನುಗಳನ್ನು ಹೇರಿಕೊಂಡು ಹೋಗುತ್ತಿದ್ದನು. ಪ್ರತಿ ದಿನ ವ್ಯಾಪಾರ ಮಾಡುವುದಕ್ಕೆ ಮುಂಚೆ ಶಿವಾಲಯದಲ್ಲಿ ಬಾಳೆಹಣ್ಣುಗಳನ್ನು ತಂದು ಶಿವಲಿಂಗಕ್ಕೆ ನೈವೇದ್ಯಮಾಡಿ ಅನಂತರ ವ್ಯಾಪಾರಕ್ಕೆ ಹೋಗುತ್ತಿದ್ದನು. ಫಣಿಯಪ್ಪ ಬಾಳೆಹಣ್ಣುಗಳನ್ನು ತರುವುದನ್ನು ತಿಪ್ಪೇರುದ್ರಸ್ವಾಮಿ ನೋಡಿದವರು. ಒಂದು ದಿನ ಶಿವತತ್ವ ಪ್ರಕಾಶಮಾನವಾದ ಫಣಿಯಪ್ಪನ ಮೇಲೆ ತಿಪ್ಪೇರುದ್ರಸ್ವಾಮಿಯ ದಿವ್ಯದೃಷ್ಟಿ ಹರಿಯಿತು. ಆತನನ್ನು ಭಕ್ತನನ್ನಾಗಿ ಮಾಡಿಕೊಳ್ಳಲು ನಿಶ್ಚಯಿಸುತ್ತಾನೆ. ಅಯ್ಯಾ ನಿನ್ನೆಯಿಂದ ಊಟವಿಲ್ಲ, ತಿನ್ನಲು ಹಣ್ಣುಗಳನ್ನು ಕೊಡಪ್ಪಾ ಎಂದು ತಿಪ್ಪೇರುದ್ರಸ್ವಾಮಿಯವರು ಫಣಿಯಪ್ಪನನ್ನು ಕೇಳುತ್ತಾನೆ. ಗುರುಗಳೇ ಶಿವನಿಗೆ ನೈವೇದ್ಯ ಮಾಡಿಕೊಂಡು ಬಂದು, ನಂತರ ತಮಗೆ ಪ್ರಸಾದವನ್ನು ತಿನ್ನಲು ಕೊಡುತ್ತೇನೆ. ಸ್ವಲ್ಪ ಹೊತ್ತು ಸುಧಾರಿಸಿಕೊಳ್ಳಿ ಎನ್ನಲು, ಸ್ವಾಮಿಗಳು ತದೇಕ ಚಿತ್ತದಿಂದ ಧ್ಯಾನಮಾಡುತ್ತಾರೆ. ಫಣಿಯಪ್ಪನು ಫಲಪುಷ್ಪಗಳನ್ನು ಲಿಂಗಕ್ಕೆ ಅರ್ಚನೆ ಮಾಡುತ್ತಿರುವಾಗ, ಅವೆಲ್ಲವೂ ಶಿವನ ಪ್ರತಿರೂಪನಾದ ತಿಪ್ಪೇರುದ್ರನಿಗೆ ಅರ್ಚನೆಯಾಗುತ್ತಿದ್ದವು. ಇದನ್ನು ಕಂಡಂತಹ ಫಣಿಯಪ್ಪನಿಗೆ ಆಶ್ಚರ್ಯವಾಗುತ್ತದೆ. ಆಗ, ಸ್ವಾಮಿ ತಾವು ಮಹಾಮಹಿಮರು ದಯವಿಟ್ಟು ನಮ್ಮ ಊರಿಗೆ ಬರಬೇಕೆಂದು ಬೇಡಿಕೊಳ್ಳುತ್ತಾನೆ.

ತಿಪ್ಪೇರುದ್ರಸ್ವಾಮಿಯವರು ಫಣಿಯಪ್ಪ ಜೊತೆಗೂಡಿ ನಾಯಕನಹಟ್ಟಿಗೆ ಬರುವ ವೇಳೆಗೆ ಕತ್ತಲಾಗಿತ್ತು. ಫಣಿಯಪ್ಪನಿಗೆ 'ನಾವು ಸಂಧ್ಯಾಕಾಲದ ಶಿವಪೂಜೆ ಮಾಡಬೇಕು. ಇಲ್ಲಿ ಎಲ್ಲಿಯಾದರೂ ನೀರು ಸಿಕ್ಕುತ್ತ ಎನ್ನಲು, 'ಸ್ವಾಮಿ ಇಲ್ಲಿ ಎಲ್ಲೂ ನೀರು ಸಿಕ್ಕುವುದಿಲ್ಲ. ಹಳ್ಳ, ಬಾವಿಗಳು ಇಲ್ಲ. ಸ್ವಲ್ಪ ದೂರದಲ್ಲಿ ಕೊಂಡ್ಲಹಳ್ಳಿ ಗ್ರಾಮವಿದೆ. ಅಲ್ಲಿ ತಮ್ಮ ಸ್ನಾನ, ಶಿವಾರ್ಚನೆ, ಪ್ರಸಾದ ಮಾಡಲು ಪರಿಚಿತರು ಇದ್ದಾರೆ ಎಂದು ಹೇಳಲು, ಸ್ವಾಮಿಗಳು ನಗುತ್ತಾ ಫಣಿಯಪ್ಪ ಇಲ್ಲೇ ಈ ಹೊಲದಲ್ಲೇ ಪಾತಾಳಗಂಗೆಯ ಉಗಮ ಸ್ಥಾನವೇ ಇದೆ. ಅಲ್ಲಿ ಒಂದೆರಡು ಮೊಳ ನೆಲವನ್ನು ಅಗೆಯಿರಿ' ಎಂದು ಅಪ್ಪಣೆ ಕೊಟ್ಟರು. ಆಗ ಫಣಿಯಪ್ಪನು ಮೂರು ಅಡಿ ನೆಲವನ್ನು ಅಗೆಯುವಷ್ಟರೊಳಗೆ ಪಾತಾಳದಿಂದ ಗಂಗೆಯು ಮೇಲೆ ಉಕ್ಕಿ

ಬಂದಂತೆ ಜಲವುಕ್ಕಿ ಮೇಲೆ ಬರಲು ಫಣಿಯಪ್ಪ ಆಶ್ಚರ್ಯ ಚಕಿತನಾಗುತ್ತಾನೆ. ಈ ಚಿಲುಮೆಯನ್ನು 'ಬಿಳಿನೀರು ಚಿಲುಮೆ' ಎಂದು ಕರೆದರು. ಹೀಗೆ ಊರಿಗೆ ಬರುವಷ್ಟರೊಳಗೆ ಕತ್ತಲಾಗಿರುತ್ತದೆ. ಫಣಿಯಪ್ಪನ ಬಳಿಯಿದ್ದ ಕೊಬ್ಬರಿಗೆ ಬೆಂಕಿಹಚ್ಚಿ ಅದನ್ನು ದೀವಟಿಗೆ ಮಾಡಿಕೊಂಡು ಆ ಬೆಳಕಿನಲ್ಲಿ ರಾತ್ರಿ ಪ್ರಯಾಣವನ್ನು ಮಾಡುತ್ತಾ ನಾಯಕನಹಟ್ಟಿಗೆ ಬರುತ್ತಾರೆ.

"ಮೈಯಂ ಬಾಗಿಸಿ ಕೈಯಂ ಜೋಡಿಸಿ ಬೇಡಿಕೊಂಡನವ ನಿಂತೆಂದು |
ಜೀಯನೆ ಭೋ ಕರುಣಾ ಸಿಧು |ನ| ನಯ್ಯನು ನೀನಹುದಹುದೆಂದು |
ಪ್ರೀಯದಿಂದ ನುತಿಗೈಯುತ ಬಾ ರುದ್ರಯ್ಯನೆ ಸ್ವ ಗ್ರಾಮಕ್ಕಿಂದು ||"[೨೨]

ಎಂದು ಫಣಿಯಪ್ಪನವರು ಬೇಡಿಕೊಂಡಾಗ ಸ್ವಾಮಿಗಳು ನಾಯಕನಹಟ್ಟಿಗೆ ಬರಲೊಪ್ಪಿದರು. ಫಣಿಯಪ್ಪನ ಮೂಲಕ ಸ್ವಾಮಿಗಳು ನಾಯಕನಹಟ್ಟಿಗೆ ಪ್ರವೇಶ ಪಡೆಯುವಂತಾಯಿತು. ಆ ಮುಖೇನ ಫಣಿಯಪ್ಪನನ್ನು ಭಕ್ತನನ್ನಾಗಿ ಸ್ವಾಮಿಗಳು ಸ್ವೀಕರಿಸಿದರು. ಹೀಗೆ ತಿಪ್ಪೇರುದ್ರಸ್ವಾಮಿಗಳು ನಾಯಕನಹಟ್ಟಿಗೆ ಪ್ರವೇಶ ಮಾಡಿ ಇಲ್ಲೇ ನೆಲೆ ನಿಂತರು.

**೨.೫.೩. ಶ್ರೀ ಮದ್ದಾನೇಶ್ವರ ಸ್ವಾಮಿ**

ಪಂಚಗಣಾಧೀಶ್ವರರು ಕುಪ್ಪಿನಕೆರೆ ಆಂಜನೇಯನಿಗೆ ಲಿಂಗಧಾರಣೆ ಮಾಡಿ ಅಲ್ಲಿಂದ ಮುಂದೆ ಹರಪನಹಳ್ಳಿಯ ಕಡೆ ಪ್ರಯಾಣ ಮಾಡಿದರು. ಹರಪನಹಳ್ಳಿಯಲ್ಲಿ ಸೋಮಶೇಖರ ನಾಯಕನು ಆಳುತ್ತಿದ್ದನು. ಪಂಚಗಣಾಧೀಶ್ವರರು ಕರ್ತವ್ಯದ ನೊಗವನ್ನು ಹೊತ್ತುಕೊಂಡು ಬಂದವರು. ಬಾಗಳಿಯ ಸಮೀಪದಲ್ಲಿ ಮರಡಿ ಮಲ್ಲಯ್ಯನ ಬೆಟ್ಟವಿದೆ. ಆ ಬೆಟ್ಟವನ್ನು ನೋಡಿದ ಇವರು ಶ್ರೀಶೈಲದ ವಾತಾವರಣವನ್ನು ನೆನಪಿಸುವಂತೆ ಕಂಗೊಳಿಸುತ್ತಿತ್ತು. ಅಲ್ಲಿ ಪೂಜೆ ಪುನಸ್ಕಾರಗಳನ್ನು ಮಾಡಿದರು. ಪೂಜೆಯ ಸಮಯದಲ್ಲಿ ಬೆಟ್ಟದಲ್ಲಿ ಬಹಳ ಜನ ನೆರೆದಿದ್ದರು. ಪೂಜಾ ವಿಧಾನದ ಹಾಡುಗಳು ಹೇಳುತ್ತಿದ್ದರು. ಜನ ಇದನ್ನು ಕಂಡು ಆಶ್ಚರ್ಯವಾದರು. ಬಾಗಳಿ ಗ್ರಾಮದ ಶ್ರೀಮಂತ ಕಲ್ಲಪ್ಪನವರು ಪಂಚಗಣಾಧೀಶ್ವರರನ್ನು ಬಾಗಳಿ ಗ್ರಾಮಕ್ಕೆ ಬರಬೇಕು' ಎಂದು ಬೇಡಿಕೊಂಡರು. ಊರಿನಲ್ಲಿ ಸ್ವಾಮಿ ಕಲ್ಲೇಶ್ವರನ ದೇವಾಲಯವಿದೆ. ಸುಂದರವಾದ ಆಲಯ. ಅದರ ಮುಂಭಾಗದಲ್ಲಿಯೇ ತಿಳಿ ನೀರಿನ ಕೊಳ. ಅದಕ್ಕೆ ಹೊಂದಿಕೊಂಡಂತೆ ದೊರೆಗಳ ಶೃಂಗಾರ ತೋಟವು ನಿಮ್ಮ ನಿತ್ಯ ಪೂಜಾದಿ ಅನುಷ್ಠಾನಗಳಿಗೆ ಪ್ರಶಾಂತವಾದ ಸ್ಥಳ. ತಾವಲ್ಲಿ ವಾಸ್ತವ್ಯ ಹೂಡಲೇಬೇಕು ಎಂದು ಕೇಳಿಕೊಂಡರು.

ಗಣಾಧೀಶ್ವರರಿಗೆ ಕಲ್ಲೇಶ್ವರನ ಸನ್ನಿಧಿ ತೀರಾ ಅಪ್ಯಾಯಮಾನವಾಗಿ ಕಂಡಿತು. ಭಿಕ್ಷೆ ಅಥವಾ ಕಾಯಕ, ಪೂಜೆ, ಜಪ, ತಪ, ದರ್ಶನಾರ್ಥಿಗಳಿಗೆ ಉಪದೇಶ, ದೀನ ದುರ್ಬಲರಿಗೆ ಬದುಕಿನ ಪಾಠ, ಧನಿಕರಿಗೆ ಪರಲೋಕದ ನೋಟ, ಜನಸಾಮಾನ್ಯರಿಗೆ ಕಾಯಕದ ಮಾಟ ಇವು ಅವರ ಕಾರ್ಯಕ್ರಮಗಳು ನಡೆ ನುಡಿಗಳಲ್ಲೊಂದಾದ ಅವರ ರೀತಿ ನೀತಿಗಳು ಆ ಪ್ರಾಂತ್ಯದ ಜನತೆಯನ್ನು ಆಕರ್ಷಿಸಿದವು. ಪ್ರತಿದಿನ ಪ್ರಾತಃಕಾಲ ದುಂಬಿಮುಟ್ಟದ, ರವಿಕಿರಣಗಳು ಪೂಸದ ಅರಳಿದ ಹೂಗಳನ್ನಾರಿಸಿ, ದೇವಾಲಯಕ್ಕೆ ತಂದು,

ಮಿಂದು ಮಡಿಯನುಟ್ಟು ಕಲ್ಲೇಶ್ವರನನ್ನು ಅರ್ಚಿಸುವುದು, ನಿರಂತರ ತ್ರಿಕಾಲದಲ್ಲಿ ನಡೆಯುತ್ತಿದ್ದ ಕಾರ್ಯಕ್ರಮ.

ಮದ್ದಾನೇಶ್ವರರಿಗೆ ಒಂದು ದಿನ ಪೂಜೆಗೆ ಹೂ ತರುವ ಸರದಿ ಬರುತ್ತದೆ. ಹೆಸರಿಗೆ ತಕ್ಕಂತೆ ಅಜಾನುಬಾಹು, ಬ್ರಹ್ಮಚರ್ಯೆಯ ಅಗ್ನಿಕುಂಡದಲ್ಲಿ ಪುಟವಿಕ್ಕಿದ ಹೊಳಪಿನ ವಜ್ರಕಾಯ. ಅಂದು ತಡವಾಗಿ ಎದ್ದ ಮದ್ದಾನೇಶ್ವರ ತಡಬಡಿಸುತ್ತಾ ಹೂದಾನಿ ಹಿಡಿದು ಶೃಂಗಾರ ತೋಟದ ಕಡೆ ಧಾವಿಸಿದರು, ಮದ್ದಾನೇಶ್ವರರು ಹೂಗಳನ್ನು ಆರಿಸುವಾಗ ಶೃಂಗಾರ ತೋಟದಲ್ಲಿ ಕನಕವ್ವ ತನ್ನ ಸಖಿಯರೊಂದಿಗೆ ಉಲ್ಲಾಸದಿಂದ ಇರುವಾಗ ಆಕಸ್ಮಿಕವಾಗಿ ಅವರ ದೃಷ್ಟಿ ಇತ್ತ ಕಡೆ ಸರಿಯಿತು. ಪರಸ್ಪರರು ಆಕರ್ಷಿತರಾದರು. ನಕ್ಕು ನಲಿದು ಬಸವಳಿದು ಬಂದ ಲತಾಂಗಿಗೆ ಬಿಲ್ವ ವೃಕ್ಷದಡಿ ಕಂಡ ಶಿವಯೋಗಿ ಕಾಮನಂತೆ ಕಂಡ. ಇಬ್ಬರ ದೃಷ್ಟಿಗಳು ಒಂದಾದವು. ಪರವಶಳಾಗಿ ಮೈಮರೆತಳು. ಬವಳಿ ಬಂದಂತಾಗಿ ಬಾಡಿದ ಲತೆಯಂತೆ ಮೈಯೊರಗಿದಳು. ಸಖಿಯರು ವಿಚಾರಿಸಲಾಗಿ ಆಗ ಮದ್ದಾನೇಶ್ವರ ನಾವು ಕಲ್ಲೇಶ್ವರ ದೇವಾಲಯದಲ್ಲಿ ಐವರು ಗೆಳೆಯರು ವಾಸ್ತವ್ಯ ಹೂಡಿದ್ದೇವೆ. ನಿತ್ಯ ಪೂಜೆಗೆಂದು ಹೂಗಳನ್ನಾರಿಸಿ ತರುವ ಸಲುವಾಗಿ ಈ ದಿನದ ಸರದಿ ನನ್ನದು. ಅದಕ್ಕಾಗಿ ನಾನು ಇಲ್ಲಿಗೆ ಬರಬೇಕಾಯಿತು ಎಂದರು. ಇದೆಲ್ಲವನ್ನು ಕಂಡ ರುದ್ರಮುನಿಗಳು ನಮ್ಮ 'ಮದ್ದಾನೀ ಖೆಡ್ಡದಲ್ಲಿ ಬಿತ್ತು' ಎಂದು ನುಡಿದರು. ಎಲ್ಲರಿಗೂ ಆಶ್ಚರ್ಯವಾಯಿತು. ಹೌದು ಮಿತ್ರರೇ ಇಂದಿಗೆ ನಮ್ಮ ಮದ್ದಾನಪ್ಪನ ಋಣಾನುಬಂಧ ಹರಿದಂತೆಯೆ' ಎಂದು ಹೇಳಿ ಧ್ಯಾನಾಸಕ್ತರಾದರು. ಮಿತ್ರ, ಕಾಲಕರ್ಮದ ಸುಳಿಗೆ ನೀನಿಂದು ಸಿಕ್ಕುಬಿದ್ದೆ. ಇಂದು ತೋಟದಲ್ಲಿ ನಡೆದ ಘಟನೆಯ ಪರಿಣಾಮ ಊಹಿಸಲಾಸಾಧ್ಯ. ನಾವು ಪರನಾರೀ ಸೋದರರೇ ವಿನಃ ಅವರ ಹೃದಯ ಚೋರರಾಗಬಾರದಲ್ಲವೆ? ಎಂದು ಹೇಳಿದರು. ಶಿವನ ಸಂಕಲ್ಪವೇನಿದೆಯೋ ಬಲ್ಲವರಾರು ಎಂದರು.

ಪೂಜೆಗೆ ಹೂ ಕೊಯ್ಯುವುದಕ್ಕೆ ಬಂದ ಮದ್ದಾನೇಶ್ವರ ಕನಕವ್ವನನ್ನು ಸಂಧಿಸುತ್ತಾನೆ. ಈ ಅಂಶವನ್ನು ಅಮೂರ್ತಗೊಳಿಸಿ ಅವರ ದೃಷ್ಟಿಯಿಂದ ಆಕೆ ಗರ್ಭಿಣಿಯಾಗುವಳೆಂದು ಕಲ್ಪಿಸಲಾಗಿದೆ. ಬಾಗಳಿ ಅರಸ ತನ್ನ ಮಗಳು ಮದುವೆಯ ಮೊದಲೇ ಗರ್ಭಿಣಿಯಾಗುವಳೆಂದು ತಿಳಿದು, ಕಾರಣವನರಿತು ಬಾಗಳಿಗೆ ಬಂದು ಐವರು ಗಣಾಧೀಶ್ವರರನ್ನು ಕೇಳುತ್ತಾನೆ. ನಡೆದ ನಿಜ ಸಂಗತಿ ತಿಳಿಸಿದ ಮೇಲೆ ನಾಲ್ವರು ಗಣಾಧೀಶ್ವರರು ಅಲ್ಲಿ ಮದ್ದಾನೇಶ್ವರನಿಗೆ ಮದುವೆ ಮಾಡುವುದೇ ಸೂಕ್ತವೆಂದು ನಿರ್ಧರಿಸಿ ಬಾಗಳಿ ಕಲ್ಲೇಶ್ವರ ದೇವಾಲಯದಲ್ಲಿ ಮದ್ದಾನೇಶ್ವರ ಮತ್ತು ಕನಕವ್ವನ ಮದುವೆ ಮಾಡಿದರು.

ಸೋಮಶೇಖರ ರಾಜ ಮದುವೆಯ ನಂತರ ಮಗಳಿಗೆ ಕೂಲಹಳ್ಳಿಯಲ್ಲಿ ಕೋಟೆಗಳನ್ನು ಕಟ್ಟಿಸಿ ಕೊಟ್ಟ. ೩೫೧ ಎಕರೆ ಜಮೀನು ದಾನ ಕೊಡುತ್ತಾನೆ. ಮದ್ದಾನೇಶ್ವರರಿಗೆ ನಾಲ್ವರು ಗಣಾಧೀಶ್ವರರು ಮಗ ಹುಟ್ಟಿದ ನಂತರ ಪೇಟ, ಕೋಲು, ರುದ್ರಾಕ್ಷಿ ಸರಗಳನ್ನು ಕೊಟ್ಟು ಜೀವ ಸಮಾಧಿ ಹೊಂದು ಎಂದು ಆಶೀರ್ವಾದಿಸಿದರು. ಮದ್ದಾನೇಶ್ವರರು ಅವರ ಆಜ್ಞೆಯಂತೆ ಕೂಲಹಳ್ಳಿಯಲ್ಲಿ ಉಳಿದುಕೊಂಡರು. ಉಳಿದ ನಾಲ್ವರು ಗಣಾಧೀಶ್ವರರು ಇಲ್ಲಿಂದ ಮುಂದೆ ತಮ್ಮ ಸ್ಥಳಗಳಿಗೆ ಪ್ರಯಾಣ ಬೆಳೆಸಿದರು.

## ೨.೫.೪. ಗೋಣಿ ಬಸವೇಶ್ವರ

ಗೋಣಿ ಬಸವೇಶ್ವರರ ಹುಟ್ಟಿನ ಹಿನ್ನೆಲೆ ಹೀಗಿದೆ. ಪರಶಿವನು ಗೋಣಿ ಬಸವನಿಗೆ ನೀನು ಭೂಲೋಕಕ್ಕೆ ಹೋಗಿ ಅಲ್ಲಿಯ ಅಧರ್ಮವನ್ನು ತೊಲಗಿಸಿ ಧರ್ಮದ ಪತಾಕೆಯನ್ನು ನಿಲ್ಲಿಸು ಎಂದು ಅಪ್ಪಣೆ ಕೊಟ್ಟನು. ಅದಕ್ಕೆ ಬಸವನು ದುಃಖಪಟ್ಟು ನಾನು ನಿಮ್ಮ ಪಾದಾರವಿಂದಗಳನ್ನು ಬಿಟ್ಟು ಭೂಲೋಕಕ್ಕೆ ಹೋಗಲಾರೆ ಎಂದು ಅಂಗಲಾಚಿದ. ಅದಕ್ಕೆ ಶಿವನು ಭೂಲೋಕದಲ್ಲಿಯ ಯಾವ ಮಾನವರಿಂದಲೂ ನಿನಗೆ ಅಪಾಯಬಾರದು. ನೀನು ಭೂಲೋಕಕ್ಕೆ ಹೋದ ಮೇಲೆ ಅಲ್ಲಿಯ ೭೭೭ ಮಠಗಳು ಬಿರುದಾವಳಿಗಳಿಂದ ಶೋಭಿಸಲಿ. ಈ ಮಠಗಳಲ್ಲಿ ಒಂಟಿ ನಿಶಾನಿಗಳು ಹಸಿರು ಛತ್ರಿಕೆಗಳು ನಿನ್ನ ಬಿರುದಾವಳಿಗಳಾಗಿ ಮೆರೆಯಲಿ. ಬಸವಾ ನೀನು ಹೆದರಬೇಡ. ನೀನು ಉದ್ಭವಿಸುವ ಊರಿನ ಎದುರಿನಲ್ಲಿ ಒಂದು ಬೆಟ್ಟದ ಕಾಡು ಇದೆ. ಅಲ್ಲಿ ನಾನು ಬೆಟ್ಟದ ಮಲ್ಲೇಶ್ವರನೆಂಬ ಹೆಸರಿನಿಂದ ಪರಿಶೋಭಿಸುತ್ತೇನೆ. ನಿನಗೆ ಕಷ್ಟ ಬಂದಲ್ಲಿ ನನ್ನನ್ನು ನೆನೆ. ನಿನ್ನ ಕಷ್ಟಗಳನ್ನು ನಿವಾರಿಸುತ್ತೇನೆ. ಅಲ್ಲದೆ ಪ್ರತಿವರ್ಷ ನಿನ್ನ ಸ್ಥಳದಿಂದ ನನ್ನ ಬಳಿಗೆ ಎರಡು ಸಲ ಪಲ್ಲಕ್ಕಿಯ ಸೇವೆ ಬರಲಿ ಎಂದು ಶಿವನು ಆಶೀರ್ವಾದ ಮಾಡಿದನು. ಇದರಿಂದ ಬಸವನ ಮನಸ್ಸಿಗೆ ನೆಮ್ಮದಿಯಾಗಿದೆ. ಪಾದಗಳ ಮೇಲೆ ಬಿದ್ದ ಬಸವನನ್ನು ಪಾರ್ವತಿ ಎತ್ತಿ ಮುದ್ದಾಡಿ ಬಸವಾ ಹೆದರಬೇಡ ಪರಶಿವನು ಅಪ್ಪಣೆಕೊಟ್ಟಂತೆ ನಾನು ಸಹ ನಿನಗೆ ಹಾರೈಸುತ್ತೇನೆ. ಪಾರ್ವತಿ ಕೇಳು ಬೆಟ್ಟದ ಮಲ್ಲೇಶ್ವರನೆಂಬ ಹೆಸರಿನಿಂದ ಅಲ್ಲಿದ್ದಾಗ ಆತನ ಪಾದದಡಿಯಲ್ಲಿ ಪಾತಾಳ ಗಂಗಮ್ಮ ಎಂಬ ಹೆಸರಿನಿಂದ ನಾನು ಪರಿಶೋಭಿಸುತ್ತೇನೆ. ನೀನು ಭಯವಿಲ್ಲದೆ ಭೂಲೋಕಕ್ಕೆ ತೆರಳು ಎಂದು ಆಶೀರ್ವದಿಸಿದಳು. ಆಗ ಶಿವನು ಬಸವನು ಪಾಪವಿಲ್ಲದ ಪಿಂಡವಾಗಿ ಜನಿಸುವಂತೆ ತನ್ನ ಜಡೆಯಲ್ಲಿ ಇದ್ದ ಗಂಗೆಯನ್ನು ಕೆಳಗೆ ಚಲ್ಲಿದನು.

ಐದುಮಂದಿ ಪಂಚಗಣಾಧೀಶ್ವರರು ಮೇಲೆದ್ದು ಶಿವನಿಗೆ ನಮಸ್ಕರಿಸಿದರು. ಆಗ ಶಿವನು ಕೊಟ್ಟೂರೇಶ್ವರ, ಕೋಲಶಾಂತೇಶ್ವರ, ತಿಪ್ಪೇರುದ್ರೇಶ, ಕೆಂಪಯ್ಯ, ಮದ್ದಾನೇಶ್ವರ ಎಂದು ನಾಮಕರಣ ಮಾಡಿದನು. ನಂತರ ನೀವುಗಳು ಭೂಲೋಕಕ್ಕೆ ತೆರಳಿ ಅಲ್ಲಿಯ ಅನ್ಯಾಯ, ಅತ್ಯಾಚಾರ, ಅನೀತಿ, ಅಧರ್ಮ ತೊಲಗಿಸಬೇಕು ಎಂದು ಅಪ್ಪಣೆ ಕೊಡಿಸಿದನು. ನೀವು ಒಬ್ಬೊಬ್ಬರು ಒಂದೊಂದು ಸ್ಥಳದಲ್ಲಿ ನೆಲೆಸಿ ಧರ್ಮ ಪ್ರಚಾರಮಾಡಬೇಕು. ಆಗ ನಿಮ್ಮ ದರ್ಶನದಿಂದ ಒಬ್ಬ ಶರಣ ಜನಿಸುತ್ತಾನೆ. ಆತನನ್ನು ರಕ್ಷಿಸುವ ಭಾರ ನಿಮ್ಮದು ಎಂದು ಅಪ್ಪಣೆ ಕೊಡಿಸಿದನು. ಅದರಂತೆ ಗಣಾಧೀಶ್ವರರು ಭೂಲೋಕಕ್ಕೆ ಆಗಮಿಸಿದರು.

ಗೋಣಿಬಸವ ಚರಿತ್ರೆ ಪ್ರಕಾರ 'ಪಂಚಗಣಾಧೀಶ್ವರರು' ಶಿವನು ಜಡೆಯ ಗಂಗೆಯನ್ನು ತನ್ನ ಸಿಂಹಾಸನದ ಎದುರಿಗೆ ಚಲ್ಲಿದಾಗ ಹುಟ್ಟಿದವರು. ಶಿಕಾರಿಪುರದ (ಶಿಖಾಪುರ-ಕೊಟ್ಟೂರು) ಹರಿಜನ ಮಹಿಳೆಯ ಮನೆಯಲ್ಲಿ ಬಿನ್ನಹ ತೀರಿಸದಿದ್ದುದರಿಂದ ಐವರೂ ಕಣ್ಣು ಕಳೆದುಕೊಳ್ಳುತ್ತಾರೆ. ಆಕೆಯ (ಭಕ್ತೆ) ಹತ್ತಿರ ಬಂದು ತಪ್ಪನ್ನು ಕ್ಷಮಿಸು ಎಂದು ಕೇಳಿಕೊಳ್ಳುತ್ತಾರೆ. ಆಕೆಗೆ ಲಿಂಗಧಾರಣೆ ಮಾಡಿ ಊಟ ಮಾಡುತ್ತಾರೆ. ಪವಾಡ ಪುರುಷರೈವರಿಗೂ ಒಬ್ಬ ಹರಿಜನ ಮಹಿಳೆ ಪಾಠ ಕಲಿಸುವ ವಿಚಾರ ತುಂಬ ಗಂಭೀರವಾದುದು. ಈಗಲೂ ಕೊಟ್ಟೂರಲ್ಲಿ ಹರಿಜನ ಕೇರಿಯಿಂದ ಆರತಿ, ಗಿಣ್ಣದ ಎಡೆ ಬಂದ ನಂತರವೇ ತೇರು ಎಳೆಯುವ ಸಂಪ್ರದಾಯವಿದೆ.

"ಮದ್ದಾನೇಶ್ವರನ ದೃಷ್ಟಿಮಾತ್ರದಿಂದ ಕನಕವ್ವ ಗರ್ಭಧರಿಸುತ್ತಾಳೆ. ಹೀಗೆ ಗರ್ಭಧರಿಸಿದ ಕನಕವ್ವ, ನವ ಮಾಸಗಳು ತುಂಬಿದಂತೆ ಕನಕವ್ವೆ ಆಯಾನಗೊಳ್ಳುವಳು. ನೋವಿನಲ್ಲೂ ನಲಿಯುವಳು. ನಾಗತಿಯರು ಬಂದು ಹೋಗುವರು. ಮಗಳ ಹೆರಿಗೆಗಾಗಿ ಎಲ್ಲಾ ವ್ಯವಸ್ಥೆಯನ್ನು ಅರಮನೆಯವತಿಯಿಂದಲೇ ಮಾಡಲಾಯಿತು. ಯಾವ ನಿರೀಕ್ಷೆಯಾಗಲೀ ಪರಿಚಾರಿಕೆಯರ ನೆರವಾಗಲೀ ಇಲ್ಲದ ಒಂದು ಶುಭ ಮಹೂರ್ತದಲ್ಲಿ ಕನಕಾಂಬೆ ಗಂಡು ಮಗುವಿಗೆ ಜನ್ಮವಿತ್ತಳು. ಕಾರಣೀಬೂತನೂ, ದೈವಾಂಶಸಂಭೂತನು, ವಿಚಿತ್ರ ಗರ್ಭ ಸಂಜಾತನೂ ಆದ ಮಗುವಿಗೆ ಕನಕವ್ವ ಜನ್ಮವಿತ್ತಳು. "ಕೆಂಪಯ್ಯನವರು ಬಂದು ಮಗುವಿಗೆ ಗೋಣಿ ಬಸಪ್ಪನೆಂದು ನಾಮಕರಣ ಮಾಡಿದರು."[೨೮] ಗೋಣಿಬಸವನ ಬಾಲ್ಯ ಸುಖಕರವಾಗಿರಲಿಲ್ಲ. ಅಜ್ಜ ಕೊಟ್ಟ ಭೂಮಿ ಪರವಶವಾಗಿತ್ತೊ ತಿಳಿಯದು. ಎಂಟು ವರ್ಷದವನಿರುವಾಗಲೆ ಚಿಕ್ಕಳ್ಳಿ ಬಣಕಾರನ ಮನೆಯಲ್ಲಿ ಜೀತ ಸೇರುತ್ತಾನೆ. ನಂತರ ಗೋಣಿ ಬಸವ ಕೂಲಹಳ್ಳಿಯಲ್ಲಿ ನೆಲೆಸುತ್ತಾನೆ.

**೨.೫.೫. ಕೋಲಶಾಂತಯ್ಯ**

ಕ್ರಿ.ಶ. ೧೨ನೇ ಶತಮಾನದ ಬಸವಣ್ಣನ ಮತ್ತು ಬಿಜ್ಜಳರ ಸಮಕಾಲೀನ ಕೋಲಶಾಂತಯ್ಯನು. ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರದಲ್ಲಿ ಬರುವಂತೆ ಈತ ಬಸವಣ್ಣನಲ್ಲಿ ಕಟ್ಟಿಗೆಯಿಡಿದು ಮೂಲದಾರ ನಿಯೋಗವನ್ನು ನಡೆಸುವವನಾಗಿದ್ದ. ಈ ಮೂಲದಾರ ನಿಯೋಗದ ಕೆಲಸವೇನೆಂದು ಸ್ಪಷ್ಟವಾಗದಿದ್ದರೂ ಅಲ್ಲಿಯೇ ಬರುವ ಕಟ್ಟಿಗೆದಾರ ಎಂಬುದರಿಂದ ಈತ ಕಟ್ಟಿಗೆ ಅಥವಾ ಕೋಲನ್ನು ಹಿಡಿದು ಕಾಯಕವನ್ನು ನಡೆಸುತ್ತಿದ್ದ ಆದ್ದರಿಂದ ಶಾಂತಯ್ಯ ಕೋಲಶಾಂತಯ್ಯನಾದನೆಂದೂ ಹೇಳಬಹುದಾಗಿದೆ. ವಿವಿಧ ಸಾಹಿತ್ಯ ಮೂಲಗಳಿಂದ ತನ್ನ ಮಹಿಮೆಯನ್ನು ಮೆರೆದಿದ್ದಾನೆ. ಚೆನ್ನಬಸವಣ್ಣ, ಮಡಿವಾಳ ಮಾಚಿದೇವ, ವಿರೂಪಾಕ್ಷ ಪಂಡಿತ ಮೊದಲಾದವರು ಸ್ಮರಿಸಿದ್ದಾರೆ. ಕೋಲಶಾಂತಯ್ಯ ವೀರಶೈವ ಅಮರಗಣಾಧೀಶ್ವರರ ಪಂಕ್ತಿಯಲ್ಲಿ ಒಂದು ಸ್ಥಾನವನ್ನು ಪಡೆದುಕೊಂಡಿರುವಂತೆಯೇ ವಚನ ರಚನೆಯಿಂದ ವಚನ ಸಾಹಿತ್ಯದಲ್ಲಿಯೂ ಹಿರಿಯ ಸ್ಥಾನವನ್ನು ಸಂಪಾದಿಸಿಕೊಂಡಿದ್ದಾನೆ.

೧೨ನೇ ಶತಮಾನದ ಕೋಲಶಾಂತಯ್ಯ ಬೇರೆ. ಮತ್ತು ೧೮ನೇ ಶತಮಾನದ ೧೭೫೦ ರಲ್ಲಿದ್ದ ಕೋಲಶಾಂತಯ್ಯನೆಂಬ ವಚನಕಾರ ಈಗಿನ ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಅರಸೀಕೆರೆ ಗ್ರಾಮದವನು. ಪಂಚಗಣಾಧೀಶ್ವರರಲ್ಲಿ ಒಬ್ಬನಾದ ಈತನ ವಿಚಾರವಾಗಿ ಭೈರವೇಶ್ವರ ಕಾವ್ಯದಲ್ಲಿ ಪ್ರಸ್ತಾಪಿಸಲಾಗಿದೆ. ಕೋಲಶಾಂತಯ್ಯ ಕೊಟ್ಟೂರು ಗುರುಬಸವನ ಪವಾಡಗಳನ್ನು ಭಕ್ತಗಣಂಗಳಿಗೆ ವ್ಯಾಖ್ಯಾನಿಸುವ ವ್ಯಾಖ್ಯಾನುಕಾರನಾಗಿದ್ದನೆಂಬುದು ಬಸವಲಿಂಗ ಕವಿ ರಚಿಸಿದ ಕೊಟ್ಟೂರು ಬಸವೇಶ್ವರ ಚರಿತ್ರೆಯಿಂದ ತಿಳಿದುಬರುತ್ತದೆ. ಕೊಟ್ಟೂರು ಗುರುಬಸವೇಶ್ವರರ ಜೊತೆಯಲ್ಲಿಯೇ ಬಹಳ ಕಾಲವಿದ್ದ ಕೋಲಶಾಂತಯ್ಯನವರು ಚಿತ್ರದುರ್ಗ ಜಿಲ್ಲೆ ಬಿದರಕೆರೆ ಸಮೀಪದಲ್ಲಿರುವ ಗುಡ್ಡದ ಗವಿಯಲ್ಲಿ ಕೆಲವು ಕಾಲ ತಪಸ್ಸುಮಾಡಿ, ಜಗಳೂರು, ಅಣಜಿ ಇತ್ಯಾದಿ ಸ್ಥಳಗಳಲ್ಲಿ ಸಂಚರಿಸಿದ ನಂತರ ಕೋಲಶಾಂತಯ್ಯ ಕೊಟ್ಟೂರೇಶ್ವರರ ಕೊನೆಯ ದಿನಗಳಲ್ಲಿ ಅವರ ಸನಿಹದಲ್ಲಿ ಇದ್ದ ಕೊಟ್ಟೂರೇಶ್ವರರ ಸಮಾಧಿಯ ನಂತರ

ಅರಸೀಕೆರೆ ಗ್ರಾಮಕ್ಕೆ ಬಂದು ನೆಲೆಸಿದರು. ನೀಲಗುಂದದ ಕೆರೆಯ ದಂಡೆಯ ಮೇಲೆ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ಸುಂದರ ಕೆತ್ತನೆಗಳನ್ನೊಳಗೊಂಡ ಭೀಮೇಶ್ವರ ದೇವಾಲಯವಿದೆ. ದೇವಾಲಯ ಪೂರ್ವಾಭಿಮುಖವಾಗಿದ್ದು ಗುಡಿ ಚಾಲುಕ್ಯರಿಂದ ನಿರ್ಮಾಣವಾದರೂ ಹೊಯ್ಸಳರಿಂದ ಅಭಿವೃದ್ಧಿಗೊಂಡಿದೆ. ಕೋಲಶಾಂತಯ್ಯ ಭೀಮೇಶ್ವರನ ಭಕ್ತಿಗೆ ಒಳಗಾಗಿ ಅನೇಕ ವಚನಗಳನ್ನು ರಚಿಸಿದ್ದಾನೆ.

ನೀಲಗುಂದದಲ್ಲಿ ಗುಡ್ಡದ ವಿರಕ್ತ ಮಠವು ಸ್ಥಾಪನೆಯಾಗಿದೆ. ಲೋಕ ಸಂಚಾರಿ ಶ್ರೀ ಸಿದ್ಧರಾಮ ಸ್ವಾಮಿಗಳು ಕೊಂಕಣ ಹೊಸೂರು, ಗುಂಡಗೆತ್ತಿ, ಹರಿಹರ ತಾಲ್ಲೂಕಿನ ಗಂಗನ ಹರಸಿ ಮುಂತಾದ ಕಡೆ ಅನುಷ್ಠಾನಗೊಂಡು ಆ ಸ್ಥಳಗಳನ್ನು ಜಾಗೃತ ಸ್ಥಳಗಳನ್ನಾಗಿ ಮಾಡಿ ನೀಲಗುಂದಕ್ಕೆ ಬಂದು ಕೆಲವು ದಿನ ನೆಲೆಸಿ ಇಲ್ಲೆ ಲಿಂಗೈಕ್ಯರಾದರು. ಶ್ರೀ ಸಿದ್ಧರಾಮ ಸ್ವಾಮಿಗಳು ಇಲ್ಲಿ ನೆಲೆಸಿದ್ದ ಕಾಲದಲ್ಲಿ ಕೆರೆ, ಬಾವಿ ಕಟ್ಟಿಸಿರುತ್ತಾರೆ. ಈ ಕಾರಣಕ್ಕಾಗಿ ಜನಾನುರಾಗಿಯಾಗಿ ತಪೋನಿಷ್ಠರಾಗಿದ್ದ ಶ್ರೀ ಸಿದ್ಧರಾಮ ಸ್ವಾಮಿಗಳನ್ನು ಇಲ್ಲಿನ ಜನ ಅಪಾರ ಭಕ್ತಿಯಿಂದ ನೋಡಿಕೊಳ್ಳುತ್ತಿದ್ದ ಕಾರಣಕ್ಕೆ ಗುರುಗಳು ಲಿಂಗೈಕ್ಯರಾದ ಮೇಲೆ ಅವರ ಸಮಾಧಿಗೆ ಗದ್ದುಗೆಯನ್ನು ನಿರ್ಮಿಸಿದರು. ಸಿದ್ಧರಾಮ ಸ್ವಾಮಿಗಳು ವಿರಕ್ತರಾಗಿರುವ ಕಾರಣಕ್ಕೆ ಕೋಲಶಾಂತಯ್ಯ ಇವರನ್ನು ಆರಾಧಿಸಿರಬೇಕು. 'ಭೀಮೇಶ್ವರ ಲಿಂಗ ನಿರಂಗಸಂಗ ಎಂಬ ಅಂಕಿತವನ್ನು ಇಟ್ಟುಕೊಂಡು ವಚನಗಳನ್ನು ರಚಿಸಿದ್ದಾರೆ. ನೀಲಗುಂದ ಅರಸೀಕೆರೆಗೆ ಸಮೀಪವಾಗಿರುವುದರಿಂದ ಕೋಲಶಾಂತಯ್ಯ ಭೀಮೇಶ್ವರ ಲಿಂಗವನ್ನು ಆರಾಧಿಸಿದರು. ಕೋಲಶಾಂತಯ್ಯ ಕೊಟ್ಟೂರು ಗುರುಬಸವ ಸಮಾಧಿಯಾದ ನಂತರ ಅರಸಿಕೆರೆಗೆ ಬಂದು ನೆಲೆಸಿದರು. ಕೋಲಶಾಂತಯ್ಯನವರ ಮಠ ಅರಸೀಕೆರೆಯಲ್ಲಿರುವುದನ್ನು ಕಾಣಬಹುದು.

**೨.೫.೬. ಕೆಂಪಯ್ಯಸ್ವಾಮಿ**

ಪಂಚಗಣಾಧೀಶ್ವರರು ಬಾಗಳಿ ಗ್ರಾಮವನ್ನು ಬಿಟ್ಟು ಬಂದಾಗ ಕೆಂಪಯ್ಯ ಹರಪನಹಳ್ಳಿಯಲ್ಲಿ ಉಳಿದುಕೊಳ್ಳುತ್ತಾರೆ.

"ಹರಪನಹಳ್ಳಿಗೆ ಹೋಗುತ್ತಾರೆ ಆ ಸೂಜೀ ರಾಮೂವ್ವ ಸಾದಿಗೆ
ಹರಪನಹಳ್ಳಿಗೆ ಹೋಗುತ್ತಾರೆ ಆ ಸೂಜೀ ರಾಮೂವ್ವ ಸಾದಿಗೆ
ಅವ್ರು ಐದುಮಂದಿ ಅಗಲತಾರೇ ಆ ಸೂಜೀ ರಾಮೂವ್ವ ಸಾದಿಗೆ
ಅವ್ರು ಐದುಮಂದಿ ಅಗಲತಾರೇ ಆ ಸೂಜೀ ರಾಮೂವ್ವ ಸಾದಿಗೆ"[೨೮]

ಹರಪನಹಳ್ಳಿಯಲ್ಲಿ ಕೆಂಪಯ್ಯ ಉಳಿದುಕೊಂಡ, ಕೊಟ್ರೇಶ ನಾನು ಮುದುಕಪಾ, ಮುಪ್ಪಿನಕಾಲ, ಮುದ್ಕ ನನಕಡಿ ಬರದಾಗದುಲ್ಲಪ್ಪ, ನಾನು ಇಲ್ಲೇ ಇರ್ತಿನಪ. ನೀವೆಲ್ಲರ ಹೋಗಿ ಅಂತ್ಹೇಳಿ ಕೆಂಪಯ್ಯ ಹರಪ್ನಳ್ಳ್ಯಾಗ ನಿತ್ಕೊಂಡ. ಹರಪನಹಳ್ಳಿಯಲ್ಲಿದ್ದ ಕೆಂಪಯ್ಯ ವೈಭವದ, ಆಡಂಭರಕ್ಕೋಸ್ಕರ ರಾಯದುರ್ಗಕ್ಕೆ ಬಂದರು. ತಿಪ್ಪೇರುದ್ರಸ್ವಾಮಿ ರಾಯದುರ್ಗದಲ್ಲಿ ಇರುವಾಗ ಕೆಂಪಯ್ಯ ಅವರ ಅಡ್ಡ ಪಲ್ಲಕ್ಕಿ ಉತ್ಸವ ಬರುತ್ತಿತ್ತು. ನಗಾರಿ, ಡೊಳ್ಳು, ಕೋಲಾಟ ಮೊದಲಾದ ವಾದ್ಯಗಳೊಂದಿಗೆ ಮೆರವಣಿಗೆಯಲ್ಲಿ ಜಯಕಾರ ಹಾಕುತ್ತ ಜನರು ಹುಚ್ಚೆದ್ದು ಕುಣಿಯುತ್ತ ಮೆರವಣಿಗೆ ಮಾಡಿಕೊಂಡು ಬರುತ್ತಿದ್ದರು.

"ನರುಳನ ಪರಿಯಲಿ ಚರಿಸುತ ಬಂದನು | ಹರುಷದಿಂದ ರಾಯ್ದುರ್ಗಕ್ಕೆ |

ಪುರದಲಿ ಚಲಿಸುತ್ತಿರಲಿಕ್ಕೆ |ಜನ| ರೆರಗಿದರಾತನ ಪಾದಕ್ಕೆ |

ಶರಣನಾದ ಕೆಂಪಯ್ಯಗೆ ತತ್ವವ ನರುಪುತ ನಡೆದನು ಮುಂದಕ್ಕೆ"[೩೦]

ಹೀಗೆ ಅದ್ದೂರಿ ಮೆರವಣಿಗೆ ಮಾಡಿಕೊಂಡು ಬರುತ್ತಿದ್ದ ಕೆಂಪಯ್ಯನನ್ನು ಕಂಡು ತಿಪ್ಪೇಸ್ವಾಮಿ ನಗುತ್ತಾರೆ. ಇದು ಕೆಂಪಯ್ಯನ ದರ್ಬಾರೇ ಇರಬೇಕು. ಲೋಕಕಲ್ಯಾಣಕ್ಕಾಗಿ ಬಂದ ಕೆಂಪಯ್ಯ ಬಾಹ್ಯ ಆಡಂಬರಕ್ಕೆ ಒಳಗಾಗಿರುವುದನ್ನು ಕಂಡು ತಿಪ್ಪೇಸ್ವಾಮಿಯು ಬೀದಿ ಪಕ್ಕದ ತಿಪ್ಪೆಯಲ್ಲಿ ಹುಚ್ಚನಂತೆ ಕುಣಿಯುತ್ತಿದ್ದನು. ಇವರ ಲೀಲೆಯನ್ನು ನೋಡಿ ಕೆಂಪಯ್ಯ. ತಿಪ್ಪೇಶ ಹೋಗಿ ಹೋಗಿ ತಿಪ್ಪೆಯ ಮೇಲೆ ಹುಚ್ಚನಂತೆ ಕುಣಿಯುತ್ತಿದ್ದೀಯಲ್ಲ; 'ಬಾ ಪಲ್ಲಕ್ಕಿಯಲ್ಲಿ ವಿಶ್ರಮಿಸು' ಎನ್ನುತ್ತಾನೆ. ಬೇಡ ಕೆಂಪಯ್ಯನವರೆ ನೀನು ತಿಪ್ಪೆಯೆಂದು ಈ ತಿಪ್ಪೆಯನ್ನು ನಿಕೃಷ್ಟಭಾವದಿಂದ ಹೇಳುವೆಯಲ್ಲಾ ಈ ತಿಪ್ಪೆಯ ಕಸದ ರಸವನ್ನುಂಡು ನೀಡುವಳು ಭೂತಾಯಿ ರಸದೌತಣವಾ, ಸಕಲ ಚರಾಚರ ಜಗತ್ತಿಗೆ. ಅಂದ ಹಾಗೆ ಇದೇ ನನ್ನ ಸಿಂಹಾಸನ ನೀನು ಪಲ್ಲಕ್ಕಿ ಮೇಲೆಯೇ ಇರು. ನಮಗೆ ತಿಪ್ಪೇಯೇ ಇರಲಿ ಎನ್ನಲು ಅದರ ಮರ್ಮವನ್ನರಿತ ಕೆಂಪಯ್ಯನವರು ತಾನು ಹಿಂದೆ ವಹಿಸಿಕೊಂಡು ಬಂದ ಕೆಲಸದ ಬಗ್ಗೆ ಜ್ಞಾಪಿಸಿಕೊಂಡು ತಿಪ್ಪೇಸ್ವಾಮಿಗೆ ತನ್ನ ತಪ್ಪನ್ನು ಕ್ಷಮಿಸಬೇಕು. ನನ್ನ ಅಜ್ಞಾನದ ಕಣ್ಣನ್ನು ಈ ತಿಪ್ಪೆಯ ಮೇಲೆ ನಿಂತು ತೆರೆಸಿದ್ದೀರಾ. ಆದ್ದರಿಂದ ನಿಮ್ಮನ್ನು ತಿಪ್ಪೇರುದ್ರನೆಂದು ಜಗತ್ತು ಕರೆಯಲಿ ಎಂದು ಹೇಳಿದರು. ಹೀಗೆ ಕೆಂಪಯ್ಯ ತಾನು ಲೌಕಿಕ ಜಗತ್ತಿನಿಂದ ಹೊರಬರಲು ತಿಪ್ಪೇಸ್ವಾಮಿಯ ದರ್ಶನವು ಮುಖ್ಯ ಕಾರಣವಾಗಿದೆ.

ಕೆಂಪಯ್ಯ ರಾಯದುರ್ಗದಲ್ಲಿಯೇ ಸಮಾಧಿ ಹೊಂದಿದ್ದು ೧೬ನೇ ಶತಮಾನದ ಉತ್ತರಾರ್ಧ ೧೭ನೇ ಶತಮಾನದ ಪೂರ್ವಾರ್ಧದಲ್ಲಿ. ಏಕೆಂದರೆ ತಿಪ್ಪೇಸ್ವಾಮಿಯ ಕಾಲವು ಇದೇ ಆಗಿದ್ದು, ಅವರಿಬ್ಬರು ಸಮಕಾಲೀನರಾಗಿದ್ದಾರೆ. ೧೬೧೫ರಲ್ಲಿ ಹರಪನಹಳ್ಳಿಯಲ್ಲಿ ಬದುಕಿದ್ದ ಚೀಲಾಳಸ್ವಾಮಿಯ ಜೀವನ ಚರಿತ್ರೆಯನ್ನು ವಿವರಿಸುವ ಷಟ್ಸ್ಥಲ ಶಿವಾಯಣ (ಕ್ರಿ.ಶ.೧೭೦೦) ಕೃತಿಯು ಎಲ್ಲಿಯೂ ಹರಪನಹಳ್ಳಿ ಕೆಂಪಯ್ಯನ ಉಲ್ಲೇಖವನ್ನು ಮಾಡುವುದಿಲ್ಲ. ಪಂಚಗಣಾಧೀಶ್ವರರಲ್ಲಿನ ಉಳಿದ ನಾಲ್ವರು ಸಂತರನ್ನು ಉಲ್ಲೇಖಿಸುವುದನ್ನು ನೋಡಬಹುದು.

"ವೃದ್ಧಚಾರ್ಯ ನಿಮಿಷನ ವೃಷಭನ

ಸಿದ್ಧರಾಮ ಪ್ರಭುವ ಮರುಳನ

ಸಿದ್ಧಲಿಂಗನ ಕೋಲಶಾಂತನ ಕೊಟ್ಟೂರೇಶ್ವರನ

ಮುದ್ದುಸಂಗನ ರುದ್ರಮುನಿಯ ಪ್ರ

ಸಿದ್ಧಯೋಗ ಸಮಾಧಿಗಿಂತಲೆ

ಮುದ್ದೆನಿಸಿತಹ ಬಸವಪ್ರಭು ಶಿವಯೋಗ ಮಂಟಪವು"[೩೧]

ಷಟ್ಸ್ಥಲ ಶಿವಾಯಣದಲ್ಲಿ ಉಲ್ಲೇಖಗೊಂಡಿರುವಂತೆ ಪಂಚಗಣಾಧೀಶ್ವರರ ಪಂಥದಲ್ಲಿ ಬರುವಂತಹ ಕೋಲಶಾಂತ, ಕೊಟ್ಟೂರೇಶ, ತಿಪ್ಪೇರುದ್ರಸ್ವಾಮಿಯನ್ನು (ರುದ್ರಸ್ವಾಮಿ) ಉಲ್ಲೇಖಗೊಂಡಿವೆ.ಖಾದರೆ

ಪಂಚಗಣಾಧೀಶ್ವರರಲ್ಲಿ ಬರುವಂತಹ ಕೆಂಪಯ್ಯನ ಬಗ್ಗೆ ಇದರಲ್ಲಿ ಉಲ್ಲೇಖವಿಲ್ಲ. ಕೆಂಪಯ್ಯ ಹೆಚ್ಚು ಪ್ರಸಿದ್ಧಿಯನ್ನು ಪಡೆಯದೆ ಹೋಗಿದ್ದ ಕಾರಣದಿಂದ ಆತ ಹೆಚ್ಚು ವ್ಯಾಪಕವಾಗಿ ಚರಿತ್ರೆಯೊಳಗೆ ಅಥವಾ ಜನಪದರಲ್ಲಿ ಗುರುತಿಸಿಕೊಳ್ಳದೆ ಹೋದನು. ಭಯವು ಕೂಡ ಭಕ್ತಿಯಾಗಿ ಮಾರ್ಪಡದ ನೆಲೆಯಲ್ಲಿ ಕೆಂಪಯ್ಯ ಕಂಡುಬರುತ್ತಾರೆ. ಹರಪನಹಳ್ಳಿಯಿಂದ ಕೆಂಪಯ್ಯ ರಾಯದುರ್ಗಕ್ಕೆ ಹೋದರು. ಅಲ್ಲಿ ಕೆಲವು ಸಮಯ ಕಳೆದು ನಂತರ ಅಲ್ಲೆ ಸಮಾಧಿಯಾದರು. ರಾಯದುರ್ಗದಲ್ಲಿ ಕೆಂಪಯ್ಯನ ಸಮಾಧಿಯಿದೆ.

**೨.೫.೭. ಪಂಚಗಣಾಧೀಶ್ವರರು ಸಂಚರಿಸಿದ ಸ್ಥಳಗಳು**

ಪಂಚಗಣಾಧೀಶ್ವರರು ಧರ್ಮ ಪ್ರಚಾರದ ಸಂದರ್ಭದಲ್ಲಿ ಪವಾಡಗಳನ್ನು ಮಾಡುತ್ತ ಪ್ರಯಾಣ ಮಾಡಿ, ಮುಂದೆ ಬೇರೆ ಬೇರೆ ಕ್ಷೇತ್ರಕ್ಕೆ ಹೋಗಿರುವುದರಿಂದ ಅವರು ಉಳಿದುಕೊಂಡಂತಹ ಸ್ಥಳಗಳಲ್ಲಿ ದೇವಾಲಯಗಳು ನಿರ್ಮಾಣವಾಗಿರುವುದನ್ನು ಕಾಣಬಹುದು. ಅವುಗಳು ಈ ಕೆಳಗಿನಂತಿವೆ.

೧. ನಾಯಕನಹಟ್ಟಿ
೨. ಮಲ್ಲೂರಹಟ್ಟಿ
೩. ಘುಟ್ಟಪರ್ತಿ
೪. ಉಡೇವು
೫. ಕೋನಸಾಗರ
೬. ಕೊಂಡ್ಲಹಳ್ಳಿ
೭. ನಿಡುಗಲ್ಲು ಕೋಟೆ
೮. ವದನಕಲ್ಲು
೯. ಖಂಡೇನಾಹಳ್ಳಿ
೧೦. ಆದಿವಾಲ
೧೧. ಎಲೆಯೂರು
೧೨. ಚಿತ್ರದುರ್ಗ
೧೩. ಗೋನೂರು
೧೪. ಭದ್ರಾವತಿ
೧೫. ಶಿವಮೊಗ್ಗ
೧೬. ಸಾಗರ
೧೭. ಸೊರಬ
೧೮. ಎಮ್ಮೆಹಟ್ಟಿ
೧೯. ಮಾರಮ್ಮನಹಳ್ಳಿ
೨೦. ಗಜೇಂದ್ರಗಡ
೨೧. ಗುಡ್ಡದ ನೇರಲಕೆರೆ
೨೨. ಹೊಸಳ್ಳಿ
೨೩. ಚಿಗಲಿ
೨೪. ಬೆಂಕಿಕೆರೆ
೨೫. ಶಿರಾ

**ಕೊಟ್ಟೂರು ಬಸವೇಶ್ವರರಿಗೆ ಸಂಬಂಧಿಸಿದ ದೇವಾಲಯಗಳಿರುವ ಊರುಗಳ ಹೆಸರುಗಳು ಕೆಳಗಿನಂತಿವೆ.**

೧. ಬಾಗಳಿ
೨. ಕುಪ್ಪಿನ ಕೆರೆ
೩. ಅರಸೀಕೆರೆ
೪. ಹರಪನಹಳ್ಳಿ
೫. ಸಾಸಲೂರು
೬. ಕೊಟ್ಟೂರು
೭. ಮತಿಘಟ್ಟ
೮. ಕೊಂಡೂರು
೯. ಇಕ್ಕೇರಿ
೧೦. ಕಂಚಿಗೆರೆ

೧೧. ಅಣವಗೆರೆ
೧೨. ಬೆಲಗೂರು
೧೩. ಹೊಳಲಕೇರಿ
೧೪. ರಟ್ಟಿಹಳ್ಳಿ
೧೫. ಗೋವಿಂದವಡಿ
೧೬. ಹಿರಿಯಕಲ್ಲು
೧೭. ತರುವೂರು
೧೮. ಪಾಲ್ಕುರಿಕೆ
೧೯. ಹರಪುರಿ (ಹರಪನಹಳ್ಳಿ)
೨೦. ಸೊಂಡೂರು
೨೧. ಗುಡ್ಡಬ್ಬೆಹೊಳೆ

**ಕೋಲಶಾಂತಯ್ಯನವರಿಗೆ ಸಂಬಂಧಿಸಿದ ದೇವಾಲಯಗಳಿರುವ ಊರುಗಳ ಹೆಸರುಗಳು ಈ ಕೆಳಗಿನಂತಿವೆ.**

೧. ಕೊಟ್ಟೂರು
೨. ಬಿದರಕೆರೆ
೩. ಅರಸೀಕೆರೆ

**ಕೆಂಪಯ್ಯಸ್ವಾಮಿ**

೧. ಕುಪ್ಪಿನಕೆರೆ
೨. ಬಾಗಳಿ
೩. ಹರಪನಹಳ್ಳಿ
೪. ರಾಯದುರ್ಗ

**ಮದ್ದಾನಸ್ವಾಮಿ**

೧. ಬಾಗಳಿ
೨. ಕೂಲಹಳ್ಳಿ

**ಗೋಣಿ ಬಸವೇಶ್ವರ**

೧. ಕೂಲಹಳ್ಳಿ
೨. ಚಿಗಟೇರಿ
೨. ಅಡವಿಹಳ್ಳಿ
೪. ಕೊಳಚಿ
೫. ಬಾಗಳಿ
೬. ಬಂಡ್ರಿ
೧. ಕೊಂಡೇನಹಳ್ಳಿ (ಹಡಗಲಿ ತಾಲೂಕು)
೨. ಹೀಲದಳ್ಳಿ
೩. ಹೊಳಲು
೪. ಹಾವನೂರು
೫. ಅಡವಿ ಸೋಮಲಾಪುರ
೬. ಕರುವಿನ ಕೋಟೆ
೭. ಗಂಜಿ
೮. ಎಳವತ್ತಿ
೯. ನಿಂಬಳಗಿ
೧೦. ಸಿಪ್ಪಿ (ಶಿರ್ಸಿ)
೧೧. ಚಿತ್ರದುರ್ಗ
೧೨. ಶಿಖಾರಿಪುರ
೧೩. ಹರಪನಹಳ್ಳಿ
೧೪. ಗಾಳಿಪೂಜೆ ಪಟ್ಟಣ
೧೫. ಹಮ್ಮಿಗಿ
೧೬. ಅಳವಂಡಿ
೧೭. ಗುಮ್ಮಗೋಳ
೧೮. ಚಿಕ್ಕಳ್ಳಿ
೧೯. ಓಬಳಾಪುರ
೨೦. ಕುರುವತ್ತಿ

## ಅಡಿ ಟಿಪ್ಪಣಿ

೧. ಪಂಚಗಣಾಧೀಶ್ವರರ: ಸಾಂಸ್ಕೃತಿಕ ಅಧ್ಯಯನ., ಡಾ.ಸತೀಶ ಪಾಟೀಲ, ಪುಟ.೨
೨. ಬಸವಲಿಂಗಕೃತ ಕೊಟ್ಟೂರು ಗುರುಬಸವ ಚಾರಿತ್ರ್ಯ., ಆರ್.ಸಿ.ಹಿರೇಮಠ, ಪುಟ.೫
೩. ಪಂಚಗಣಾಧೀಶ್ವರರು, ಸದ್ಯೋಜಾತಮೂರ್ತಿ, ಪುಟ.೨
೪. ಪಂಚಗಣಾಧೀಶ್ವರರು, ಎಸ್.ಎಸ್.ಹಿರೇಮಠ, ಪುಟ.೧೫೪
೫. ಶಿವಶರಣ ರತ್ನಕಥಾಕೋಶ, ತು.ಸು.ಶಾಮರಾವ್, ಪುಟ.೧೬೮
೬. ನೂರೊಂದು ವಿರಕ್ತರು ಒಂದು ಅಧ್ಯಯನ., ಡಾ.ಜೆ.ಕುಮಾರ್ ಅವರ ಅಪ್ರಕಟಿತ ಪಿಎಚ್‌ಡಿ. ಮಹಾಪ್ರಬಂಧ, ಪುಟ.೧೪೬
೭. ಅದೇ ಪುಟ, ೧೬೭
೮. ಅದೇ ಪುಟ, ೧೪೩
೯. ಅದೇ ಪುಟ, ೧೪೩
೧೦. ಅದೇ ಪುಟ, ೧೮೮
೧೧. ಅದೇ ಪುಟ.೧೮೧
೧೨. ಪಂಚಗಣಾಧೀಶ್ವರರ ಸಾಂಸ್ಕೃತಿಕ ಅಧ್ಯಯನ., ಸತೀಶ ಪಾಟೀಲ, ಪುಟ.೪
೧೩. ಪಂಚಗಣಾಧೀಶ್ವರರು, ಸಿ.ಸದ್ಯೋಜಾತಮೂರ್ತಿ, ಪುಟ.೧೫೦
೧೪. ಪಂಚಗಣಾಧೀಶ್ವರರ ಸಾಂಸ್ಕೃತಿಕ ಅಧ್ಯಯನ., ಸತೀಶ ಪಾಟೀಲ, ಪುಟ.೧
೧೫. ಬಸವಲಿಂಗಕೃತ ಕೊಟ್ಟೂರು ಗುರುಬಸವ ಚಾರಿತ್ರ್ಯ., ಆರ್.ಸಿ.ಹಿರೇಮಠ, (೭ನೇ ಸಂಧಿ)
೧೬. ನೂರೊಂದು ವಿರಕ್ತರು : ಒಂದು ಅಧ್ಯಯನ., ಡಾ.ಜೆ.ಕುಮಾರ್ ಅವರ ಅಪ್ರಕಟಿತ ಪಿಎಚ್‌ಡಿ. ಮಹಾಪ್ರಬಂಧ, ಪುಟ.೨೦೮.
೧೭. ಪಂಚಗಣಾಧೀಶ್ವರರು : ಸಾಂಸ್ಕೃತಿಕ ಅಧ್ಯಯನ., ಡಾ.ಸತೀಶ ಪಾಟೀಲ, ಪುಟ.೧೧
೧೮. ಅದೇ ಪುಟ.೧೨
೧೯. ಅದೇ ಪುಟ.೧೨
೨೦. ಅದೇ ಪುಟ.೧೩
೨೧. ಅದೇ ಪುಟ.೧೬
೨೨. ಪಂಚಗಣಾಧೀಶ್ವರರು : ಸಾಂಸ್ಕೃತಿಕ ಅಧ್ಯಯನ., ಸತೀಶ ಪಾಟೀಲ, ಪುಟ.೨೯
೨೩. ನೂರೊಂದು ವಿರಕ್ತರು: ಒಂದು ಅಧ್ಯಯನ, ಡಾ.ಕುಮಾರ್ ಜೆ. ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಪು.೨೦೮
೨೪. ಶ್ರೀಗುರು ತಿಪ್ಪೇರುದ್ರಸ್ವಾಮಿ ಚರಿತ್ರೆ., ಕೊಟ್ರಪ್ಪಯ್ಯಶಾಸ್ತ್ರಿಗಳು. ಎಂ.ವಿ.ಎಸ್, ಪುಟ.೩-೨೪
೨೫. ಅದೇ ಪುಟ.೩
೨೬. ಶ್ರೀ ತಿಪ್ಪೇಶನ ಚಾರಿತ್ರಿಕ ಲಾವಣಿ ಶತಕ., ವೇ.ಆಪರೋಕ್ಷಾನುಭವಿ ಶ್ರೀ ಸಕ್ರಪ್ಪ ಸ್ವಾಮಿಗಳವರು, ಪುಟ.೧
೨೭. ಅದೇ ಪುಟ.೬

೨೮. ಪಂಚಗಣಾಧೀಶ್ವರರು: ಹಿರೇಮಠ ಎಸ್.ಎಸ್, ಪುಟ.೭೮

೨೯. ಅದೇ ಪುಟ.೪೩

೩೦. ತಿಪ್ಪೇಶನ ಚಾರಿತ್ರಿಕ ಲಾವಣಿ ಶತಕ., ವೇ.ಅಪರೋಕ್ಷಾನುಭವಿ ಶ್ರೀ ಸಕ್ರಪ್ಪ ಸ್ವಾಮಿಗಳವರು, ಪುಟ.೧

೩೧. ಪಂಚಗಣಾಧೀಶ್ವರರ: ಸಾಂಸ್ಕೃತಿಕ ಅಧ್ಯಯನ, ಸತೀಶ ಪಾಟೀಲ, ಪುಟ.೪೪

## ಅಧ್ಯಾಯ-ಮೂರು

## ಪಂಚಗಣಾಧೀಶ್ವರರು ರೂಪುಗೊಂಡ ಬಗೆ

೩.೧. ಪಂಚಗಣಾಧೀಶ್ವರರ ಹಿನ್ನೆಲೆ

೩.೨. ಪಂಚಗಣಾಧೀಶ್ವರರು ಮತ್ತು ಕೆಳವರ್ಗದ ಸಂಬಂಧ

೩.೩. ಪಂಚಗಣಾಧೀಶ್ವರರು ಮತ್ತು ಪ್ರಭುತ್ವದೊಂದಿಗಿನ ಸಂಬಂಧ

೩.೪. ಪಂಚಗಣಾಧೀಶ್ವರರಾಗಿ ಸಲ್ಲಿಸಿದ ಸೇವೆ ಮತ್ತು ಸಾಮಾಜಿಕ ಬದುಕು

# ಅಧ್ಯಾಯ-ಮೂರು

# ಪಂಚಗಣಾಧೀಶ್ವರರು ರೂಪುಗೊಂಡ ಬಗೆ

೧೨ನೇ ಶತಮಾನದ ಶರಣರ ಚಳವಳಿಗೆ ಮಹತ್ವದ ಸ್ಥಾನವಿದೆ. ಇವರ ನಂತರ ಬಂದಂತಹ ಸೂಫಿಗಳು, ನಾಥರು, ವಿರಕ್ತರು, ಆರೂಢರು ಕಂಡುಬರುತ್ತಾರೆ. ಇವರು ಆದ ನಂತರ ಕೊಡೆಕಲ್ಲ ಬಸವಣ್ಣ, ಮೋನಪ್ಪಯ್ಯ, ಫಕ್ಕೀರೇಶ, ಸಾವಳಾಂಗಿ ಶಿವಲಿಂಗ, ಮಂಟೇಸ್ವಾಮಿ, ಮಾದೇಶ್ವರ ಕಂಡು ಬರುತ್ತಾರೆ. ಇವರ ಮೂಲ ಉದ್ದೇಶ ಸಮಾನತೆಯ ನೆಲೆಗಟ್ಟಿನ ಮೇಲೆ ಸಮಾಜವನ್ನು ಕಟ್ಟಬೇಕು ಎಂಬುದಾಗಿತ್ತು. ಹೀಗೆ ಹುಟ್ಟಿಕೊಂಡ ಪಂಥವೇ ಪಂಚಗಣಾಧೀಶ್ವರರ ಪಂಥ.

ಸುಮಾರು ೧೬-೧೭ನೇ ಶತಮಾನದಲ್ಲಿ ಬಾಳಿ ಬದುಕಿದ್ದರೆನ್ನಲಾದ ಗುರು ಬಸವೇಶ್ವರ, ತಿಪ್ಪೇರುದ್ರಸ್ವಾಮಿ, ಕೋಲಶಾಂತ, ಕೆಂಪಯ್ಯ, ಮದ್ದಾನಸ್ವಾಮಿ ಮತ್ತು ಮದ್ದಾನಸ್ವಾಮಿ ಮಗ (ಗೋಣಿಬಸವ) ಇವರನ್ನು ಮಧ್ಯಕರ್ನಾಟಕ ಭಾಗದಲ್ಲಿ ಪಂಚಗಣಾಧೀಶ್ವರರು ಎಂದು ಗುರುತಿಸಲಾಗಿದೆ. "ಈ ಪಂಥವು ಶರಣ ಚಳವಳಿಯೊಂದಿಗೆ ಹಾಗೂ ಅಂದಿನ ಸಮಕಾಲೀನ ಪರಂಪರೆಗಳೊಂದಿಗೆ ನಿಕಟ ಸಂಬಂಧವನ್ನು ಹೊಂದಿದೆ. ಅದು ಒಂದನ್ನೊಂದು ಆಧರಿಸಿಕೊಂಡು, ಪರಸ್ಪರ ಸಂಬಂಧವನ್ನು ಕಾಯ್ದುಕೊಂಡು ಬಂದಿರುವುದರಿಂದ ಪಂಚಗಣಾಧೀಶ್ವರರನ್ನು ಮಧ್ಯಕಾಲೀನ ಶರಣ ಚಳವಳಿಯಿಂದಾಗಲಿ ಸಮಕಾಲೀನ ಪಂಥ ಪರಂಪರೆಗಳಿಂದಾಗಲಿ ಬೇರ್ಪಡಿಸಿ ಅರ್ಥಮಾಡಿಕೊಳ್ಳಲು ಆಗಲಾರದು."[1] ಪರಸ್ಪರ ಒಂದನ್ನೊಂದು ಅವಲಂಬಿಸಿಕೊಂಡಿರುವುದು ಕಂಡುಬರುತ್ತದೆ.

೧೨ನೇ ಶತಮಾನದ ಶಿವಶರಣರು ಆದರ್ಶವಾದದಲ್ಲಿ ತಮ್ಮ ಗಮನವನ್ನು ಕೇಂದ್ರೀಕರಿಸಿದ್ದರು. ಪ್ರಾರಂಭದಲ್ಲಿ ವಿರಕ್ತ ಮಠಗಳು ಅಸಂಘಟಿತ ಸ್ವರೂಪದಲ್ಲಿದ್ದವು. ೧೫ನೇಯ ಶತಮಾನದಲ್ಲಿ ವಿರಕ್ತ ಮಠಗಳು ಪುನಶ್ಚೇತನಕ್ಕೆ ಒಳಪಟ್ಟವು. ವೀರಶೈವವು ರಾಜಧರ್ಮವಾಗಿ ಪ್ರವರ್ಧಮಾನಕ್ಕೆ ಬರಲು ಅಂದಿನ ರಾಜಕೀಯವೂ ಮುಖ್ಯ ಕಾರಣವಾಗಿರಬೇಕು. ಕರ್ನಾಟಕದ ದಕ್ಷಿಣ ಮೂಲೆಯಲ್ಲಿನ ಪಾಳೆಯ ಪಟ್ಟುಗಳ ಆಳ್ವಿಕೆದಾರರು ವಿಜಯನಗರ ಸಾಮ್ರಾಜ್ಯದ ಅಧೀನದಲ್ಲಿ ವಿಜಯನಗರದ ಮುಖ್ಯ ರಾಜಧರ್ಮವಾಗಿದ್ದ ವೀರಶೈವವನ್ನು ಅನುಸರಿಸುವುದು ಅದರ ಅಧೀನ ಆಡಳಿತಗಳಿಗೆ ಅನುಕೂಲಕಾರಿ ಹಾಗೂ ಕಾಲಧರ್ಮದ ವೈಶಿಷ್ಟವೇ ಆಗಿತ್ತು.

ಬೇರೆ ಬೇರೆ ಕಾರಣಗಳಿಂದ ಸ್ವಂತ ಭೂ ಹಿಡುವಳಿದಾರ ರೈತವರ್ಗವನ್ನು ಪ್ರೋತ್ಸಾಹಿಸಲಾಯಿತು ಹಾಗೂ ಈ ಬಗೆಯ ರೈತ ಹಿಡುವಳಿದಾರರು ಬಹುಮಟ್ಟಿಗೆ ಶೂದ್ರ ಜಾತಿಗಳೇ ಆಗಿದ್ದರೆಂಬುದು ವಿಶೇಷ. ಚಿಕ್ಕದೇವರಾಜನ ಕಾಲದಲ್ಲಿ ಈ ಬಗೆಯಲ್ಲಿ ಭೂ ಹಿಡುವಳಿ ಒಡೆತನ ಪಡೆದ ಶೂದ್ರ ವರ್ಗಗಳು ತಮ್ಮ ಸಾಮಾಜಿಕ, ಆರ್ಥಿಕ ಸ್ಥಾನಮಾನವನ್ನು ಉತ್ತಮಪಡಿಸಿಕೊಂಡು ಒಕ್ಕಲಿಗ, ಲಿಂಗಾಯುತ, ಕುರುಬ, ಈಡಿಗ, ಬೇಡ ರಾಜಪರಿವಾರ ಕೃಷಿಯಿಂದ ಬರುವ ಆದಾಯವನ್ನು ಮತ್ತಷ್ಟು ಹೆಚ್ಚಿಸಿಕೊಳ್ಳಲು ಚಿಕ್ಕದೇವರಾಜ ನಡೆಸಿದ ಪ್ರಯತ್ನಗಳು ರೈತಾಪಿಯ ಮೇಲೆ ಹೊರೆಯಾಗಿ ಮಾರ್ಪಟ್ಟು ರೈತ ದಂಗೆ ನಡೆಯಿತು.

ಅಂದು ರೈತರು ಅತಿಯಾದ ತೆರಿಗೆಯಿಂದ ಬೇಸತ್ತಿದ್ದರು. ರೈತರಿಗೆ ಉತ್ಪಾದನಾ ವಸ್ತುಗಳನ್ನು ಮಾರಾಟ ಮಾಡುವುದಕ್ಕೆ ಮತ್ತು ಕೊಳ್ಳುವುದಕ್ಕೆ ಸಂತೆಗಳು ನಿರ್ಮಾಣಗೊಂಡವು. ನಾಣ್ಯದ ಚಲಾವಣೆ ಅಸ್ತಿತ್ವಕ್ಕೆ ಬಂತು. ನೊಂದ ರೈತಾಪಿ ವರ್ಗದ ಜನರು ಮೇಲ್ವರ್ಗದ ಸಾಮ್ರಾಜ್ಯಶಾಹಿ ಅಧಿಕಾರಿಗಳ ಸಾಮಾಜಿಕ ಅಸಮಾನತೆಯನ್ನು ಸಮರ್ಥಿಸುತ್ತಿದ್ದ ದೇವಾಲಯ, ಅಗ್ರಹಾರಗಳಲ್ಲಿದ್ದ ಪುರೋಹಿತಶಾಹಿ, ಊಳಿಗಮಾನ್ಯ ಪದ್ಧತಿ ಪೋಷಿಸಿಕೊಂಡು ಬಂದಂತಹ ಭೂ ಮಾಲೀಕ ವರ್ಗಗಳ ವಿರುದ್ಧ ದಂಗೆಯೆದ್ದರು. ಸಾಮಾನ್ಯ ಜನರೆಲ್ಲ ಸೇರಿ ೧೨ನೇ ಶತಮಾನದ ಶರಣರ ಕ್ರಾಂತಿಯಲ್ಲಿ ಪಾಲ್ಗೊಂಡರು. ಹೀಗೆ ಪಾಲ್ಗೊಂಡವರಲ್ಲಿ ಹೆಚ್ಚು ಜನ ದುಡಿಯುವವ ವರ್ಗದವರಾಗಿದ್ದರು. ಅಂಬಿಗರ ಚೌಡಯ್ಯ, ಆಯ್ದಕ್ಕಿ ಮಾರಯ್ಯ, ಮೇದಾರ ಕೇತಯ್ಯ, ಬಹುರೂಪಿ ಚೌಡಯ್ಯ, ತುರುಗಾಹಿ ರಾಮಣ್ಣ, ನುಲಿಯ ಚಂದಯ್ಯ, ಡೋಹರ ಕಕ್ಕಯ್ಯ, ಅಕ್ಕಮಹಾದೇವಿ, ನಾಗಲಾಂಬಿಕೆ, ಲಕ್ಕಮ್ಮ ಮೊದಲಾದ ಶಿವಶರಣೆಯರು ವಚನಗಳ ಮುಖೇನ ಹೊಸ ರೂಪವನ್ನು ಸೃಷ್ಟಿಸಿದವರು. ದೇವಾಲಯ ಕೇಂದ್ರಿತ ಪದ್ಧತಿಯನ್ನು ನಿರಾಕರಿಸಿ ಜಂಗಮ ಸಮಾಜ ನಿರ್ಮಾಣದಲ್ಲಿ ತೊಡಗಿಕೊಂಡರು. ಹೀಗೆ ಹಲವಾರು ವರ್ಷಗಳಿಂದ ಗುಪ್ತಗಾಮಿನಿಯಾಗಿ ಹರಿದ ವೀರಶೈವ ಧರ್ಮ ಮತ್ತೆ ಪ್ರೌಢದೇವರಾಯನ ಕಾಲದಲ್ಲಿ ಪುನಶ್ಚೇತನ ಪಡೆಯಿತು. ಅದರ ನಂತರ ನೂರೊಂದು ವಿರಕ್ತರು ಈ ಧರ್ಮವನ್ನು ಮತ್ತೆ ಸಂಘಟಿಸಿದರು. ಹೀಗೆ ಬಂದವರಲ್ಲಿ ಎಡೆಯೂರಿನ ತೋಂಟದ ಸಿದ್ಧಲಿಂಗಯತಿಯ ನೇತೃತ್ವದಲ್ಲಿ ೭೦೧ ಜನ ವಿರಕ್ತರು ಲಿಂಗಾಯತ ಧರ್ಮ ಪ್ರಸಾರ ಕಾರ್ಯದಲ್ಲಿ ನಿಷ್ಠೆಯನ್ನು ತೋರಿದರು. ಸಿದ್ಧಲಿಂಗಯತಿಯ ಪ್ರಭಾವದಿಂದಾಗಿ ಗುಮ್ಮಳಾಪುರದ ಸಿದ್ಧಲಿಂಗಯತಿ, ಗೂಳೂರು ಸಿದ್ಧವೀರಣ್ಣೊಡೆಯರು, ವಿರೂಪಾಕ್ಷ ಪಂಡಿತ, ಸಿದ್ಧನಂಜೇಶ, ಶಾಂತಲಿಂಗ ದೇಶಿಕ, ಮೋದಿಯ ರುದ್ರ, ಗುಬ್ಬಿಯ ಮಲ್ಲಣಾರ್ಯ, ಇಮ್ಮಡಿ ತೋಂಟದಾರ್ಯ, ಸಿದ್ಧಲಿಂಗ ಶಿವಯೋಗಿ, ಹರೀಶ್ವರ, ಸಿದ್ಧವೀರಣ್ಣಾರ್ಯ, ಸಂಪಾದನೆಯ ಬೋಳಬಸವ, ಸಂಪಾದನೆಯ ಗುರುಲಿಂಗದೇವ, ವಿರಕ್ತರು ಶರಣ ಚಳವಳಿಗೆ ಧಾರ್ಮಿಕ ರೂಪವನ್ನು ನೀಡಿದರು.

"ರೇವಣ್ಣ, ಅಲ್ಲಮ ಹಾಗೂ ಸಿದ್ಧರಾಮರು, ಸಿದ್ಧರು, ತೋಂಟದ ಸಿದ್ಧಲಿಂಗನು ರೇವಣ್ಣ ಸಿದ್ದನು ಶೈವ ಸಿದ್ಧನಾಗಿದ್ದನು. ಇವರ ಜೊತೆ ಅವಧೂತರು, ಆರೂಢರು, ಯೋಗಿಗಳು ಎನ್ನಲಾದ ನಿಜಗುಣ ಶಿವಯೋಗಿ, ಕಡಕೋಳ ಮಡಿವಾಳಪ್ಪ, ಕೂಡಲೂರು ಬಸವಲಿಂಗ, ತಿಂಥಿಣಿ ಮೋನಪ್ಪ, ಸರ್ವಭೂಷಣ,

ಶಿವಯೋಗಿ, ಶಿಶುನಾಳ ಶರೀಫ, ನಿರಂಜನಾವಧೂತ, ರಾಂಪುರದ ಪರಪ್ಪಸ್ವಾಮಿ, ಅವಧೂತ ಶಿವಯೋಗಿ, ಅಲ್ಲೀಪುರದ ಮಹದೇವತಾತ, ಗಬ್ಬೂರ ಹಂಪಣ್ಣ, ಚೆಳ್ಳಗುರ್ಕಿ ಯರ್ರಿತಾತ" ಮಂಟೇಸ್ವಾಮಿ, ಮಾದೇಶ್ವರ ಹೀಗೆ ಮೊದಲಾದವರು ಕುಲೇಳು ಹದಿನೆಂಟು ಜಾತಿಗಳು ಒಂದೇ ಎಂದು ಸಾರಿದ್ದ, ಆಶಯ ಅವರ ನಂತರ ಒಡೆದು ಜಾತಿ ಅಸಮಾನತೆ ಕಂಡುಬಂತು".[೨] ಇಂತಹ ಸಮಯದಲ್ಲಿ ಕೆಳವರ್ಗದ ಸಾಂಸ್ಕೃತಿಕ ನಾಯಕರಾಗಿ ಇವರು ರೂಪುಗೊಂಡರು. ಮಧ್ಯಕರ್ನಾಟಕ ಭಾಗದಲ್ಲಿನ ಪಂಥವಾಗಿ ಪಂಚ ಗಣಾಧೀಶ್ವರರ ಪಂಥ ರೂಪುಗೊಳ್ಳುವಂತಾಯಿತು.

### ೩.೧. ಪಂಚಗಣಾಧೀಶ್ವರರ ಹಿನ್ನೆಲೆ

ಆ ಒಕ್ಕೂಟದಿಂದ ಸಿಡಿದು ನಿಂತರೇ? ಎಂಬ ಶರಣರ ಜನಪದ ಚಳವಳಿಯ ಮೂಲಕ ಚರಿತ್ರೆಯಲ್ಲಿಯೇ ಮೊದಲಬಾರಿಗೆ ಬೀದಿಗೆ ಬಂದ ಕೆಳವರ್ಗದ ಜನ ನಂತರ ಅನಿರೀಕ್ಷಿತ ಸೋಲಿನಿಂದಾಗಿ ಹತಾಶರಾಗಿ ತಮ್ಮ ದಾರಿಗಳನ್ನು ಹಿಡಿದಂತೆ ಕಾಣುತ್ತದೆ. ಪಟ್ಟಭದ್ರ ಸಂಸ್ಕೃತಿಗೆ ವಿರುದ್ಧವಾದ ಕೆಳವರ್ಗಗಳ ಅಸ್ತಿತ್ವವನ್ನು ಪುನರ್ ಸ್ಥಾಪಿಸುವ ಪ್ರತಿ ಸಂಸ್ಕೃತಿಯೊಂದರ ನಿರ್ಮಾಣ ಇವರ ಉದ್ದೇಶವಾಗಿದೆ. ಸೃಷ್ಟಿಯಲ್ಲಿ ಎಲ್ಲರೂ ಸಮಾನರು, ಮೇಲು, ಕೀಳು, ಸ್ತ್ರೀ ಪುರುಷರೆಂಬ ಭೇದ ಭಾವವನ್ನು ತೊಡೆದು ಹಾಕಲು ಶ್ರಮಿಸಿದವರು.

ವಿಶ್ವದಲ್ಲಿ ನಾನಾ ಜಾತಿ, ಮತ, ಕುಲ, ಧರ್ಮಗಳಿವೆ. ಎಲ್ಲಾ ಧರ್ಮಗಳ ಮೂಲ ಉದ್ದೇಶ ಮಾನವನಲ್ಲಿ ಮಾನವೀಯ ಮೌಲ್ಯಗಳನ್ನು ವೃದ್ಧಿಸಿ ಪ್ರತಿವ್ಯಕ್ತಿಯೂ ಉತ್ತಮ ಮಾನವನಾಗಿ ಬಾಳುವಂತೆ ಪ್ರೇರೇಪಿಸುವುದೇ ಆಗಿದೆ. ಈ ಮೂಲ ಉದ್ದೇಶವನ್ನು ಅರಿಯದ ಮತಾಂಧರು, ಮಾನವೀಯ ಧರ್ಮ ಹಾಗೂ ಮಾನವೀಯ ಮೌಲ್ಯಗಳನ್ನು ಮರೆತು, ಧರ್ಮದ ಹೆಸರಿನಲ್ಲಿ ಅಶಾಂತಿಯುಂಟು ಮಾಡುತ್ತಿರುವುದು ಕಂಡುಬರುತ್ತದೆ. ಹಾಗಾಗಿ ಅಮಾನವೀಯತೆ ಎಲ್ಲಡೆ ತುಂಬಿ ಹೋಗಿತ್ತು. ಅಂತಹ ಸಮಯದಲ್ಲಿ ಜನತೆಯನ್ನು ಕಷ್ಟದಿಂದ ಪಾರುಮಾಡಲು ಮೂಢನಂಬಿಕೆ, ಕಂದಾಚಾರ, ಜಾತೀಯತೆಯ ವಿರುದ್ಧ ಹೋರಾಟ ಮಾಡಿದರು. ವಚನಕಾರರ ನಂತರದ ಕಾಲಘಟ್ಟದಲ್ಲಿ ಬರುವ ಬಸವಾದಿ ಶರಣರು ಕಾಯಕ ಸಂಸ್ಕೃತಿಯನ್ನು ನಮ್ಮ ನಾಡಿನಲ್ಲಿ ಬಿಟ್ಟು ಹೋಗಿದ್ದರು, ಮತ್ತೆ ಆ ಪರಂಪರೆಯನ್ನು ಮುಂದುವರಿಸಿದರು. ಮೂಢನಂಬಿಕೆ, ಜಾತಿ ಪದ್ಧತಿಯ ವಿರುದ್ಧ ಹೋರಾಡಿ ಸಮಾನತೆಯ ಆಧಾರದ ಮೇಲೆ ಸಮಾಜವನ್ನು ಕಟ್ಟಲು ಹೋರಾಟ ಮಾಡಿದವರು ಪಂಚಗಣಾಧೀಶ್ವರರು.

ಪಂಚಗಣಾಧೀಶ್ವರರು ಬರುವುದಕ್ಕಿಂತ ಹಿಂದೆ ರೈತರಿಗೆ ಅಪಾರ ಪ್ರಮಾಣದ ತೆರಿಗೆ ಹಾಕಲಾಗಿತ್ತು. ವಿರೋಧಿ ಪಾಳೆಪಟ್ಟಿನ ಸೈನಿಕರಿಂದ ಯಾವಾಗ ಬೇಕಾದರೂ ಧ್ವಂಸಕ್ಕೆ ಗುರಿಯಾಗುವಂತಹ ಆತಂಕವನ್ನು ಜನರು ಎದುರಿಸಬೇಕಾಯಿತು. ಮಧ್ಯಕಾಲೀನ ಸಂದರ್ಭದಲ್ಲಿ ಯುದ್ಧಗಳಿಂದ, ಅನಾಯಕತ್ವದಿಂದ, ರಾಜಕೀಯ ಸ್ಥಿತ್ಯಂತರಗಳಿಂದ ಜನಸಮುದಾಯಗಳು ಅನೇಕ ಬಗೆಯಲ್ಲಿ ಕಷ್ಟ-ನಷ್ಟಗಳನ್ನು ಅನುಭವಿಸುವಂತಾಯಿತು. ಹೊರಗಿನವರ ಆಕ್ರಮಣದಿಂದ ಅನ್ಯಭಾಷೆ, ಧರ್ಮ, ಸಂಸ್ಕೃತಿಗಳು ಜನಸಮುದಾಯದೊಳಗೆ ಪ್ರವೇಶಿಸಿದವು. ಇವುಗಳಿಂದ ಮುಕ್ತಿ ಪಡೆಯಲು ಜನತೆ ಆಲೋಚಿಸುವ ಹೊತ್ತಿನಲ್ಲಿ

ಇವರ ನೋವುಗಳನ್ನು ನಿವಾರಿಸಲು, ಅಶಾಂತಿಯಿಂದ ಬಳಲುತ್ತಿದ್ದ ಜನರಿಗೆ ಶಾಂತಿ ಒದಗಿಸುವ ಹಾಗೂ ಧರ್ಮದ ಸುಳಿಯಲ್ಲಿ ಸಿಕ್ಕು ನಲುಗುತ್ತಿರುವ ಜನತೆಗೆ ಸಾಂತ್ವನ ನೀಡಲು ಪಂಚಗಣಾಧೀಶ್ವರರು ಮುಂದಾದರು.

ಆಧ್ಯಾತ್ಮಿಕ ಶಕ್ತಿಯನ್ನು ಪಡೆದುಕೊಂಡಿದ್ದ ಇವರು ಅನ್ಯಾಯವನ್ನು ಸದೆಬಡಿಯಲು ತಾತ್ವಿಕ ಸಂಘರ್ಷಕ್ಕಿಳಿದಿರುವುದನ್ನು ಕಾಣಬಹುದು. ಪ್ರಭುತ್ವವನ್ನು ಎದುರಿಸುವ ಮೂಲಕ ಅವರನ್ನು ತಮ್ಮ ಒಕ್ಕಲುಗಳಾಗಿ ಮಾಡಿಕೊಳ್ಳಲು ಪವಾಡಗಳನ್ನು ಮಾಡಿ ಜನರನ್ನು ತಮ್ಮತ್ತ ಸೆಳೆದುಕೊಂಡರು. ಅಧಿಕಾರ ವರ್ಗವನ್ನು ಹತ್ತಿಕ್ಕಲು ಮುಂದಾದರು. ಪವಾಡಗಳ ಮೂಲಕ ಜನರನ್ನು ಆಕರ್ಷಿಸಿದರು. ಮಕ್ಕಳಿಲ್ಲದವರಿಗೆ ಸಂತಾನ ಕೊಡುವುದು, ಮಲೆತು ಎದುರಾದವರನ್ನು ಸೋಲಿಸುವುದು, ರೋಗ ಗುಣಪಡಿಸುವುದು, ಸತ್ತವರಿಗೆ ಜೀವದಾನ ಮಾಡುವುದು, ಬಹಿಷ್ಕೃತರಾದ ಕೆಳಸ್ತರದ ಜನರಿಗೆ ಸಹಪಂಕ್ತಿ ಭೋಜನದ ಮೂಲಕ ಸಮಾನತೆಯನ್ನು ಕಲ್ಪಿಸುವುದು. ಹೀಗೆ ಪವಾಡಗಳನ್ನು ಮಾಡಿ ಜನರ ಮನಸ್ಸಿನಲ್ಲಿ ನೆಲೆನಿಂತರು. ಇವರ ಪವಾಡಗಳಿಗೆ ಮನಸೋತ ಜನ ಇವರನ್ನು ಸಾಂಸ್ಕೃತಿಕ ನಾಯಕರನ್ನಾಗಿ ಸ್ವೀಕರಿಸಿ ದೈವತ್ವದ ಸ್ಥಾನವನ್ನು ನೀಡಿದ್ದರು. ಜನತೆಯ ದೃಷ್ಟಿಯಲ್ಲಿ ದೈವತ್ವ ಸ್ಥಾನಪಡೆದು ಆ ಭಾಗದಲ್ಲಿ ನೆಲೆ ನಿಂತರು.

### ೩.೨. ಪಂಚಗಣಾಧೀಶ್ವರರು ಮತ್ತು ಕೆಳವರ್ಗದ ಸಂಬಂಧ.

ಸಾಮಾಜಿಕ ಶ್ರೇಣೀಕರಣದ ಹಿನ್ನೆಲೆಯಲ್ಲಿ ಹುಟ್ಟುವ ಕೆಲವು ಪಂಥಗಳು ಸಮಾನತೆಯ ಆಶಯವನ್ನು ಇಟ್ಟುಕೊಂಡಿರುತ್ತವೆ. ವರ್ಣಭೇದವನ್ನು ಕಟುವಾಗಿ ನಿರಾಕರಿಸುವ ಹೇಳಿಕೆಗಳು ಮತ್ತೆ ಮತ್ತೆ ಕಾಣಿಸುವುದು. ಅವು ರೂಪುಗೊಂಡ ಕಾಲಮಾನದ ಒತ್ತಡವನ್ನು ಬಿಂಬಿಸುತ್ತವೆ. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಆರೂಢ ಪಂಥಗಳಲ್ಲಿ ಸಮಾಜದ ಬಹುತೇಕ ಕೆಳಜಾತಿಗಳು ಹಾಗೂ ಕಸುಬುದಾರ ಸಮುದಾಯಗಳೂ ತಮ್ಮ ಅಸ್ಮಿತೆಯನ್ನು ಕಂಡುಕೊಂಡವು.

೧೨ನೇ ಶತಮಾನದಲ್ಲಿ ಕಲ್ಯಾಣದೊಳಗೆ ಏರ್ಪಟ್ಟ ಸಾಮಾಜಿಕ ಕ್ರಾಂತಿಯ ನಿಲುಗಡೆ ನಂತರ ಅದು ಮತ್ತೇ ಹದಿನೈದನೇಯ ಶತಮಾನದಲ್ಲಿ ಕರ್ನಾಟಕದ ಬೇರೆ ಬೇರೆ ಕಡೆ ಜಾಗೃತಗೊಂಡಿತ್ತು. ಕರ್ನಾಟಕದ ಸಾಂಸ್ಕೃತಿಕ ಪರಂಪರೆಯ ಸೂಕ್ಷ್ಮಾವಲೋಕನವುಳ್ಳದ್ದನ್ನು ಗಮನಿಸುವುದು. ತೋಂಟದ ಸಿದ್ಧಲಿಂಗ ಯತಿಯಿಂದ ಹಿಡಿದು ಮಧ್ಯಕರ್ನಾಟಕದ ಚಿತ್ರದುರ್ಗದ ತಿಪ್ಪೇಸ್ವಾಮಿ, ದಕ್ಷಿಣ ಕರ್ನಾಟಕದ ಮಲೆಯ ಮಾದೇಶ್ವರ ಇವರೆಲ್ಲ ಸ್ಥಾವರ ಕಲ್ಪನೆಯನ್ನು ಬಿಟ್ಟುಕೊಟ್ಟು ಜಂಗಮ ತತ್ವದ ಹಿನ್ನೆಲೆಯಲ್ಲಿ ಚಲಿಸುತ್ತ ಕರ್ನಾಟಕದಲ್ಲಿಯ ಜನಪದ ಧರ್ಮವೊಂದರ ಸ್ಥಾಪನೆಗೆ ಪ್ರಮುಖ ಕಾರಣರಾದರು.

ಸಿದ್ಧಪಂಥದ ಸಂತರು ತಮ್ಮನ್ನು ಪವಾಡಗಳಿಂದಲೇ ಗುರುತಿಸಿಕೊಂಡವರು. ಸಿದ್ಧಿ ಸಾಧಕರು ಅಲ್ಲಲ್ಲಿ ಶಿಷ್ಯರನ್ನು ಪಡೆದರು. ಚಿತ್ರದುರ್ಗದ ನಾಯಕನಹಟ್ಟಿ ತಿಪ್ಪೇಸ್ವಾಮಿ, ಮಂಟೇಸ್ವಾಮಿ, ಮಾದೇಶ್ವರರ ಕೊಡುಗೆ ಎಂದರೆ ಕೆಳವರ್ಗದವರ, ಬುಡಕಟ್ಟುಗಳ ಉದ್ಧಾರ ಮಾತ್ರವಲ್ಲ, ಮಾನವನ ಜೀವನ ಧರ್ಮ ಎಂದು ಸಾರಿದರು. ರಾಜಕೀಯ ಪ್ರಭಾವ ಎಲ್ಲಿ ಪ್ರಬಲವಾಗಿತ್ತೋ ಅಲ್ಲೆಲ್ಲ ಸಂತರ, ದಾಸರ ತತ್ವಗಳು, ಅನೇಕ ವೇಳೆ ದಾಳಿಗೆ ತುತ್ತಾಗಿವೆ. ಗೊಡ್ಡು ಸನ್ಯಾಸ, ದುಷ್ಟರಾಜಕಾರಣ, ಅಂತರ್ಜಾತೀಯ ವಿವಾಹ ಸಮಸ್ಯೆ

ಇವೆಲ್ಲ ಒಟ್ಟುಗೂಡಿದ ಪರಿಣಾಮವಾಗಿ ಆದರ್ಶ ಜೀವನ ರೂಪುಗೊಳ್ಳುವುದರ ಬದಲಾಗಿ, ಕಲ್ಯಾಣದಲ್ಲಿ ಬಹುದೊಡ್ಡ ಅರಾಜಕತೆ ಉಂಟಾಯಿತು. ತದನಂತರದಲ್ಲಿ ಕಲ್ಯಾಣದ ಶರಣರೆಲ್ಲ ಅನೇಕ ದಿಕ್ಕಿಗೆ ಚದುರಿದರು. ಇದರ ಫಲವಾಗಿಯೋ ಏನೋ ಮುಂದೆ ಬಂದ ಮಾದೇಶ್ವರ, ಮಂಟೇಸ್ವಾಮಿ ಮೊದಲಾದವರು ಮಧ್ಯಕರ್ನಾಟಕ ಭಾಗದಲ್ಲಿ ಜಂಗಮ ತತ್ವದ ನೆಲೆಯನ್ನ ಸ್ಥಾಪಿಸಿದರು. ಇದಕ್ಕೆ ರಾಜಕಾರಣದ ಸಂಬಂಧವಿಲ್ಲ ಎನ್ನಲಾಗದಿದ್ದರೂ ಮುಖ್ಯವಾಗಿ ಜನಸಾಮಾನ್ಯರ ನಡುವಿನ ದೈಹಿಕ ಮತ್ತು ಆಧ್ಯಾತ್ಮಿಕ ಪ್ರೇರಣೆಗಳನ್ನು ಬಲಪಡಿಸುವ ದಿಸೆಯಲ್ಲಿ ಕ್ರಿಯಾಶೀಲವಾಗಿತ್ತು ಎನ್ನಬಹುದು. “ಮಂಟೇಸ್ವಾಮಿ, ಮಾದೇಶ್ವರರ, ಚಲನಶೀಲತೆ ಹೇಗಿತ್ತೆಂದರೆ ಅವರು ಎಲ್ಲಿಯೂ ನೆಲೆಯೂರದ, ಮಠವನ್ನು ಕಟ್ಟದ, ಜನಸಮೂಹವನ್ನು ಒಂದೆಡೆ ಕೂಡಿ ಹಾಕದ ಬೋಧನಾಕ್ರಮ. ಹಾಗಾಗಿ ಈ ಪರಂಪರೆಯಲ್ಲಿ ಜನಸಾಮಾನ್ಯರ ಸಮಸ್ಯೆಗಿಂತ ಇದ್ದ ಸಣ್ಣ ಪುಟ್ಟ ತೊಂದರೆಗಳೆಂದರೆ ಪುಂಡು ಪಾಳೆಯಗಾರರ ಶ್ರೀಮಂತಿಕೆಯನ್ನು ಅಡಗಿಸುತ್ತದಷ್ಟೆ.

ಜಾತ್ಯಾತೀತವಾಗಿ, ಧರ್ಮಾತೀತವಾಗಿ, ಮಾನವೀಯ, ಸಮಾನತೆ, ಮೌಲ್ಯ ಮತ್ತು ನಂಬಿಕೆಗಳನ್ನು ಪ್ರತಿಪಾದಿಸುವ ಮತ್ತು ಪ್ರತಿನಿಧಿಸುವಂಥವಾಗಿವೆ. “ಶಿಷ್ಟ ಸಮಾಜ ಯಾವುದನ್ನು ತಿರಸ್ಕರಿಸುತ್ತದೋ, ಅವುಗಳನ್ನು ಪುರಸ್ಕರಿಸುವುದನ್ನು ಕಾಣುತ್ತೇವೆ. ಕೀಳು, ಅಸಹ್ಯ, ಕೊಳಕು, ಅನಿಷ್ಟ, ಕನಿಷ್ಟ ಎನಿಸಿದವುಗಳನ್ನೇ ತಮ್ಮ ಸಂಕೇತಗಳು ಮತ್ತು ಪ್ರತಿಭಟನಾ ಅಸ್ತ್ರವಾಗಿಸಿಕೊಳ್ಳುತ್ತಾ ಸಂತರು ಅವುಗಳನ್ನೇ ಶ್ರೇಷ್ಠ, ಪವಿತ್ರ, ಉನ್ನತ ಮೌಲ್ಯವೆಂದು ಪ್ರತಿಷ್ಠಾಪಿಸುತ್ತಾರೆ. ಈ ಮೂಲಕ ಸ್ಥಾವರ ಶಿಷ್ಟ ಸಂಸ್ಕೃತಿ ಆಚರಣೆಗಳನ್ನು ನಾಶಪಡಿಸುತ್ತದೆ. ಲಿಂಗಾಯತ, ಶಿವಾಚಾರ ಮತ್ತು ಶಿಷ್ಟ ಸಂಸ್ಕೃತಿಯೊಳಗೆ ಮಾಂಸ, ಮದ್ಯ, ಭಂಗಿಗಳು ನಿಷೇಧವೆನಿಸಿದಾಗ ಅವು ಈ ಪರಂಪರೆಯಲ್ಲಿ, ಜನಸಂಸ್ಕೃತಿಯೊಳಗೆ ಅಥವಾ ತಳ ಸಂಸ್ಕೃತಿಯೊಳಗೆ ಶ್ರೇಷ್ಟ ಹಾಗೂ ಮುಖ್ಯ ಎನಿಸಿಕೊಳ್ಳುತ್ತವೆ.”[೩] ನಾಥರು, ಸಂತರು, ಸಿದ್ಧಿಸಾಧನೆಯಲ್ಲಿ ಹೆಂಡ, ಭಂಗಿಯನ್ನು ಸಾಧನೆಯಲ್ಲಿ ಉತ್ತೇಜಕವಾಗಿ ಬಳಸುತ್ತಿದ್ದರು. ಆಚರಣೆಗಳಲ್ಲಿ ಮಾಂಸ, ಮದ್ಯಗಳು ಮಾನವನ ಸಂಸ್ಕೃತಿಯಲ್ಲಿ ಅಗತ್ಯವಾಗಿ ಸೇರ್ಪಡೆಯಾಗಿ ಹೋಗಿದೆ. ತಿರಸ್ಕರಿಸಿದ, ಕನಿಷ್ಟ ಎನಿಸಿದ ಪದ್ಧತಿಗಳು ಪ್ರತಿ ಸಂಸ್ಕೃತಿಯ ಸಂಕೇತಗಳಾಗಿ, ಆಚರಣೆಗಳಾಗಿ ಪರ್ಯಾಯ ಮೌಲ್ಯ ಮತ್ತು ನಂಬಿಕೆಗಳಾಗಿ ಹೊಸ ವ್ಯಾಖ್ಯಾನ ಪಡೆಯುತ್ತವೆ. “ತಿಪ್ಪೆಯು ನಾಗರಿಕ ಲೋಕಕ್ಕೆ ಬೇಡವಾದ ವಸ್ತುಗಳನ್ನು ಬಿಸಾಡುವ ಜಾಗ. ಆದರೆ ಅಂತಹ ನಿರಾಕೃತ ಜಾಗದಿಂದಲೇ ಯೋಗಿಗಳು ಹುಟ್ಟುತ್ತಾರೆ. ‘ಲುಂಕೆಮಲೆ’ ಪರಿಸರದಲ್ಲಿ ಬರುವಂತಹ ಇವರು ನಾಯಕನಹಟ್ಟಿಯಲ್ಲಿದ್ದ ತಿಪ್ಪೇಸ್ವಾಮಿ ನಾಥರ ಜತೆ ಒಡನಾಟ ಇಟ್ಟುಕೊಂಡಿರುವ ಸಾಧ್ಯತೆಯಿದೆ. ಈತನ ಗದ್ದಿಗೆಯಿರುವ ಕಟ್ಟಡದಲ್ಲಿ ಮತ್ಸ್ಯದ ಮೇಲೆ ಆರೂಢನಾಗಿರುವ ಮಚ್ಛೇಂದ್ರನಾಥ, ಕಾಲಭೈರವ ಹಾಗೂ ಯೋಗ ಭಂಗಿಯಲ್ಲಿರುವ ಜಟಾಧಾರಿ ಮುನಿಗಳ ಶಿಲ್ಪಗಳಿವೆ. ಇಷ್ಟರಿಂದಲೇ ತಿಪ್ಪೇಸ್ವಾಮಿಯು ನಾಥ ಪಂಥದವರು ಎಂದು ಹೇಳಲಾಗದು.”[೪] ಆದರೆ ತಿಪ್ಪೇಸ್ವಾಮಿಯ ಬದುಕನ್ನು ಕುರಿತು ಆತ ನಾಥ ಪರಂಪರೆಯ ಜೊತೆಗೆ ಸಂಬಂಧವಿರುವುದು ಕಂಡುಬರುತ್ತದೆ. ತಿಪ್ಪೇಸ್ವಾಮಿಯವರು ಕೆಂಪಯ್ಯನ ಮೆರವಣಿಗೆಯ ಸಮಯದಲ್ಲಿ ತಿಪ್ಪೆಯ ಮೇಲೆ ನಿಂತುಕೊಂಡು ಕೆಂಪಯ್ಯನ ಕಣ್ಣು ತೆರೆಸಿದ್ದು.

ತಿಪ್ಪೇ ತಿಪ್ಪೆಂದರೆ ತಿಪ್ಪೇಯ ತಿರುಪಣ್ಣ
ತಿಪ್ಪೇ ಮೇಲಿಪ್ಪೆ ಮರನುಟ್ಟಿ | ತಿಪ್ಪೇಸ್ವಾಮಿ
ತಾವೊಳ್ಳೆದೆಂದು ನೆಲೆನಿಂತ ||

ತಿಪ್ಪೇಸ್ವಾಮಿ ಜೀವನದಲ್ಲಿ ಬರುವ ತಿಪ್ಪೆ, ಮಾಂಸ, ಭಂಗಿ ಇವೆಲ್ಲವುಗಳೂ ಪ್ರತಿಷ್ಠಿತ ಎನಿಸಿಕೊಳ್ಳುವ ವೈದಿಕಧರ್ಮ ವಿರೋಧಿಸುವಂತಹವುಗಳಾಗಿವೆ. ಅಪ್ರತಿಷ್ಠಿತವಾದವುಗಳನ್ನು ಮೌಲೀಕರಿಸುವ ಸಂಕೇತವಾಗಿವೆ. ಪಶುಪಾಲನಾ ಜೀವನಕ್ರಮದಿಂದ ಕೃಷಿಪ್ರಧಾನ ಜೀವನಕ್ಕೆ ಹೊರಳುವ ಸಮಯದಲ್ಲಿ ಗುರು ಮಾರ್ಗದರ್ಶಕನ ಅಗತ್ಯವಿತ್ತು. ಈ ದೃಷ್ಟಿಯಿಂದ ಬರಡಾದ, ಅನಾಥವಾದ, ಬುಡಕಟ್ಟು ಜನರ ಜೀವನಕ್ಕೆ ಆಶಾಜ್ಯೋತಿಯಾಗಿ ತಿಪ್ಪೇಸ್ವಾಮಿ ಕಾಣಿಸಿಕೊಂಡ. ಈ ಬುಡಕಟ್ಟು ಜನರ ಬೆಂಬಲದಿಂದಲೇ ಅವರ ಶ್ರಮದಿಂದಲೇ ವ್ಯವಸಾಯಕ್ಕೆ ಅನಿವಾರ್ಯವಾಗಿ ಬೇಕಾದ ಕೆರೆಗಳನ್ನು ಕಟ್ಟಿಸಲು ಮುಂದಾದರು. ಹೊಸ ಜೀವನಕ್ರಮದ 'ಮನು'ವೇ ಆದ. ಅಷ್ಟರಲ್ಲಿ ಶಿಷ್ಟ ಸಂಸ್ಕೃತಿಯ ಪ್ರಭಾವದಿಂದ ಹಟ್ಟಿಗಳು ಹಳ್ಳಿಗಳಾಗುತ್ತಿದ್ದವು. ಆಗ ಉಂಟಾಗಿದ್ದ ಮೇಲು-ಕೀಳು, ಭಾವನೆಗಳನ್ನು ಹೋಗಲಾಡಿಸಿ ಜಾತಿ-ಮತ ಮೀರಿದ ಉದಾರ ಭಾವದ ಈ ಅವಧೂತ ಎಲ್ಲಾ ಶ್ರಮಿಕ  ಜೀವಿಗಳ ಆಶಾಕಿರಣವಾದ. ಶ್ರಮ ಸಂಸ್ಕೃತಿಯ ಮೂಲಕವೇ ಜೀವನಕ್ಕೆ ಆಸರೆಯಾದ ಅವಧೂತನ ಮಾರ್ಗದರ್ಶನ ಇಲ್ಲಿಯ ಬುಡಕಟ್ಟು ಜನರ ಮೇಲೆ ಅತ್ಯಂತ ಗಾಢವಾದ ಪ್ರಭಾವ ಬೀರಿದೆ. ಈ ಪ್ರಭಾವ ಕ್ರಮೇಣ ಎಲ್ಲಾ ಜಾತಿಯ ಜನರ ಮೇಲೆ ಆಗಿ ಎಲ್ಲಾ ಶ್ರಮಜೀವಿಗಳನ್ನು, ಬಡವರನ್ನು ಒಂದೇ ತೆಕ್ಕೆಗೆ ತೆಗೆದುಕೊಂಡ ಅಥವಾ ತಿಪ್ಪೇಸ್ವಾಮಿ ಎಲ್ಲರ ದೃಷ್ಟಿಯಲ್ಲಿ ಮಹಾನುಭಾವನಾದುದು ಆಶ್ಚರ್ಯವೇನಲ್ಲ. ಅನಕ್ಷರಸ್ಥ ಜನ ಸಮುದಾಯದಲ್ಲಿ ಮೌಖಿಕ ಪರಂಪರೆಯಲ್ಲಿ 'ತಿಪ್ಪೇಸ್ವಾಮಿ' ಸಾಂಸ್ಕೃತಿಕ ವೀರನಾಗಿ ಗುರುತಿಸಿಕೊಂಡಿದ್ದಾನೆ.

ಕೀಳನ್ನು ಮೌಲೀಕರಿಸುವ ಇಲ್ಲವೆ ಪ್ರತಿಷ್ಠಿತ ಎನಿಸಿಕೊಳ್ಳುವ ಮೌಲ್ಯಗಳನ್ನು ಒಡೆಯುವ ತಿಪ್ಪೇಸ್ವಾಮಿಯ ಪವಾಡಗಳು ನಾಯಕನಹಟ್ಟಿ ದೊರೆ ಬೋಡಿಮಲ್ಲಪ್ಪನಾಯಕನ ಕಾಲದಲ್ಲಿ (೧೬೬೧-೧೬೭೧). ೭ಕೆರೆ, ೭ಪುರಗಳನ್ನು ಕಟ್ಟುವಲ್ಲಿ ತಿಪ್ಪೇಸ್ವಾಮಿಯು ನೆರವಾಗುತ್ತಾನೆ. ಈ ಕೆಲಸವನ್ನು ಮುಗಿಸಿದ ದೊರೆ ತಿಪ್ಪೇಸ್ವಾಮಿಗೆ ೭೭ ಬಿರುದಾವಳಿಗಳನ್ನು ಅರ್ಪಿಸಿ, ಕಾಶಿವಿಶ್ವನಾಥ, ರಾಮೇಶ್ವರಕ್ಕೆ ಹೋಗಬೇಕೆಂದು ಇಚ್ಛೆ ವ್ಯಕ್ತಪಡಿಸುತ್ತಾನೆ. ಆಗ ತಿಪ್ಪೇಸ್ವಾಮಿ, ದೊರೆ ಹಾಗೂ ಪರಿವಾರದವರನ್ನು ಹಿರೇಕೆರೆಯ ತೂಬಿನ ಹತ್ತಿರ ಕರೆದುಕೊಂಡು ಬಂದು ಹರಿದಾರಿ ದೂರ ಹೋಗಿ ಪೂರ್ವಕ್ಕೆ ಮಠ ಕಾಣುವುದು. ಅಲ್ಲಿರುವುದೇ ಕಾಶಿವಿಶ್ವನಾಥ, ಅಲ್ಲಿಂದ ದಕ್ಷಿಣಕ್ಕೆ ಲಿಂಗವಿದೆ. ಇವುಗಳ ದರ್ಶನ ಪಡೆದರೆ ಕಾಶಿರಾಮೇಶ್ವರಗಳ ದರ್ಶನ ಪಡೆದಂತಾಗುತ್ತದೆ ಎಂದು ಹೇಳುತ್ತಾರೆ. ಆ ಮೂಲಕ ಪ್ರತಿಷ್ಠಿತ ಎನ್ನುವ ತೀರ್ಥಕ್ಷೇತ್ರಗಳನ್ನು ನಿರಾಕರಿಸಿ ತನ್ನ ನೆಲವನ್ನೇ ಪವಿತ್ರೀಕರಿಸುತ್ತಾನೆ.

ಜನರು ತೀರ್ಥಕ್ಷೇತ್ರಕ್ಕೆ ಹೊರಟಾಗ ಅವರಲ್ಲಿ ಒಬ್ಬನಿಗೆ ಮಣ್ಣಿನ ಮಡಿಕೆಯ  ಚೂರೊಂದನ್ನು ಕೊಟ್ಟು ಉಡುದಾರಕ್ಕೆ ಕಟ್ಟಿಕೊಳ್ಳಲು ಹೇಳುತ್ತಾನೆ. ಅವರೆಲ್ಲ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ ಮರಳಿ

ಬಂದಾಗ ಮಡಿಕೆ ಚೂರು ಬದಲಾವಣೆ ಆಗದಿದ್ದುದನ್ನು ಕಂಡು “ಬರೀ ನೀರಿನಲ್ಲಿ ಮುಳುಗಿ, ಕಾಶಿ ರಾಮೇಶ್ವರಗಳಿಗೆ ಕೈ ಮುಗಿದರೆ ಯಾವುದೇ ಬದಲಾವಣೆ ಆಗಲಾರದು. ಬದಲಾವಣೆ ಅಂತರಂಗದಲ್ಲಿ ಸಂಭವಿಸಬೇಕಿದೆ ಎಂದು ಎಲ್ಲರನ್ನೂ ಕರೆದುಕೊಂಡು ತಾವೇ ನಿರ್ಮಿಸಿದ ಕಾಶೀಪುರದ ಕಾಲುವೆಯಲ್ಲಿ ಆ ಮಡಿಕೆಯ ಚೂರನ್ನು ಅದ್ದಿ ತೆಗೆದಾಗ ಆ ಮಡಿಕೆ ಚೂರು ಬಂಗಾರವಾಗುತ್ತದೆ. ಈ ಮೇಲಿನ ಪವಾಡಗಳು ಸ್ಥಳೀಯತೆಯನ್ನು ಮೌಲೀಕರಿಸುವ ಪ್ರಯತ್ನದಿಂದ ಕೂಡಿದವುಗಳಾಗಿವೆ. ಪವಾಡಗಳ ಮೂಲಕ ಸಾಮಾನ್ಯ ಜನಜೀವನಕ್ಕೆ ಹತ್ತಿರವಾಗುವ ಹಾಗೂ ಅವರ ಬದುಕಿನ ಸಾಮಾನ್ಯ ಅಂಶಗಳನ್ನು ಮೌಲೀಕರಿಸುವ ಮೂಲಕ ಸಮುದಾಯದಲ್ಲಿನ ಜನತೆಗೆ ಬದುಕುವ ಚೈತನ್ಯವನ್ನು, ಉತ್ಸಾಹವನ್ನು, ವಿಶ್ವಾಸವನ್ನು ತುಂಬಿದ್ದಾನೆ.”[೫]

ಫಣಿಯಪ್ಪನೊಂದಿಗೆ ಕೆಲಸ ಮಾಡುತ್ತಿರುವಾಗ ಕಪಿಲೆ ಬಾನಿ ಹರಿಯುತ್ತದೆ. ತಿಪ್ಪೇಸ್ವಾಮಿ ಮನೆಗೆ ಬಂದ ಕಪಿಲೆ ಬಾನಿ ಹರಿದಿರುವುದನ್ನು ಹೋಲಿಸಿಕೊಂಡು ಬರಲು ಫಣಿಯಪ್ಪ ಮಾದಿಗರ ಮನೆಗೆ ಹತ್ತಿರ ಹೋಗುತ್ತಾನೆ. ಅಲ್ಲಿ ಮಾದಿಗರ ಮನೆಯಲ್ಲಿ ತಿಪ್ಪೇಸ್ವಾಮಿ ಪೂಜೆಗೆ ಕೂತಿರುವುದನ್ನು ಕಂಡು ಆಶ್ಚರ್ಯ ವ್ಯಕ್ತಪಡಿಸುತ್ತಾನೆ.

“ಫಣಿಯಪ್ಪ ತಿಪ್ಪಯ್ಯ ಇಬ್ಬರು ಅವರೀಗ
ಇಬ್ಬರು ಕಪ್ಲೆ ಹೊಡದಾರು ಅವರೀಗ
ಬಾನಿ ಹರಿದೀತು ಗಳಿಗೇಲಿ

ತಿಪ್ಪಯ್ಯ ನೀನು ಊಟಕ್ಕೆ ನಡಿಯಪ್ಪ
ಬಾನೀಯ ಹಾಕಿ ಬರುತೀನಿ
ಬಾನೀಯ ಈಗ ಒಲಿಯಾಕೆ ನಂಜಾನ ಮನಿಗೆ
ಬೇಗಾರ ಹಟ್ಟಿಗೆ ಹೋಗಿ ಬರುತೀನಿ.

ಬಾನಿ ಹೊತ್ತುಕೊಂಡು, ಫಣಿಯಪ್ಪ ಹೋದಾನ
ನಂಜಾನ ಮನಿಯಾಗೆ ಸ್ವಾಮಿ (ಇರುವೋನೆ) ಹೋಗ್ಯಾವ್ನೆ
ಸಿವ ಪೂಜೆಗಲ್ಲಿ ಕುಂತವ್ನೆ.”[೬]

ಮಾದಿಗರ ಮನೆಯಲ್ಲಿ ಶಿವಪೂಜೆಗೆ ಕುಳಿತಿರುವಂತಹ ಸ್ವಾಮಿಯನ್ನು ಕಂಡು ಫಣಿಯಪ್ಪ ಸ್ವಾಮಿಗಳನ್ನು ಬೈಯುತ್ತಾರೆ. ಹೆಂಡತಿಗೆ ಸ್ವಾಮಿಯನ್ನು ಮನೆಯೊಳಗೆ ಸೇರಿಸಬೇಡ ಎಂದು ಹೇಳಿದಾಗ

ಮಾದಾರ ಮನಿಯಾಗೆ ಸಿವಪೂಜೆ ಮಾಡ್ತಿದ್ದ
ಸಿವು ಪೂಜೀಗೆ ನೀನು ಕರಿಬ್ಯಾಡ ನಮ್ಮೀಗೆ
ತಕ್ಕಾದ ಸಿವುನಲ್ಲ ಅವನೀಗ

ಎಂದು ಹೇಳುವುದನ್ನು ಹೇಳಿದ ಫಣಿಯಪ್ಪನ ಹೆಂಡತಿ ಸ್ವಾಮಿ ಒಳಗೆ ಶಿವಪೂಜೆಗೆ ಕುಳಿತಿದ್ದಾರೆ ಎಂಥ ಮಾತಾಡುತೀಯ ಎಂದು ಪರೀಕ್ಷಿಸಲು ಒಳಗೆ ಬಂದಾಗ ಸ್ವಾಮಿಗಳು ಶಿವಪೂಜೆಗೆ ಫಣಿಯಪ್ಪನ ಮನೆಯಲ್ಲಿ ಕುಳಿತಿರುತ್ತಾರೆ.

ಅಯ್ಯೋ ನಾನು ಸ್ವಾಮಿ ಎಂತಾ ಮಾತಾಡುತ್ತೀಯ
ಒಳಗೆ ಸಿವಪೂಜೆಗೆ (ಐದಾರೆ)-ಕುಂತವ್ರೆ. ಏ ಸಿವನೆ
ಎಂತಾನೆ ನುಡಿಯ ನುಡಿತೀಯೋ

ಮಾಳಮ್ಮ ಗಂಡನಿಗೆ ಸ್ವಾಮಿ ಒಳಗೆ ಇರುವುದನ್ನು ಕುರಿತು ಎಚ್ಚರಿಸುತ್ತಾಳೆ. ಫಣಿಯಪ್ಪ ಸ್ವಾಮಿ ಮಹಿಮೆಯನ್ನು ಕಂಡು ಅಚ್ಚರಿ ವ್ಯಕ್ತಪಡಿಸುತ್ತಾನೆ.

"ಒಂದು ದಿನದೊಳಾ ಫಣಿಯಪ್ಪಗೆ ರುಜೆ ಸಂಧಿಸೆ ದೇಹಾಲಸ್ಯದಲ್ಲಿ |
ಮಂದಿರದಾಳನು ಕರೆಯುತಲಿ | ಇಂ | ತೆಂದನು ಗದ್ದುಗೆ ಗುಡಿಯಲ್ಲಿ |
ನಂದಾದೀಪವು ಇಹುದೋ ಇಲ್ಲವೊ ನೋಡಿಕೊಂಡು ಬಾ ಶೀಘ್ರದಲಿ ||

ಒಡೆಯನು ನುಡಿದಾ ಮೇರೆಗೆ ಸೇವಕನೊಡನೆ ಪೋಗುತಾ ಗುಡಿಯಲ್ಲಿ |
ಸೊಡರಿಲ್ಲದನಾ ನೋಡುತಲಿ |ಸಂ|ಗಡಲೇ ದೀಪದ ಹಚ್ಚುತಲಿ |
ಬಿಡದಲೆ ಗದ್ದುಗೆ ಪೂಜೆಯತಾನೇ ಗೈದೇ ಬಂದನು ತವಕದಲಿ ||

ಅಂದಿನ ದಿನ ಫಣಿಯಪ್ಪನ ಸ್ವಪ್ನದಿ ಬಂದಾ ಸ್ವಾಮಿಯು ಪೇಳಿದನು |
ಮುಂದಿನ ದಿನಗಳ ಪೂಜೆಯನು |ಆ|ನಂದದಿಂದಲೂ ಸೇವಕನು |
ಬಂದೇ ಮಾಡಲಿ ಬಳಿಕಾತನ ಕುಲದವರೇ ಮಾಡಲಿ ಸೇವೆಯನು ||

ಫಣಿಯಪ್ಪನು ಶ್ರೀ ಸ್ವಾಮಿಯು ಪೇಳಿದ ಕನಸಿನ ವಾಕ್ಯದ ಪರಿಯನ್ನು |
ಮನೆಯ ಸೇವಕಗೆ ತಿಳಿಸಿದನು |ಆದ|ಕನುಮತಿ ಪೊಂದುತ ಸೇವಕನು |
ಅನುದಿನವಲ್ಲಿಂದಾತನ ವಂಶದ ಜನರೇ ಗೈವರು ಪೂಜೆಯನು"[2] ||

ಸಮಾಧಿ ಪೂಜೆಯನ್ನು ಮಾಡಲು ಬೇಡ ಜನಾಂಗದವರಿಗೆ ವಹಿಸಿಕೊಡುವ ಮೂಲಕ ಅವರನ್ನು ಒಕ್ಕಲುಗಳನ್ನಾಗಿ ಮಾಡಿಕೊಳ್ಳುತ್ತಾನೆ. ಚಿತ್ರದುರ್ಗ ಸುತ್ತ ಮುತ್ತ ಬಹುತೇಕ ಬೇಡ ಜನಾಂಗದವರು ಹೆಚ್ಚಾಗಿರುವ ಕಾರಣ ಅವರನ್ನು ಒಕ್ಕಲುಗಳಾಗಿ ಮಾಡಿಕೊಂಡು ಈ ಭಾಗದಲ್ಲಿ ನೆಲೆ ನಿಂತರು. ಬೇಡ ಜನಾಂಗದವರನ್ನು, ದಲಿತರನ್ನು ಸ್ವೀಕರಿಸುವ ಮೂಲಕ ತಿರಸ್ಕೃತ ಸಮುದಾಯವನ್ನು ಎತ್ತಿಹಿಡಿದು ಮಾನವೀಯತೆಯನ್ನು ಮೆರೆದರು. ಈ ಭಾಗದ ಸಾಂಸ್ಕೃತಿಕ ನಾಯಕರಾಗಿ ರೂಪಿತರಾದರು. ಗರ್ಭಿಣಿ ಸ್ತ್ರೀಯರಿಗೆ ದುಪ್ಪಟ್ಟು ಕೂಲಿ ನೀಡುವುದು, ಕೆರೆ ಕಟ್ಟಿಸುವುದು, ಬೇಡ ಜನಾಂಗದವರಿಗೆ ಪೂಜೆ ಸಲ್ಲಿಸಲು ಅವಕಾಶ ಕಲ್ಪಿಸುವುದು ಇವೆಲ್ಲವು ಸಮಾನತೆಯನ್ನು ಸಾರುವ ಉದ್ದೇಶದಿಂದ ಕೂಡಿರುವಂತಹ ಅಂಶಗಳಾಗಿವೆ. ತಿಪ್ಪೇಸ್ವಾಮಿ ಸಮಾಧಿಯಾದ ಹೊರಮಠದಲ್ಲಿ ಬೇಡ, ಕುರುಬ, ಕಾಡುಗೊಲ್ಲ, ಮಾದಿಗ ಮುಂತಾದ ಕೆಳವರ್ಗದ ಜನರು ಹೆಚ್ಚಾಗಿ ನಡೆದುಕೊಳ್ಳುತ್ತಾರೆ.

"ಒಳಮಠಕ್ಕೆ ಜಂಗಮರು ಹೊರಮಠಕೆ ಭಕ್ತರು
ಕುಲಹನ್ನೆರಡು ಜಾತಿ ಕಲಿಯಾಲಿ ಹೊರಮಠದಾಗೆ

ಮದ್ದು ಮಾಂಸಗಳೇ ಬೇಸಾಲಿ ಹೊರಮಠದಲ್ಲಿ

ಅಪ್ಪಯೆಗೇ ಎಡಿಯೇ ಏರಾಲಿ

ಒಪ್ಪೀದ ಕುರಿಗಾಳ ಮತ್ತಲ್ಲಿ ಕಡೀರಣ್ಣ

ಹೊರಮಠದಾಗೆ ನೀವು ಮಾಡೀರಣ್ಣ ನಾಯಕನಹಟ್ಟಿ

ಹೊರಮಠದಲ್ಲೀಗ ಎಡಿಯೇ ಏರಾಲಿ"[೮]

ಒಳಮಠವನ್ನು ಜಂಗಮರಿಗೆ ಬಿಟ್ಟು ಬರುವಂತೆ ತಿಪ್ಪೇಸ್ವಾಮಿಯನ್ನು ಒತ್ತಾಯಿಸಿದ ಸಂದರ್ಭಗಳಾವುವು ಎನ್ನುವುದನ್ನು ಅರಿತರೆ, ಈಗಿರುವ ಮಾಂಸ ಎಡೆಕೊಡುವ ಆಚರಣೆಗೆ ಕಾರಣ ಬೇಟೆ ಸಂಸ್ಕೃತಿಯಿಂದ ಬೇಡ ಸಮುದಾಯವನ್ನು ಕೃಷಿ ಸಂಸ್ಕೃತಿಯನ್ನಾಗಿ ಪರಿವರ್ತಿಸುವಲ್ಲಿ ತಿಪ್ಪೇಸ್ವಾಮಿ ಸಾಕಷ್ಟು ಶ್ರಮಿಸಿದರು. ಅದಕ್ಕಾಗಿ ಏಳು ಕೆರೆ ಕಟ್ಟಿಸಿದನೆಂದು ಹೇಳಲಾಗುತ್ತದೆ. ಈ ರೀತಿ ಜನಪರ ಕಾರ್ಯಗಳನ್ನು ಮಾಡುತ್ತಾ ಶೈವೀಕರಣಗೊಳಿಸಿದನು. ತಿಪ್ಪೇಸ್ವಾಮಿ ಭಕ್ತರಾಗಿ ಶೈವೀಕರಣಗೊಂಡರೂ ತಮ್ಮ ಮೂಲ ಆಹಾರ ಪದ್ಧತಿಯನ್ನು ಬೇಡ ಸಮುದಾಯ ಒಳಗೊಂಡಂತೆ ಎಲ್ಲಾ ಸಮುದಾಯದ ಜನರು ಹೊರಮಠಕ್ಕೆ ಮಾಂಸ ಎಡೆಕೊಡುವ ಪದ್ಧತಿ ಉಳಿದುಕೊಂಡು ಬಂದಿದೆ. ಹೆಚ್ಚಾಗಿ ವಾಸಿಸುವ ಬೇಡ ಸಮುದಾಯ ಆರ್ಥಿಕವಾಗಿ, ಸಾಮಾಜಿಕವಾಗಿ ಪ್ರಬಲರಾಗಿದ್ದರು. ತಿಪ್ಪೇಸ್ವಾಮಿ ಕೆಳವರ್ಗಗಳ ಆಹಾರ ಪದ್ಧತಿಯನ್ನು ಒಪ್ಪಿಕೊಳ್ಳುವುದರ ಮೂಲಕ ಎಲ್ಲಾ ವರ್ಗದ ಜನರಿಗೆ ಅವಕಾಶ ಕಲ್ಪಿಸಲಾಗಿದೆ.

"ಮಳೆಬಂದ ಮರುದಿನ ಸಿರಿಕಾಣೆ ನಾಯಕನಹಟ್ಟಿ

ಮದುಕೆರಡು ಕೋಡಿ ಹರಿದಾವೆ | ತಿಪ್ಪೇಸ್ವಾಮಿ

ಮಧುಭೂಪ ಹೊರಟ ಕೆರೆಯಾಗ |

ಹಟ್ಟಿಯ ತಿಪ್ಪಯ್ಯ ಜಗಳೂರು ಪಾಪಯ್ಯ



ಚಿಕ್ಕೇರಿ ಕೋಡಿ ಬಸವಯ್ಯ| ಜೊತೆಗೂಡಿ

ಲಿಕ್ತವಾಡೇರ"[೯] ||

ಜನಪದರ ವೃತ್ತಿ ಕೃಷಿ, ಮಳೆಯಿಲ್ಲದೆ ಬೆಳೆಯಿಲ್ಲ, ಬೆಳೆಯಿಲ್ಲದೆ ಮಳೆಯಿಲ್ಲ, ಇದೊಂದು ನೆಲ ಜಲದ ಸರಪಳಿಯ ಕ್ರಿಯೆ, ಗ್ರಾಮೀಣ ಜನತೆಗೆ ಆಧಾರಸ್ತಂಭವಾದ ಮಳೆ ಬಂದು ಕೆರೆ ತುಂಬಿದಾಗ ಅವರ ಸಂತೋಷಕ್ಕೆ ಪರಿವೇಯಿಲ್ಲ. ಅಷ್ಟೊಂದು ಸಂಭ್ರಮವನ್ನು ಅನುಭವಿಸುತ್ತಾರೆ.

ನಾಯಕನಹಟ್ಟಿಯಲ್ಲಿ ತಿಪ್ಪೇಸ್ವಾಮಿ ಕಟ್ಟಿಸಿದ ಹಿರೇಕೆರೆ ಮಳೆಬಂದು ಕೋಡಿ ಬಿದ್ದಾಗ ಇಡೀ ಕೆರೆಯ ಸುತ್ತ ಮುತ್ತ ನೀರಿನಿಂದ ಕಂಗೊಳಿಸುತ್ತದೆ. ಹಿರೇಕೆರೆಯ ಕೋಡಿ ಬಿದ್ದರೆ ಸಾವಿರಾರು ಎಕರೆಗೆ ನೀರಾವರಿ ವ್ಯವಸ್ಥೆ ಕಲ್ಪಿಸಲಾಗುತ್ತದೆ. ಜನರ ಸಂತೋಷಕ್ಕೆ ಪಾರವೇ ಇಲ್ಲ. ಅಷ್ಟೊಂದು ಆನಂದವನ್ನು ಅನುಭವಿಸುತ್ತಾರೆ. ಈ ಸಂದರ್ಭದಲ್ಲಿ ಸುತ್ತಮುತ್ತ ಗ್ರಾಮದ ಜನರು ಕೆರೆಯ ಕೋಡಿಬಿದ್ದಾಗ ತೆಪ್ಪೋತ್ಸವ ಮಾಡುವರು, ಅದನ್ನು ನೋಡಲು ಸಾವಿರಾರು ಜನರು ಬೇರೆ ಬೇರೆ ಊರುಗಳಿಂದ ಬಂದು ತೆಪ್ಪೋತ್ಸವ ಆಚರಣೆಯಲ್ಲಿ

ಬಾಗಿಯಾಗುತ್ತಾರೆ. ಕಣ್ಣಿಗೆ ಹಬ್ಬದ ವಾತಾವರಣವನ್ನು ಉಂಟುಮಾಡುತ್ತದೆ. ಮದವೇರಿದ ಆನೆಯಂತೆ ಏರಿಬರುವ ತೆರೆಗಳು ಕೆರೆಯರಡು ಕೋಡಿಗಳಿಂದ ಧುಮುಕಿ ಹರಿಯುವುದನ್ನು ನೋಡಲು ತಿಪ್ಪೇಶ, ಮಧುಭೂಪನಂತೆ ಹೊರಟಿದ್ದಾನೆ. ಜೊತೆಗೆ ಜಗಳೂರು ಪಾಪಯ್ಯ, ಚಿಕ್ಕೇರಿ ಕೋಡಿ ಬಸವಯ್ಯ ಇವರು ಜೊತೆಗೂಡಿ ಲಿಕ್ತವಾಡಲಿಕ್ಕೆ ಹೋಗುವುದು. ಎಲ್ಲರು ಕೆಳವರ್ಗದ ಜೊತೆ ಅವರು ಒಡನಾಡಿಗಳಾಗಿ ಬದುಕಿದವರು ಎಂಬುದು ಕಂಡುಬರುತ್ತದೆ. ಜಗಳೂರು ಪಾಪಯ್ಯ ಮತ್ತು ನಾಯಕನಹಟ್ಟಿ ತಿಪ್ಪೇಸ್ವಾಮಿಯ ಕಾಲದ ಅಂತರ ಬಹಳವಿದೆ. ಜಗಳೂರು ಪಾಪಯ್ಯ ಜೊತೆಗೂಡಿಯಿದ್ದು ಅನಂತರ ನಾಯಕನಹಟ್ಟಿಗೆ ಬಂದಿರಬಹುದು. ಅಲೆಮಾರಿಗಳಾಗಿ ಬದುಕಿತ್ತಿದ್ದ ಜನಾಂಗವನ್ನು ಕೆರೆಗಳನ್ನು ಕಟ್ಟುವ ಮೂಲಕ ನೆಲೆಗೊಳ್ಳುವಂತೆ ಮಾಡಿದರು. ಇವರ ಜೀವನ ಪದ್ಧತಿಯನ್ನು ಪವಿತ್ರೀಕರಿಸುವುದು ಅವಶ್ಯಕವಾಗಿತ್ತು. ಆದ್ದರಿಂದ ಅವರ ಆಹಾರ ಪದ್ಧತಿಯನ್ನು ಸ್ವೀಕರಿಸುವ ಮೂಲಕ ಅವರ ಜೀವನ ಪದ್ಧತಿಯನ್ನು ಮಾನ್ಯ ಮಾಡುತ್ತಾನೆ. ನಾಯಕನಹಟ್ಟಿ ಪರಿಸರದಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ ಬದಲಾವಣೆಗಳಿಂದಾಗಿ ಬೇಡ ಜನಾಂಗ ಪ್ರಭಾವಿತವಾಗಿತ್ತು. ಸುತ್ತಮುತ್ತಲಿನ ಪಾಳೆಯಗಾರರೆಲ್ಲ ಬೇಡರಾಗಿದ್ದರು. ಜೀವನ ಪದ್ಧತಿ ಒಪ್ಪಿಕೊಳ್ಳುವ ಮೂಲಕ ಸಮುದಾಯದ ಆರಾಧ್ಯ ದೈವವಾಗಿ ನೆಲೆನಿಂತರು.

೧೨ನೇ ಶತಮಾನದ ಶರಣರು ಕುಲಏಳು ಹದಿನೆಂಟು ಜಾತಿಗಳು ಒಂದೇ ಎಂದು ಸಾರಿದ್ದ ಆಶಯ, ನಂತರದ ಶತಮಾನದಲ್ಲಿ ವೀರಶೈವ ಧರ್ಮದ ಸಾಂಸ್ಥಿಕ ಪ್ರಕ್ರಿಯೆಯಿಂದ ಒಡೆದು ಹೋಯಿತು. ಮೂಲಭೂತವಾದಿಗಳ ಸಂಚಿನಿಂದಾಗಿ ವೀರಶೈವ ಧರ್ಮದ ಮೂಲ ಆಶಯವೇ ನಶಿಸಿ ಹೋಯಿತು. ಹೀಗಾಗಿ ಅನೇಕ ಕೆಳವರ್ಗಗಳು ಯಥಾಸ್ಥಿತಿಯನ್ನು ಕಾಣುವಂತಾಯಿತು. ಕಾಲಾನಂತರ ಹೀಗೆ ಹೊರಗುಳಿದ ಸಮುದಾಯಗಳಲ್ಲಿ ಕೆಳವರ್ಗದ ಕಾಯಕ ಜೀವಿಗಳು ಮತ್ತು ಕುಶಲಕರ್ಮಿಗಳ ಸಂಖ್ಯೆ ಹೆಚ್ಚಿದೆ. ಇಂತಹ ಸಂದರ್ಭದಲ್ಲಿ ಕೆಳವರ್ಗದ ಸಾಂಸ್ಕೃತಿಕ ನಾಯಕರಾದ ಬಾಲಬಸವರು, ಮಂಟೇಸ್ವಾಮಿ ಮತ್ತು ಮಲೆಮಾದೇಶ್ವರರಂಥವರು ಕೆಳವರ್ಗಗಳ ಜನರ ಆರಾಧ್ಯ ದೈವಗಳಾಗಿ, ಅವರ ಸಾಂಸ್ಕೃತಿಕ ಶೂನ್ಯತೆಯನ್ನು ತುಂಬಿದ್ದಾರೆ. ವಚನ ಚಳವಳಿಯ ಕಾಯಕತತ್ವ, ಜಾತಿರಹಿತ ಸಮಾಜ ತತ್ವಗಳನ್ನು ಇವರು ಪ್ರತಿಪಾದಿಸಿದ್ದಾರೆ. ಈ ನಾಯಕರನ್ನು ಅನುಸರಿಸಿದ ಸಮುದಾಯಗಳು ಮುಂದೆ ಒಂದೊಂದು ಪಂಥಗಳಾಗಿ ರೂಪಿತಗೊಂಡಿವೆ.

ವೀರಶೈವ ಧರ್ಮಕ್ಕೆ ಒಂದು ಸಿದ್ಧಾಂತದ ರೂಪ ಕೊಡುವ ಮೂಲಕ ವಚನಗಳನ್ನು ವೀರಶೈವ ಧರ್ಮದ ಚೌಕಟ್ಟಿಗೆ ಮಾರ್ಪಡಿಸುವ ಪ್ರಯತ್ನ ಒಂದು ದಿಕ್ಕಾದರೆ, ಇವುಗಳಿಂದ ಹೊರಗುಳಿದ ಕೆಳವರ್ಗದ ಸಮುದಾಯಗಳು ಅಲ್ಲಮ ಬಸವಾದಿ ಪ್ರಥಮರನ್ನು ಕೇಂದ್ರವಾಗಿಟ್ಟುಕೊಂಡು ಸಾಂಸ್ಕೃತಿಕ ಆಚರಣಾತ್ಮಕ ಪಂಥಗಳಾಗಿ ಬೆಳೆದದ್ದು ಇನ್ನೊಂದು ದಿಕ್ಕಾಯಿತು. ಇವುಗಳಲ್ಲಿ "ಬಾಲಬಸವ ಪರಂಪರೆ, ನೀಲಗಾರರ ಪರಂಪರೆ, ದೇವರಗುಡ್ಡರ ಪರಂಪರೆ, ಕೊಡೆಕಲ್ಲ ಬಸವಣ್ಣನವರ ಪರಂಪರೆ, ರೇವಣಸಿದ್ಧನ ಸಂಪ್ರದಾಯ, ತಿಂಥಿಣಿ ಮೊನಪ್ಪನ ಪರಂಪರೆ ಮುಖ್ಯವಾಗಿವೆ. ವೀರಶೈವದಿಂದ ಹೊರಗುಳಿದ ಕೆಳವರ್ಗದ ಸಮುದಾಯಗಳು ಮೌಖಿಕಧಾರೆಯನ್ನು ತಮ್ಮ ಅಭಿವ್ಯಕ್ತಿಯ ವಾಹಕಗಳಾಗಿಸಿಕೊಂಡವು."[೧೦] ಮೌಕಿಕ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ಬೆಳೆದುಬಂದಂತ ಕೆಳವರ್ಗಗಳು ಮೌಖಿಕ ಸಾಹಿತ್ಯದ ಮುಖೇನ ಸಂಸ್ಕೃತಿಯನ್ನು

ಮೇಲೆತ್ತುವ ಕೆಲಸ ಮಾಡಿದರು. ತುಳಿತಕ್ಕೆ ಒಳಪಟ್ಟ ಸಮುದಾಯವನ್ನು ಉನ್ನತೀಕರಿಸುವ ನಿಟ್ಟಿನಲ್ಲಿ ಪಂಚಗಣಾಧೀಶ್ವರರು ಮುಂದಾದರು. ಮದ್ವಾನೇಶ ಬೇಡರ ಕನಕಮ್ಮನ ಜೊತೆ ಮದುವೆ ಆಗುವಂತಹದ್ದು. ಆ ಮುಖೇನ ಬೇಡ ಜನಾಂಗವನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡರು. ಇದುವರೆಗೂ ಲಿಂಗಾಯಿತರ, ಬೇಡರ, ಮಾದರ ಕತೆಯಾಗಿದ್ದ ಇದು ಇಲ್ಲಿ ಇನ್ನೊಂದು ಪ್ರಬಲ ಜಾತಿಯಾದ ಕುರುಬರನ್ನು ತನ್ನ ಕಡೆ ಓಲೈಸಿಕೊಳ್ಳುತ್ತದೆ. ಕುರುಬರ ಗೋಣಿಬಸಪ್ಪನನ್ನು ವಡ್ಡಟವ್ವ ಮದುವೆಯಾಗುತ್ತಾಳೆ.

"ಕೂಲಹಳ್ಳಿ ಮಠಕ ಮೂರುಕುಲ ಸೇರ್‍ಯಾವಯ್ಯ | ಸೋಕಾರ ಮೂವ ತಾಜೀಜಿ |
ಮೂರುಕುಲ ಸೇರ್‍ಯಾವಯ್ಯೋ | ಸೋಕಾರ ಮೂವ ತಾಜೀಜಿ |
ಗುರುವೆ ಮದ್ವಿ ಆಗ್ಯಾವಯ್ಯೋ | ಸೋಕೀರ ಮೂವ ತಾಜೀಜಿ |
ಅವರೆ ಲಗ್ನ ಆಗ್ಯಾರಯ್ಯೋ | ಸೋಕೀರ ಮೂವ ತಾಜೀಜಿ"[೧೧]

'ಗೋಣಿಬಸವೇಶ್ವರಗ ಲಗ್ನಾತಂತ್ರೀ, ಆ ಕುರುಬರ ಮಗ್ಳು ವಡ್ಡಟ್ಟವ್ವ, ಬ್ಯಾಡ್ರು ಮಗ ಗೋಣಿ ಬಸವೇಶ್ವರ, ಲಗ್ನವಾದ್ನಂತ, ಆದ್ರಿಂದ ಕೂಲಳ್ಳಿ ಮಠಕ್ಕೆ ಹೆಂಡ್ತಿ ಕುರುಬರಾಕಿ ತಾಯಿ ಬೇಡರಾಕಿ. ತಂದಿ ಜಂಗಮ್ರುವನು. ಗೋಣಿಬಸಪ್ಪ ಮದುವೆ ಆದದ್ದು ಕುರುಬರ ವಡ್ಡಟ್ಟವ್ವ' ಎಂಬುವಾಕೆಯನ್ನು ಹೀಗೆ ಮದುವೆ ಮಾಡಿಕೊಳ್ಳುವ ಮುಖೇನ ಎಲ್ಲಾ ವರ್ಗದ ಜನರನ್ನು ತಮ್ಮ ಒಕ್ಕಲುಗಳಾಗಿ ಮಾಡಿಕೊಂಡು ಪವಾಡಗಳನ್ನು ಮಾಡಿ ಜನರ ಮೆಚ್ಚುಗೆಗೆ ಪಾತ್ರರಾಗಿ ಸಾಂಸ್ಕೃತಿಕ ನಾಯಕರಾಗಿ ಚಿತ್ರದುರ್ಗ, ಬಳ್ಳಾರಿ, ದಾವಣಗೆರೆ, ಕೊಪ್ಪಳ, ಗದಗ ಭಾಗದಲ್ಲಿ ನೆಲೆನಿಂತ ದೈವಗಳಾದರು. ಸಮಾಜವನ್ನು ಹಾಗೂ ಮಾನವ ಸಂಬಂಧವನ್ನು ಕುಲಗೆಡಿಸಿ ಬದುಕನ್ನು ಅಸ್ತವ್ಯಸ್ತಗೊಳಿಸುವ, ಸಮಾಜ ಕಂಟಕಗಳಾದ ಮಾಟ ಮಂತ್ರಗಳೆಂಬ ದುಷ್ಟಶಕ್ತಿಯ ವಿರುದ್ಧ ಬಂಡೆದ್ದವನು ಗೋಣಿಬಸವ ಮಾಟ ಮಂತ್ರಗಾರರಿಗೆ ದುಸ್ವಪ್ನನಾಗಿದ್ದ ಬಗೆಯನ್ನು ಜನಪದರು ಹೇಳುವಂತೆ

ಅಂತರದಲ್ಲಿ ಆಡುವವರಿಗೆ ಗಂಡ
ಜಂತ್ರ ತಿರುಗವವರಿಗೆ ಗಂಡ
ಮಾಟ ಮಾಡುವವರಿಗೆ ಮಿಂಡನಾಗಿ
ಧರ್ಮದ ಗೋಣಿಬಸವನು ನಿಂತಿದ್ದಾನೆ.

ಪಂಚಗಣಾಧೀಶ್ವರರು ೧೬ನೇ ಶತಮಾನದ ಕೊನೆಯ ಕಾಲಘಟ್ಟವನ್ನು ಆಧಾರವಾಗಿಟ್ಟುಕೊಂಡು ಗೋಣಿಬಸವೇಶನು ೧೭-೧೮ನೇ ಶತಮಾನದ ಕಾಲಾವಧಿಯಲ್ಲಿ ಬದುಕಿ ಬಾಳಿದ ವ್ಯಕ್ತಿಯಾಗಿದ್ದಾನೆ. ಈ ಕಾಲಮಾನಕ್ಕೆ ಪೂರಕವಾಗಿ ೧೯ನೇ ಶತಮಾನದ ಬ್ರಿಟೀಷರ ಗೆಜೆಟಿಯರ್‌ನಲ್ಲಿ ಹರಪನಹಳ್ಳಿ ಪ್ರಾಂತ್ಯದ ಕೂಲಹಳ್ಳಿ ಎಂಬ ಊರಿನಲ್ಲಿ ಪವಾಡ ಸಿದ್ಧಿ ಪುರುಷನಾದ ಗೋಣಿಬಸವನೆಂಬ ವ್ಯಕ್ತಿಯಿದ್ದನು ಎಂಬ ಉಲ್ಲೇಖಗಳಿವೆ. ಗೋಣಿಬಸಪ್ಪನು ೧೭ನೇ ಶತಮಾನದಲ್ಲಿ ಹುಟ್ಟಿ ೧೮ನೇ ಶತಮಾನದಲ್ಲಿ ಬಾಳಿದ ಸಾಂಸ್ಕೃತಿಕ ಮಹಾಪುರುಷನಾಗಿದ್ದಾನೆ.

ಗೋಣಿಬಸವೇಶ್ವರನ ದೀಕ್ಷಾಗುರು ಶ್ರೀ ಅಳವಂಡಿ ಸಿದ್ಧಲಿಂಗೇಶ್ವರರೇ ಎಂಬುದಕ್ಕೆ ಚರಿತ್ರೆಯ ದಾಖಲೆಗಳಿಂದ ತಿಳಿದುಬರುತ್ತದೆ. ಮಾನವ ಕುಲೋದ್ಧಾರದ ಧ್ಯೇಯೋದ್ದೇಶದೊಳಗೆ ಇಡೀ ನಾಡನ್ನೇ ತನ್ನ ಸಂಚಾರ ಮಾರ್ಗವನ್ನಾಗಿ ಮಾಡಿಕೊಂಡು ಪವಾಡ ಶಕ್ತಿಯನ್ನು ಬಿತ್ತರಿಸುತ್ತಾ ಜನತೆಯ ಅಂಧಕಾರವನ್ನು ಮೌಢ್ಯತೆಯನ್ನು ದೂರ ಮಾಡಿ ಮಾನವೀಯ ಮೌಲ್ಯಗಳನ್ನು ಮೆರೆದವರು. ಇದಕ್ಕೆ ಕುರುಹುಗಳಾಗಿ ೭೭೭ ಮಠಗಳನ್ನು ಸ್ಥಾಪನೆ ಮಾಡಿರುವುದನ್ನು ಕಾಣಬಹುದು. ಗುರುವಿನಿಂದ ಜಂಗಮ ದೀಕ್ಷೆ ಪಡೆದ ಬಸವೇಶನು ಸಂಸಾರಿಯಾದವನು. 'ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿಯಂತೆ' 'ಸತಿಪತಿ ಒಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎಂಬಂತೆ ಬದುಕಿದವರು ಮದ್ದಾನಸ್ವಾಮಿ ಮತ್ತು ಗೋಣಿ ಬಸವರು. ಸಂಸಾರಿಯಾಗಿ, ಮಹಾ ಜಂಗಮರಾಗಿ ನಾಡನ್ನು ಬೆಳಗಿದರು. ಸಂಸಾರಿಯಾಗಿ ಮತ್ತು ಜಾತಿ, ಕುಲಗಳನ್ನು ಮೀರಿ ಬೆಳೆದವರು. ಜಾತ್ರೆಯ ಸಮಯದಲ್ಲಿ ಸುಣ್ಣ ತಯಾರಿಸುವ, ಕಸಮರಿಗೆ ಕಟ್ಟುವ, ಹಗ್ಗ ಹೊಸೆಯುವ, ಕುಂಬಾರಿಕೆ ಮಾಡುವ ಎಲ್ಲಾ ಜನಾಂಗಗಳನ್ನು ತಮ್ಮ ಒಕ್ಕಲುಗಳಾಗಿ ಮಾಡಿಕೊಂಡರು.

ಕೃಷಿ ಪದ್ಧತಿಗೆ ಹೆಚ್ಚು ಆದ್ಯತೆ ನೀಡಿರುವುದನ್ನು ಕಾಣಬಹುದು. ಕೃಷಿ ನಿರ್ವಹಣೆಗಾಗಿ ಹಲವು ಕೆರೆಗಳನ್ನು ನಿರ್ಮಿಸಿ ಸ್ವಂತ ಬೇಸಾಯಗಾರನಾಗಿ ಗೌಡರ ಮನೆಯಲ್ಲಿ ಕೆಲಸಕ್ಕಿದ್ದರು. ಅದರ ಪ್ರತೀಕವಾಗಿ ಗೋಣಿಬಸವರು ಬಳಸಿದ 'ಕುಡುಗೋಲ'ನ್ನು ಕೂಲಹಳ್ಳಿ ಮಠದಲ್ಲಿ ಈ ಹೊತ್ತಿಗೂ ಕಾಣಬಹುದು. ಇದು ಕೃಷಿ ಸಂಸ್ಕೃತಿಯ ಪ್ರತೀಕವಾಗಿ ರೂಪಿತವಾಗಿರುವುದನ್ನು ಕಾಣಬಹುದು. ಮಾದಿಗ ಸಮುದಾಯದವರಾಗಿ ಬಾಲಬಸವ ಪರಂಪರೆ ಕಂಡುಬರುತ್ತದೆ. ಇವರು ಗೋಣಿಬಸವನ ಕಾವ್ಯವನ್ನು ಹಾಡಿ ಜೀವನ ನಡೆಸುವಂತಹ ವೃತ್ತಿಗಾಯಕ ವರ್ಗವಾಗಿವೆ.

"ನಡೆ ತಪ್ಪು, ನುಡಿ ತಪ್ಪು, ನುಡಿಯುವ ನಾಲಿಗೆ ತಪ್ಪು,
ಸರ್ವ ತಪ್ಪುಗಳಾ ಪಾದದೋಳಗೆಯಿಟ್ಟು ಕೊಳ್ಳಪ್ಪಾ,
ಮುಪ್ಪಿನಾ ಮುದಿಗೋಣಿ ಅಪ್ಪಾ ಸಂಗನ ಬಸವ ||

ಅರವತ್ತು ಗಾವುದಲ್ಲಿದ್ದರೆ ಅರಿವಿನ ಗೋಣಿಯ್ಯ
ಮೂವತ್ತು ಗಾವುದದೆಲ್ಲಾದ್ದರೆ ಮುಪ್ಪಿನಾ ಗೋಣಿಯ್ಯ
ಅಪ್ಪಾ ಸಂಗನ ಬಸವಾ
ಕೂಲಹಳ್ಳಿ ಲೋಲಾ ಚನ್ನಿಗ ಚಾಡಿಕಾರರ ಗಂಡ
ಚಾವುಡಿಗೇ ಹೆಬ್ಬುಲಿ"[೨]

'ಹುಲಿಯನ್ನು ಹೂಡಿ ಸೋಮವಾರ ಬೇಸಾಯ ಮಾಡುವುದು'. 'ಹಾವನ್ನು ಬಾರಿಕೋಲನ್ನು ಮಾಡಿಕೊಂಡು ಬೇಸಾಯಮಾಡಿದ' ರೀತಿಯ ಅಚ್ಚರಿಯನ್ನು ಮೂಡಿಸುವಂತದ್ದು. ಕೃಷಿ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ಬೆಳೆದು ಬಂದಿರುವುದನ್ನು ಕಾಣಬಹುದು.

ಅಡವಿಯಳ್ಳಿಯಲ್ಲಿ ಕುಂಬಾರನಿಗೆ ತನ್ನ ವಿಭೂತಿಯಿಂದ ಗೋಣಿಬಸವ ಗಡಿಗೆಗಳೆಲ್ಲ ಸುಟ್ಟು ಗಟ್ಟಿಯಾಗದಂತೆ ಮಾಡುತ್ತಾರೆ. ಕೊಳಚೆ ಎನ್ನುವ ಗ್ರಾಮದಲ್ಲಿ ಕಚ್ಚಾ ಅರಿವೇರ ಮನೆತನದವರ ತೋಟದಲ್ಲಿ

ತೆಂಗಿನ ಕಾಯಿಗಳನ್ನೆಲ್ಲಾ ತನ್ನ ದೃಷ್ಟಿಶಕ್ತಿಯಿಂದಲೇ ಬೀಳಿಸುತ್ತಾನೆ. ಬಾಗಳಿ ವೀರಭದ್ರೇಶ್ವರ ದೇವಸ್ಥಾನದಲ್ಲಿ ಭಿಕ್ಷೆ ಬೇಡಲು ಹೋದಾಗ ಬೇಡರ ಜಾತಿಯವನಾಗಿ ಭಿಕ್ಷೆ ಬೇಡುತ್ತಿದ್ದುದನ್ನು ಅಲ್ಲಿನ ಜಂಗಮರು ವಿರೋಧಿಸಿದರು. “ಆಗ ಗೋಣಿಬಸವನು ವೀರಭದ್ರೇಶ್ವರ ಗುಡಿಯಲ್ಲಿನ ಬಾಗಿಲ ಮೂಲಕ ಹುಲಿ ಮೇಲೆ ಸವಾರಿ ಮಾಡಿಕೊಂಡು ಬಂದು ದರ್ಶನ ಕೊಟ್ಟನು. ಬಂಡ್ರಿಯಲ್ಲಿನ ಕೊರವರ ದುರಗಜ್ಜನ ಮಗನಿಗೆ ಹಾವು ಕಡಿದು ಸತ್ತಿದ್ದನ್ನು ಕಂಡು, ವಿಭೂತಿಯನ್ನು ಕೊಟ್ಟು ನೀರಿನಲ್ಲಿ ಹಾಕಿ ಕುಡಿಸಿರಿ ಎಂದು ಹೇಳಿ ಗೋಣಿಬಸವನು, ಮಗನಿಗೆ ಪ್ರಾಣವನ್ನು ನೀಡಿದನು. ಕೊಂಡೇನಹಳ್ಳಿ (ಹಡಗಲಿ ತಾಲೂಕು)ಯಲ್ಲಿ ತನ್ನ ವಿಭೂತಿ ಮಹಿಮೆಯಿಂದ ಊರಿಗೆ ತಗುಲಿದ್ದ ರೋಗವನ್ನು ವಾಸಿಮಾಡಿದನು. ಹೀಲದಳ್ಳಿಯಲ್ಲಿ ಬಂಜೆ ಆಕಳಿಗೆ ವಿಭೂತಿ ಲೇಪಿಸಿ ಕರುವನ್ನು ಹಾಕುವಂತೆ ಮಾಡಿದನು. ಅಲ್ಲಿಯೇ ಬಾಲಬಸವರಿಗೆ ಲಿಂಗದೀಕ್ಷೆ ನೀಡಿ ತನ್ನ ಒಕ್ಕಲಾಗಿಸಿಕೊಂಡನು. ಹೊಳಲು ಗ್ರಾಮದಲ್ಲಿ ಸೊಪ್ಪಿನ ತೆನೆಯನ್ನು ತಿಂದನು. ಹಾವನೂರು ಗ್ರಾಮದಲ್ಲಿ ಹರಿಜನಕೇರಿಯಲ್ಲಿ ಹಾವಾಗಿ ಹಾಲನ್ನು ಸ್ವೀಕರಿಸಿದನು. ಹೂವಿನ ಹಡಗಲಿಯಲ್ಲಿ ಬೈಲುಬಸಪ್ಪ ಎಂಬ ಶಿವಯೋಗಿಗೆ ಕಾಣಿಸಿಕೊಂಡನು. ಅಡವಿ ಸೋಮಲಾಪುರ ಎನ್ನುವಲ್ಲಿ ವಡ್ಡೆಟ್ಟವ್ವ ಎನ್ನುವ ಕುರುಬರ ಹುಡುಗಿಯನ್ನು ಅಪಹರಿಸಿಕೊಂಡು ಬಂದನು. ಸತ್ತ ಎಮ್ಮೆಯನ್ನು ಬದುಕಿಸಿದನು. ಮಲೆನಾಡಿನ ಗಂಜಿ ಎಂಬ ರಾಕ್ಷಸಿ ದಿಗಂಬರಳಾಗಿಸಿ ಕುರುವಿನ ಕೋಟೆಯ ಮಠದಲ್ಲಿ ಶಿಲ್ಪಿಯಾಗಿಸಿದನು. ಗುಂಜಿ ಎಂಬ ಇನ್ನೊಬ್ಬ ರಾಕ್ಷಸಿಯನ್ನು ಹಾವನೂರು ಗ್ರಾಮದ ದ್ಯಾಮವ್ವನೆಂಬ ದೇವತೆಯಾಗಲು ಆಶೀರ್ವದಿಸಿದನು”.[೧೩] ಹೀಗೆ ಗೋಣಿಬಸವ ಹಲವಾರು ಪವಾಡಗಳನ್ನು ಮಾಡುವುದರ ಮೂಲಕ ಆ ಭಾಗದ ಜನರನ್ನೆಲ್ಲ ತನ್ನ ಒಕ್ಕಲುಗಳನ್ನಾಗಿ ಮಾಡಿಕೊಂಡನು. ಅವುಗಳಲ್ಲಿ ಎಳವತ್ತಿ ಗ್ರಾಮದಲ್ಲಿ ಬೇಸಿಗೆಯ ಸಂದರ್ಭದಲ್ಲಿ ಮಳೆತರಿಸಿದನು. ನಿಂಬಳಗಿ ಗ್ರಾಮದಲ್ಲಿಯೂ ಮಳೆ ಪವಾಡ ಮಾಡಿದನು. ಸಿಪ್ಪಿ (ಶಿರ್ಸಿ) ಗ್ರಾಮದಲ್ಲಿ ತನ್ನ ಶಿರವನ್ನು ಕಡಿದುಕೊಂಡು ಮರಳಿ ಜೀವ ಪಡೆದನು. ಚಿತ್ರದುರ್ಗದ ಮದಕರಿನಾಯಕನಿಗೆ ವಿಭೂತಿಯಿಂದ ಕಾಲುನೋವು ಬರುವಂತೆ ಮಾಡಿ ಮರಳಿ ನೋವು ನಿವಾರಣೆ ಮಾಡಿದನು. ಶಿಖಾರಿಪುರದಲ್ಲಿ ಹುಚ್ಚುನಾಯಿಗೆ ಜೀವ ಬರಿಸಿದನು. ಕಂದಗಲ್ಲು ಗ್ರಾಮದಲ್ಲಿ ಮಗುವಿನ ಭಕ್ತಿಗೆ ಮೆಚ್ಚಿ ಆಶೀರ್ವದಿಸಿದನು. ಕೂಲಹಳ್ಳಿಯ ಹರಿಜನಕೇರಿಯಲ್ಲಿ ಕೊಟ್ಟೂರ ಗುರುಬಸವನ ದೇವಾಲಯ ನಿರ್ಮಾಣ ಮಾಡಲು ನಿರಾಕರಿಸಿದ ಹರಿಜನರಿಗೆ ವಾಂತಿ ಭೇದಿಯಾಗುವಂತೆ ಮಾಡಿ, ಅವರು ಕ್ಷಮೆ ಕೇಳಿದ ನಂತರ ಕಾಯಿಲೆ ವಾಸಿ ಮಾಡಿದನು. ಹರಪನಹಳ್ಳಿಯ ಮಂತ್ರವಾದಿಯಾದ ಕಾಳಿಕೊಂಡನು ಆರು ಗೊಂಬೆಗಳನ್ನು ಮಾಡಿ ಗೋಣಿ ಬಸವನನ್ನು ಕೊಲ್ಲಲು ಪ್ರಯತ್ನಿಸಿದನು. ಕಾಳಿಕೊಂಡನ ಮಗನನ್ನು ವಿಭೂತಿಯಿಂದ ಗೋಣಿಬಸವ ಕೊಂದು ಮತ್ತೆ ಬದುಕಿಸಿದನು. ಗಾಳಿಪೂಜೆ ಪಟ್ಟಣದಲ್ಲಿ ಕಾಡು ಸಿದ್ಧರಿದ್ದರು. ಇವರ ಹಿಂದೆ ಏಳುಕೋಟಿ ಸಿದ್ಧರಿದ್ದರು. ಇವರು ಮಂತ್ರಶಕ್ತಿಯಿಂದ ಮೊರವಿ ಅಂಗಿಯನ್ನು ಸಿದ್ಧಪಡಿಸಿ ಗೋಣಿ ಬಸವನಿಗೆ ತೊಡಿಸಲು, ಪ್ರಜ್ಞೆ ತಪ್ಪಿಬಿದ್ದನು. ಬಾಲಬಸವ ಈತನ ಮೈಯಲ್ಲಿ ಸೇರಿದ್ದ ವಿಷವನ್ನು ಹಾವಾಗಿ ಬಂದು ಹೀರಿ ತಾನು ಸತ್ತನು. ಪ್ರಜ್ಞೆ ಬಂದ ಗೋಣಿಬಸವ ಸತ್ತ ಹಾವನ್ನು ಬದುಕಿಸಿ ಬಾಲಬಸವನಿಗೆ ಮರುಜನ್ಮ ನೀಡಿದನು. ಅಲ್ಲದೆ ಅವರಿಗೆ ಕರ್ಣಕುಂಡಲಗಳನ್ನು ಕೈಯಲ್ಲಿ ತಂಬೂರಿ ಉಳುವಿನ ಬೆತ್ತವನ್ನು ನೀಡಿ ಭೂತ, ವರ್ತಮಾನ, ಭವಿಷ್ಯತ್ ಕಾಲಗಳನ್ನು ಅರಿಯುವ ಶಕ್ತಿಯನ್ನು ನೀಡಿದನು.

ಹಮ್ಮಿಗಿ ದೇಸಾಯಿಯ ತೋಟದಲ್ಲಿ ಬರಡು ತೆಂಗಿನ ಮರದಲ್ಲಿ ಕಾಯಿಗಳನ್ನು ಬಿಡುವಂತೆ ಮಾಡಿದನು. ಅಳವಂಡಿ ಸಿದ್ಧಲಿಂಗ ಸ್ವಾಮಿಗಳನ್ನು ತನ್ನ ಗುರುಗಳನ್ನಾಗಿ ಮಾಡಿಕೊಳ್ಳಲು ಅವರಿಗೆ ಒಂದು ರಾತ್ರಿಯಲ್ಲಿ ಗುಡಿಯನ್ನು ಕಟ್ಟಿದನು. ಚಿಗಟೇರಿ ಶಿವನಯ್ಯನು ಗೋಣಿಬಸವನನ್ನು ಹಿಂಬಾಲಿಸಿ ಬಂದು ಯುದ್ಧಮಾಡಿದನು. "ಗಾಳಿಪಟ್ಟಣದಲ್ಲಿ ಬಂದು ವಿಭೂತಿಯಿಂದ ಸಿದ್ಧರೆಲ್ಲರನ್ನು ಕಲ್ಲಾಗಿ ಮಾಡಿ ಗುಮ್ಮಗೋಳದ ಮಠದಲ್ಲಿ ನಿಲ್ಲಿಸಿದನು. ಚಿಕ್ಕಳ್ಳಿಯಲ್ಲಿ ಮಾಡಿದ ಪವಾಡದಿಂದ ಚಿಕ್ಕಳ್ಳಿಯ ಬಣಕಾರರು ಪಲ್ಲಕ್ಕಿ ಸೇವೆಯನ್ನು ನಿರ್ವಹಿಸಿದರೆ ಅಡವಿಹಳ್ಳಿ ಕಂಬಾರರು ಜಾತ್ರೆಗಿಂತ ಐದು ದಿವಸ ಮುಂಚಿತವಾಗಿ ಬಂದು ಒಂದು ಬಂಡಿ ಗಡಿಗೆಗಳನ್ನು ಕೂಲಹಳ್ಳಿ ಮಠಕ್ಕೆ ಕಳುಹಿಸಿ ಕೊಡುತ್ತಾರೆ. ಕೊಳಚೆ ಗ್ರಾಮದವರು ಒಂದು ಬಂಡಿ ತೆಂಗಿನಕಾಯಿ ಮತ್ತು ಗರಿಗಳನ್ನು ಕೊಡುತ್ತಾರೆ. ಬಾಗಳಿಯ ಜಂಗಮರು ರಥವನ್ನು ಕಟ್ಟುತ್ತಾರೆ. ಬಂಡ್ರಿಯ ಕೊರವ ಮನೆತನದವರು ೧೦೧ ಕಸಬರಿಕೆಗಳನ್ನು ಕೂಲಹಳ್ಳಿ ಜಾತ್ರೆಗೆ ಕಳುಹಿಸುತ್ತಾರೆ. ಅಡವಿಹಳ್ಳಿಯ ವಡ್ಡೆಟ್ಟವ್ವನ ಸಹೋದರ ಮನೆತನದವರು ೧ ಡಬ್ಬಿ ಎಣ್ಣೆಯನ್ನು, ಒಬಳಾಪುರದಿಂದ ರಥಕ್ಕೆ ಹಗ್ಗವನ್ನು ಕಳುಹಿಸುತ್ತಾರೆ. ರಪನಹಳ್ಳಿ ಉಪ್ಪಾರರು ಸುಣ್ಣ ಬಳಿಯುವುದನ್ನು ಕಾಣಬಹುದು".[೨೯] ಹೀಗೆ ಪವಾಡಗಳನ್ನು ಮಾಡಿ ಎಲ್ಲಾ ವರ್ಗದ ಜನರನ್ನು ತಮ್ಮ ಒಕ್ಕಲುಗಳಾಗಿ ಮಾಡಿಕೊಂಡು ತಮ್ಮತ್ತ ಸೆಳೆದುಕೊಂಡರು. ಕುಲೇಳು ಹದಿನೆಂಟು ಜಾತಿ ಒಂದೇ ಎಂದು ಸಾರಿದರು. ಹೀಗಾಗಿ ಈ ಭಾಗದ ಸಾಂಸ್ಕೃತಿಕ ನಾಯಕರಾಗಿ ಗೋಣಿಬಸವ ಕಂಡುಬರುತ್ತಾರೆ. ಗೋಣಿಬಸವನ ಪರಂಪರೆಯಲ್ಲಿ ಬಸವಿ ಬಿಡುವ ಪದ್ಧತಿಯಿದೆ.

ಮದ್ದಾನಸ್ವಾಮಿ ಹಾಗೂ ಗೋಣಿಬಸಪ್ಪರಂತೆ ಅದೇ ಸಂಪ್ರದಾಯವನ್ನು ಮಠಾಧಿಪತಿಗಳು ವಹಿಸುತ್ತಿದ್ದರು. ಇತ್ತೀಚಿನ ಸಂದರ್ಭಗಳಲ್ಲಿ ಶಿಷ್ಯರೆನಿಸಿರುವ ಮೇಲ್ವರ್ಗಗಳ ಜಾತಿಯ ಜನರ ಕೊಂಕು ನುಡಿಗಳಿಂದ ಪಾರಾಗಲು ಹಾಗೂ ಜೊತೆಯಲ್ಲಿ ಶ್ರೇಣಿಕರಣದ ಪ್ರಭಾವವೋ ಎಂಬಂತೆ ಕೆಲವು ತಲೆಗಳಿಂದ ಲಿಂಗಾಯಿತ ಜಂಗಮರ ಜೊತೆಗೆ ಮದುವೆ ಸಂಪ್ರದಾಯ ನಡೆಯುತ್ತಿದೆ. ಹಿಂದೆಯಿದ್ದ ಕೆಳಜಾತಿಯ ಜೊತೆ ಮದುವೆ ಬಾಂಧವ್ಯ ಇಂದು ಜಾತಿ ಶ್ರೇಣೀಕರಣದ ಪ್ರಾಬಲ್ಯದಿಂದಾಗಿ ಕುಸಿದು ಹೋಗಿದೆ. ಮೌಲ್ಯಗಳು ಬದಲಾಗುತ್ತಿವೆ. ಆದರೆ ಬಾಲಬಸವ ಸಂಪ್ರದಾಯದಲ್ಲಿ ಬಾಲಬಸವರಿಗೆ ಅನ್ಯಜಾತಿಯ ಹೆಣ್ಣು ಸಿಗದೆ ಹಾಗೆ ಉಳಿಯುವ ಸ್ಥಿತಿಯಲ್ಲಿದ್ದಾರೆ. ಬಸವಿ ಬಿಡುವ ಪದ್ಧತಿಯನ್ನು ರೂಢಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ.

ಗೋಣಿಬಸಪ್ಪ ಯಾವುದೇ ವರ್ಗಕ್ಕೆ, ಜಾತಿಗೆ ಮೀಸಲಾಗದೆ ಎಲ್ಲಾ ಜನರ ಬಾಯಿಯಲ್ಲಿ ಮನೆ ಮಾತಾಗಿರುವ, ಜನಪದರ ಆರಾಧ್ಯ ದೈವವಾಗಿ ರೂಪಿತವಾಗಿರುವುದನ್ನು ನೋಡುತ್ತೇವೆ. ಗೋಣಿಬಸವ ಮತ್ತು ತಿಪ್ಪೇಸ್ವಾಮಿ ಹೆಚ್ಚು ಜನಪದೀಕರಣಕ್ಕೆ ಒಳಗಾಗಿರುವ ದೈವವಾಗಿದ್ದಾರೆ.

### ೩.೩. ಪಂಚಗಣಾಧೀಶ್ವರರು ಮತ್ತು ಪ್ರಭುತ್ವದೊಂದಿಗಿನ ಸಂಬಂಧ

ಕೊಟ್ಟೂರು ಗುರುಬಸವನ ಜೀವನವನ್ನು ನೋಡಿದರೆ ನಮಗೆ ಮುಖ್ಯವಾಗಿ ಕಂಡುಬರುವುದು ಈತನೊಟ್ಟಿಗೆ ಇದ್ದ ಪ್ರಭುತ್ವದ ಸಂಬಂಧ. ಗುರು ಬಸವನ ಕುರಿತು ಪವಾಡಗಳನ್ನು ಕೊಟ್ಟೂರು ಬಸವೇಶ್ವರ

ಚಾರಿತ್ರ್ಯದಲ್ಲಿ ವಿಸ್ತಾರವಾಗಿ ವಿವರಿಸಲ್ಪಟ್ಟಿವೆ. ಅವುಗಳೆಲ್ಲವೂ ಪ್ರಭುತ್ವದೊಟ್ಟಿಗಿನ ಈತನ ಸಂಬಂಧಗಳನ್ನು ಕುರಿತೇ ಹೇಳುತ್ತದೆ. "ಪ್ರಭುತ್ವದೊಟ್ಟಿಗಿನ ಪವಾಡಗಳು ಬರೀ ಗುರುಬಸವನಿಗಷ್ಟೇ ಸೀಮಿತವಾಗಿಲ್ಲ. ತಿಪ್ಪೇಸ್ವಾಮಿ, ಗೋಣಿಬಸವ ಮತ್ತು ಮದ್ದಾನಸ್ವಾಮಿಯನ್ನೊಳಗೊಂಡ ಎಲ್ಲ ಧಾರ್ಮಿಕ ಸಂತರ ಜೀವನದಲ್ಲಿಯೂ ಕಂಡುಬರುತ್ತದೆ. ಗುರುಬಸವನಂತವರು ಅದೆಷ್ಟೇ ವೈರಾಗ್ಯಶೀಲರಾಗಲಿ ಒಂದು ಪ್ರಭುತ್ವದ ಆಡಳಿತ ವ್ಯವಸ್ಥೆಯಲ್ಲಿ ಬದುಕಿದ್ದರು. ಇದರಿಂದಾಗಿ ಇದಕ್ಕೆ ಪ್ರತಿಕ್ರಿಯಿಸಲೇ ಬೇಕಾಗಿತ್ತು. ಹಾಗಾಗಿ ಪಂಚಗಣಾಧೀಶ್ವರರ ಜೀವನವು ಅಂದಿನ ರಾಜಕೀಯ ಅಧಿಕಾರ ಶಕ್ತಿಕೇಂದ್ರದೊಂದಿಗೆ ಬಿಡಿಸಲಾರದ ನಂಟನ್ನು ಹೊಂದಿದೆ."[೧೫]

ಗುರುಬಸವನು ಹರಪನಹಳ್ಳಿ ಪಾಳೆಗಾರ ದಾದಿನಾಯಕನ ಮೂಲಕ ಕುರುಡನಿಗೆ ಕಣ್ಣುಬರುವಂತೆ ಮಾಡಿದ್ದು. ಈ ಬಗ್ಗೆ ಸಿದ್ಧನಂಜೇಶ (ಗುರುರಾಜ ಚಾರಿತ್ರ್ಯ) ಬಸವಲಿಂಗ ಕವಿ (ಕೊಟ್ಟೂರೊ ಬಸವೇಶ್ವರ ಚಾರಿತ್ರ್ಯ)ದಲ್ಲಿ ವಿವರಿಸಿದ್ದಾರೆ. ಒಮ್ಮೆ ಎರಡು ಕಣ್ಣುಗಳು ಕಾಣದ ಕುರುಡನೊಬ್ಬ ಗುರುಬಸವನ ಬಳಿ ಬಂದು ಕಣ್ಣುಗಳನ್ನು ಕೊಡು ಎಂದು ಬೇಡಿಕೊಳ್ಳುತ್ತಾನೆ.

"ಕರುಣೆಗಳ ದೇವ ಕಂಡೆಲವೊ ಈವೊರಾಳವ
ದೊರೆ ದಾದಿನಾಯ್ಕ ನೆಡೆಗೆಯ್ಯೆ ಕಣ್ಗಳನೀವ
ದೊರೆಗಳೇ ನಾವು ಕೊಡುವೊಡೆ ಹೋಗು ಹೋಗೆಂಬ ಬೆಡಗಿನ
ನುಡಿಗೆ ಬಂದು.

ಕಣ್ಣನಿತ್ತಪ್ಪ ದಾದಿನಾಯ್ಕ ಹೋಗೆಂದು ಬಸ
ವಣ್ಣ ನಿನ್ನೆಡೆಗೆ ಕಳುಹಿಸನೆಂದು ನಮಿಸೆ ಮು
ಕ್ಕಣ್ಣ ಬಸವಯ್ಯನೇ ಬಲ್ಲನಾ ಕಣ್ಗಳಾ ಕೊಡುವವನೆ ತನ ಮಹಿಮೆಯು
ಹಣ್ಗೆದುದಕೇನಾಯ್ತು ಕರ್ತ ತಾನೆಂದಂತೆ
ಕಣ್ಣು ಬಂದಪನೆಲು ಬಂದವಾ ಮಲ್ಲೇಶ
ಕಣ್ಗ ಕೊಡಿಸಿದ ತೆರದಿ ಪಾಪಸಾನಿಯ ಕೈಯ್ಯ ಚಕ್ರಪಾಣೀರಂಗಗೆ"[೧೬].

ಗುರುಬಸವ ತಾನೇ ನೇರವಾಗಿ ಕಣ್ಣುಗಳನ್ನು ನೀಡದೆ ದಾದಿನಾಯಕನ ಮೂಲಕ ನೀಡಿದ. ಯಾವಾಗಲೂ ಧರ್ಮ ಎನ್ನುವುದು ಪ್ರಭುತ್ವದಿಂದ ಪ್ರತ್ಯೇಕವಲ್ಲ. ಧಾರ್ಮಿಕ ಸಂತರು ಪ್ರಭುತ್ವಕ್ಕೆ ಮಾನ್ಯತೆಯನ್ನು ಸೃಷ್ಟಿಸುವ ಕೆಲಸವನ್ನು ತಮ್ಮ ಪವಾಡಗಳ ಮೂಲಕ ಮಾಡುತ್ತಿರುತ್ತಾರೆ. ಧರ್ಮವು ರಾಜನಿಗೆ ಅಲೌಕಿಕ ಶಕ್ತಿಯಿದೆ ಎನ್ನುವ ಮೂಲಕ ರಾಜಾಡಳಿತಕ್ಕೆ ಅನುಕೂಲಕರವಾದ ದೃಷ್ಟಿಕೋನವನ್ನು ರೂಪಿಸುತ್ತದೆ. ಅದೇ ಹೊತ್ತಲ್ಲಿ ರಾಜಪ್ರಭುತ್ವವು ಧಾರ್ಮಿಕ ಸಂತರ ಅಲೌಕಿಕ ಶಕ್ತಿಯನ್ನು ಮನ್ನಿಸಿ ಅವರಿಗೆ ದಾನ-ದತ್ತಿಗಳನ್ನು ನೀಡುತ್ತವೆ. ರಾಜಪ್ರಭುತ್ವವು ತಾನಾಗಿಯೇ ಹುಡುಕಿಕೊಂಡು ಬಂದು ಆಶೀರ್ವಾದ ಪಡೆಯಲು ಮುಂದಾಗುತ್ತವೆ. ಗುರುಬಸವ ಆ ಹೊತ್ತಿನ ಪ್ರಬಲ ಧಾರ್ಮಿಕ ಪುರುಷನಾಗಿರುವುದು ಒಂದು ಕಾರಣವಾದರೆ,

ಈತನಿಗೆ ತಮ್ಮ ಲಾಂಛನ, ಛತ್ರಿ, ಬಿರುದಾವಳಿಗಳನ್ನೆಲ್ಲಾ ಅರ್ಪಿಸಿ ಪರಮ ಭಕ್ತನಾಗುವ ಮೂಲಕ ಈತನನ್ನು ಅನುಸರಿಸುವ ಆಯಾ ಜಾತಿ ಇಲ್ಲವೇ ಒಟ್ಟು ಸಮುದಾಯವನ್ನು ತಮ್ಮ ಪರವಾಗಿಸಿಕೊಳ್ಳುವ ಪ್ರಯತ್ನವನ್ನು ರಾಜರು ಮಾಡುತ್ತಾರೆ.

ಜನಸಮುದಾಯದಿಂದ ಅಲೌಕಿಕ ಎನ್ನಿಸಿಕೊಳ್ಳುವ ಈ ಶಕ್ತಿಯು ಗುರು ಬಸವನಿಗೆ ಅಪಾರವಾದ ಜನಬೆಂಬಲವನ್ನು ನೀಡಿ ಅನುಯಾಯಿಗಳಾಗುವಂತೆ ಮಾಡಿತ್ತು. ಸಂಡೂರಿನ ಅರಸ ಪರವಿನಾಯಕ ಮತ್ತು ಹರಪನಹಳ್ಳಿಯ ದಾದಿನಾಯಕನ ಮಗ ರಂಗರಾಜನಿಗೂ ಕೂಡ ಗುರುಬಸವ ಮಕ್ಕಳನ್ನು ಕರುಣಿಸಿದ್ದನು. ಅದಕ್ಕಾಗಿ ಆ ಅರಸರು ಕಪ್ಪಕಾಣಿಕೆಗಳನ್ನು ಗುರುಬಸವನಿಗೆ ಸಲ್ಲಿಸಿದರು. ಜನಸಮುದಾಯಗಳನ್ನು ಪವಾಡಗಳ ಮೂಲಕ ತಮ್ಮ ಅನುಯಾಯಿಗಳನ್ನಾಗಿ ಸಂಘಟಿಸುವ ಮೂಲಕ ಗುರುಬಸವನಂತಹ ಧಾರ್ಮಿಕ ಪುರುಷರು ರಾಜಪ್ರಭುತ್ವಕ್ಕೆ ಸಮಾನವಾದ ಪರ್ಯಾಯ ಶಕ್ತಿಯನ್ನು ಹುಟ್ಟುಹಾಕಿದರು.

ನಾಯಕನಹಟ್ಟಿ ತಿಪ್ಪೇಸ್ವಾಮಿಯು ಹಟ್ಟಿ ಮಲ್ಲಪ್ಪನಾಯಕ ದೊಡ್ಡಹಳ್ಳದ ಸಾಲಿನಲ್ಲಿ ಒಡ್ಡುಹಾಕಿ ಕೆರೆ ನಿರ್ಮಾಣ ಕೈಗೊಂಡಿರುತ್ತಾನೆ. ನೀರಾವರಿ ವ್ಯವಸ್ಥೆ ಕಲ್ಪಿಸಬೇಕು. ಕೃಷಿ ಸಂಸ್ಕೃತಿಯಾಗಿ ಪರಿವರ್ತಿಸಬೇಕು ಎಂಬ ಘನ ಉದ್ದೇಶವನ್ನು ಹೊಂದಿ, ಕೆರೆ ನಿರ್ಮಾಣದ ಕಾರ್ಯದಲ್ಲಿ ತೊಡಗಿದರು. ಹಟ್ಟಿ ಮಲ್ಲಪ್ಪನಾಯಕನ ಬೊಕ್ಕಸದಲ್ಲಿದ್ದ ಹಣವೆಲ್ಲ ಬರಿದಾಗಿತ್ತು. ಕಾರಣ ಆನೆಗೊಂದಿ ಸಂಸ್ಥಾನದಲ್ಲಿ ಯುದ್ಧವಾಗಿದ್ದರಿಂದ ಹಣದ ಮುಗ್ಗಟ್ಟನ್ನು ಎದುರಿಸಬೇಕಾಯಿತು. ಅಂತಹ ಸಂದರ್ಭದಲ್ಲಿ ತಿಪ್ಪೇರುದ್ರಸ್ವಾಮಿ ಮಲ್ಲಪ್ಪನಾಯಕನನ್ನು ಕೇಳುತ್ತಾರೆ. ಏಕೆ ಕೆರೆಯ ಕೆಲಸ ಅರ್ಧಕ್ಕೆ ನಿಂತಿದೆ. ಅದನ್ನು ಮುಂದುವರಿಸಿ ಎಂದು ಹೇಳಿದರು. ಕೆಲಸಗಾರರಿಗೆ ಹಣದ ವ್ಯವಸ್ಥೆ ನಾನು ಮಾಡುತ್ತೇನೆ ಎಂದು ಹೇಳಿ ಜನರಿಗೆ ಕೆಲಸಕ್ಕೆ ಪ್ರತಿಯಾಗಿ ಮರಳಿನಕುಪ್ಪೆ ಮಾಡಲು ಹೇಳಿ ಬೆತ್ತದಿಂದ ಮುಟ್ಟಿದಾಗ ಮರಳಿನಕುಪ್ಪೆಯಲ್ಲಿ ಅವರ ಶ್ರಮಕ್ಕೆ ತಕ್ಕಷ್ಟು ಹಣ ಸಿಗುತ್ತದೆ. ಇದೆಲ್ಲವನ್ನು ನೋಡಿದ ಮಲ್ಲಪ್ಪನಾಯಕ ಸ್ವಾಮಿಗಳ ಪಾದಕ್ಕೆ ಎರಗಿ ಇಡೀ ಸಮಸ್ತ ಸಾಮ್ರಾಜ್ಯ ಕಿರೀಟ ಹಾಗೂ ೭೭ ಬಿರುದಾವಳಿ, ಛತ್ರಿಗಳನ್ನು, ಚಾಮರಗಳೆಲ್ಲವನ್ನು ಸ್ವಾಮಿಯ ಪಾದಗಳಿಗೆ ಅರ್ಪಿಸಿದನು. ಅಕ್ಷಯ ಬುತ್ತಿಯನ್ನು ಕರುಣಿಸಿದ್ದು ಲಿಂಗವನ್ನು ಮಾಯ ಮಾಡಿದ್ದು, ನಿಡುಗಲ್ಲು ರಾಜನಿಗೆ ಮಕ್ಕಳನ್ನು ಕರುಣಿಸಿದ್ದು, ಹೈದರನಿಗೆ ಪುತ್ರ ಸಂತಾನ ನೀಡಿದ್ದು ಹೀಗೆ ಮಾಡುವ ಮುಖೇನ ರಾಜರ ಮನ್ನಣೆ, ಜನ ಸಮುದಾಯದ ಮನ್ನಣೆ ಪಡೆದರು. ಸಂತರು ಬದುಕಿರುವಾಗಷ್ಟೆ ಪ್ರಭುತ್ವದೊಂದಿಗೆ ಸಂಬಂಧ ಹೊಂದಿರುವುದಿಲ್ಲ, ಸತ್ತ ಮೇಲೂ ಅವರ ಅದೆಷ್ಟೋ ಪವಾಡಗಳು ಪ್ರಭುತ್ವದೊಂದಿಗೆ ತಳಕು ಹಾಕಿಕೊಂಡಿರುತ್ತವೆ. ತಿಪ್ಪೇಸ್ವಾಮಿ ಸಮಾಧಿಗೆ ಕೈ ಮುಗಿವ ಹೈದರಾಲಿ "ಗಂಡು ಮಗು ಜನಿಸಿದರೆ ನಿನ್ನ ಹೆಸರಿಡುವೆ' ಎಂದು ಬೇಡಿಕೊಳ್ಳುವುದು, ಈ ಎಲ್ಲ ಅಂಶಗಳು ತಿಪ್ಪೇಸ್ವಾಮಿ ಜೀವನವೂ ಪ್ರಭುತ್ವದೊಂದಿಗೆ ನಂಟನ್ನು ಹೊಂದಿದೆ ಎಂಬುದನ್ನು ಸೂಚಿಸುತ್ತವೆ. ಹಾಗೆಯೇ ತನ್ನ ಅನುಯಾಯಿಗಳಾದ ನಾಯಕ ಜನಾಂಗದ ಬೇಟೆ ಸಂಸ್ಕೃತಿಯನ್ನು ಕೃಷಿ ಸಂಸ್ಕೃತಿಯನ್ನಾಗಿ ಪರಿವರ್ತಿಸುವ, ಅಲೆಮಾರಿ ಜನಾಂಗವನ್ನು ಒಂದೆಡೆ ನೆಲೆನಿಲ್ಲಿಸುವ ಪ್ರಯತ್ನಮಾಡಿದನು. ಕೊಟ್ಟೂರ ಗುರುಬಸವನಿಗೆ ಹೆಚ್ಚಾಗಿ ನಡೆದುಕೊಳ್ಳುವವರು

ಸಾಮಾಜಿಕವಾಗಿ, ಉನ್ನತವರ್ಗ ಎನಿಸಿಕೊಂಡ ಲಿಂಗಾಯುತ ಸಮುದಾಯದವರು ಈಗಾಗಲೇ ಕೃಷಿ ಸಂಸ್ಕೃತಿಯಲ್ಲಿ ನೆಲೆ ನಿಂತವರಾಗಿದ್ದರು".[೨] ಹೀಗೆ ನೆಲೆನಿಂತ ಸಮುದಾಯದ ಜನರನ್ನು ಪವಾಡಗಳ ಮೂಲಕ ಆಕರ್ಷಿಸಿದರು. ಪವಾಡಗಳ ಮುಖೇನ ಪ್ರಬಲ ಧಾರ್ಮಿಕ ಸಂತರಾಗಿ ರೂಪಿತರಾಗಿದ್ದರು. ಇವರು ರಾಜರ ಮನ್ನಣೆಯನ್ನು ಪಡೆದು ಪ್ರಭುತ್ವದೊಂದಿಗೆ ಸಂಬಂಧವನ್ನು ಹೊಂದಿರುವುದನ್ನು ಈ ಮೇಲಿನ ಎಲ್ಲ ಅಂಶಗಳ ಕಾಣಬಹುದಾಗಿದೆ. ಹಾಗಾಗಿ ಇವರಿಗೆ ರಾಜಕೀಯ ಶಕ್ತಿಯೊಂದಿಗೆ ನಿಕಟವಾದಂತಹ ಸಂಬಂಧವಿತ್ತು. ಪವಾಡಗಳನ್ನು ಮಾಡಿ ಇಡೀ ರಾಜಕೀಯ ಶಕ್ತಿಯನ್ನು ನಿಯಂತ್ರಿಸಿ ಅಲ್ಲಿ ತಮ್ಮ ಪ್ರಭುತ್ವವನ್ನು ಮೆರೆದವರು.

**೩.೪. ಪಂಚಗಣಾಧೀಶ್ವರರಾಗಿ ಸಲ್ಲಿಸಿದ ಸೇವೆ ಮತ್ತು ಸಾಮಾಜಿಕ ಬದುಕು**

ಪಂಚಗಣಾಧೀಶ್ವರರು ನೆಲೆನಿಂತ ಕ್ಷೇತ್ರಗಳಲ್ಲ ಪಾಳೆಗಾರಿಕೆಯ ಆಡಳಿತಕ್ಕೆ ಒಳಪಟ್ಟಿದ್ದವು. ಪಾಳೇಗಾರಿಕೆ ಆಡಳಿತ ಅಸ್ತಿತ್ವಕ್ಕೆ ಬರುವ ಮೊದಲು ವಿಜಯನಗರದ ಆಡಳಿತ ಇತ್ತು. ನಂತರ "ವಿಜಯನಗರ ಪತನಾನಂತರ ಪಾಳೆಗಾರರು ಒಬ್ಬರನ್ನೊಬ್ಬರು ಮುಗಿಸುವ ಪೈಪೋಟಿಯಲ್ಲಿ ಇನ್ನಿಲ್ಲದಷ್ಟು ಪ್ರಮಾಣದ ಯುದ್ಧಗಳಲ್ಲಿ ತೊಡಗಿದರು. ಇದರಿಂದಾಗಿ ಸೇನಾಶಕ್ತಿಯ ಪ್ರಾಮುಖ್ಯತೆ ಹೆಚ್ಚಾಗಿ ಸಾಮಾಜಿಕ ರಂಗದಲ್ಲಿ ಸಮರಶೀಲ ಜಾತಿಗಳ ಪ್ರಾಮುಖ್ಯತೆ ಹೆಚ್ಚುತಾ ಹೋಯಿತು. ಅವುಗಳಲ್ಲಿ ಬೇಡ ಮತ್ತು ಕುರುಬ ಜನಾಂಗ ಪ್ರಮುಖವಾದವು. ಮಧ್ಯ ಕರ್ನಾಟಕದಲ್ಲಿ ಅಸ್ತಿತ್ವಕ್ಕೆ ಬಂದ ಚಿತ್ರದುರ್ಗ, ಹರಪನಹಳ್ಳಿ, ನಾಯಕನಹಟ್ಟಿ, ಗುಡೇಕೋಟೆ, ಜರಿಮಲೆ, ರಾಯದುರ್ಗದ ಪಾಳೆಗಾರರು ಬೇಡ ಜನಾಂಗದವರಾಗಿದ್ದರು."[೨೮] ಪಾಳೆಗಾರಿಕೆಯ ಆಡಳಿತದಲ್ಲಿ ಹಲವಾರು ಪಾಳೆಪಟ್ಟುಗಳ ಮಧ್ಯೆ ಕಲಹಗಳು ಸಂಭವಿಸುತ್ತಿದ್ದವು. ಇದರಿಂದ ಶ್ರೀಸಾಮಾನ್ಯ ಜನರಿಗೆ ತೊಂದರೆವುಂಟಾಯಿತು. ಇದರಿಂದ ಬೇಸತ್ತ ಜನರು ಯುದ್ಧಗಳ ನೆರಳಿನಲ್ಲಿ ಬದುಕುವಂತಹ ಜನರು ಅಶಾಂತಿಯಿಂದ, ಭಯದ ನೆರಳಿನಲ್ಲಿ ಬದುಕನ್ನು ಸವೆಸುತ್ತಿದ್ದರು. ನೊಂದ ಜನರಿಗೆ ನೆರವನ್ನು ನೀಡಲು., ಅಜ್ಞಾನ, ಅಂಧಕಾರ, ಮೌಢ್ಯತೆಯ ಬಲೆಯಿಂದ ಬಳಲಿದ ಜನರಿಗೆ ಆಶಾದೀಪವಾಗಿ ಪಂಚಗಣಾಧೀಶ್ವರರು ನೆರವಾದರು. ಅಸಮಾನತೆ, ಮೌಢ್ಯತೆಯನ್ನು ತೊಲಗಿಸಿದರು. ಜನರಿಗೆ ನೆಮ್ಮದಿಯ ಬದುಕನ್ನು ನಡೆಸಲು ಮುಂದಾದರು. ಬಡತನ, ಅಜ್ಞಾನ, ರೋಗ ರುಜಿನಿಗಳಿಗೆ ನಿಮ್ಮಲ್ಲಿನ ಮೌಢ್ಯತೆಯೇ ಕಾರಣ ಎಂಬುವ ಅರಿವನ್ನು ಮೂಡಿಸಿದರು. ಕಾಯಕತತ್ವವನ್ನು ರೂಪಿಸಿದರು. ನಾಯಕನಹಟ್ಟಿ ತಿಪ್ಪೇಸ್ವಾಮಿ ಸ್ವತಃ ನೇಗಿಲನ್ನು ಹಿಡಿದು ಕೆಲಸಮಾಡುವುದರ ಮೂಲಕ ಆ ಸಮುದಾಯದ ಜನರಿಗೆ ಕಾಯಕ ಸಂಸ್ಕೃತಿಯ ಅರಿವು ಮೂಡಿಸಿದರು.

ಜಾತಿ, ವರ್ಗ, ವರ್ಣಗಳ ಅಸಮಾನತೆಯನ್ನು ಒಡೆದೋಡಿಸಲು ಕುಲೇಳು ಹದಿನೆಂಟು ಜಾತಿಗಳು ಒಂದೇ ಎಂದು ಸಾರಿದರು. ಲಿಂಗಧಾರಣೆ ಮತ್ತು ವೈವಾಹಿಕ ಸಂಬಂಧಗಳ ಮೂಲಕ ಸಮಾಜದ ವಿವಿಧ ವರ್ಗಗಳಿಗೆ ಮಾನ್ಯತೆ ನೀಡುವುದರ ಮೂಲಕ ಸಮಾನತೆ ಕಲ್ಪಿಸಿದರು. ಬೇಡ ಜನಾಂಗ ಮಧ್ಯಕರ್ನಾಟಕ ಭಾಗದಲ್ಲಿ ಪ್ರಭುತ್ವವನ್ನು ಹೊಂದಿತ್ತು. ಇವರಿಗೆ ತಿಪ್ಪೇಸ್ವಾಮಿ ಲಿಂಗಧಾರಣೆ ಮಾಡುವುದರ ಮುಖಾಂತರ ಪ್ರಭುತ್ವದ ಮೇಲೆ ಪ್ರಭಾವ ಬೀರಿದ್ದಾರೆ. ಕುರುಬರ ವಡ್ಡಟ್ಟವ್ವವನ್ನು ಗೋಣೆಬಸಪ್ಪ ಮದುವೆಯಾಗುವುದು,

ಜೊತೆಗೆ ಮದ್ಭಾನಸ್ವಾಮಿ ಬೇಡರ ಕನಕವ್ವನನ್ನು ಮದುವೆ ಆಗುವಂತಹದ್ದು. ಕೊಟ್ಟೂರೇಶ್ವರ ಮಾದಿಗ ಜನಾಂಗವನ್ನು ತಮ್ಮ ಹಿಡಿತಕ್ಕೆ ತೆಗೆದುಕೊಳ್ಳುವ ಮೂಲಕ ಎಲ್ಲ ಜನರಿಗೂ ಸಮಾನ ಅವಕಾಶಗಳನ್ನು ಕಲ್ಪಿಸಿದರು. ಎಲ್ಲರು ಸಮಾನರು ಎಂಬ ಅರಿವನ್ನು ಮೂಡಿಸಿದರು. ಪ್ರಬಲ ವರ್ಗವನ್ನು ಹತ್ತಿಕ್ಕಲು ಪವಾಡಗಳನ್ನು ಮಾಡಿ ಜನರನ್ನು ತಮ್ಮ ಕಡೆ ಸೆಳೆದುಕೊಂಡರು. ಎಲ್ಲ ಜನಾಂಗದವರನ್ನು ತಮ್ಮ ಒಕ್ಕಲುಗಳಾಗಿ ಮಾಡಿಕೊಂಡು ಜನಪದರ ಆರಾಧ್ಯ ದೈವಗಳಾಗಿ ಪಂಚಗಣಾಧೀಶ್ವರರು ಮಧ್ಯಕರ್ನಾಟಕ ಭಾಗದಲ್ಲಿ ನೆಲೆನಿಂತ ದೈವಗಳಾದರು.

ರೋಗ, ಬರಗಾಲ, ಸಾವು, ಬಂಜೆತನ ಮುಂತಾದ ಜನರಿಗೆ ಸಮಸ್ಯೆಗಳಿಗೆ ಪರಿಹಾರ ನೀಡುವುದು ಮತ್ತು ಪವಾಡಗಳ ಮೂಲಕ ಮಾನವೀಯ ಮೌಲ್ಯಗಳನ್ನು ಜನತೆಯಲ್ಲಿ ತುಂಬಿದರು. ಧರ್ಮದ ಮೂಲ ಉದ್ದೇಶ ಮಾನವನಲ್ಲಿ ಮನವೀಯ ಮೌಲ್ಯಗಳನ್ನು ವೃದ್ಧಿಸಿ, ಪ್ರತಿಯೊಬ್ಬ ವ್ಯಕ್ತಿಯೂ ಉತ್ತಮ ಮಾನವನಾಗಿ ಬಾಳುವಂತೆ ಮಾಡುವುದು. ಹೀಗೆ ಮಾಡುವುದರಿಂದ ಒಳ್ಳೆಯ ಸಮಾಜ ನಿರ್ಮಾಣಮಾಡುವ ಕನಸು ಹೊತ್ತರು. ಶಾಂತಿ ನೆಮ್ಮದಿಯಿಂದ ಜನತೆ ಬದುಕುವ ಮಾರ್ಗ ತೋರಿದವರು. ಅಸಮಾನತೆಗಳು ಎಲ್ಲೆಲ್ಲಿ ಕಂಡು ಬರುತ್ತವೆ ಅಲ್ಲೆಲ್ಲ ಇವರು ತಮ್ಮ ಪವಾಡ ಶಕ್ತಿಗಳ ಮೂಲಕ ಮೌಢ್ಯತೆಯನ್ನು ಹತ್ತಿಕ್ಕಿದರು.

ಮನುಷ್ಯನ ಮೂಲಭೂತ ಅವಶ್ಯಕತೆಗಳಲ್ಲಿ ಅನ್ನ ಮುಖ್ಯವಾದುದು. ಇದನ್ನು ಉತ್ಪಾದಿಸುವ ವೃತ್ತಿ, ಒಕ್ಕಲುತನ, ಕೃಷಿಗಾಗಿ ಸಂಸ್ಕೃತಿಗೆ ಹೆಚ್ಚು ಒತ್ತನ್ನು ನೀಡಿದರು. ಕಾಯಕವನ್ನು ಮಾಡಲು ತಿಳಿಸಿದರು. ಪ್ರತಿಯೊಬ್ಬನು ತನ್ನ ಅನ್ನವನ್ನು ತಾನು ಗಳಿಸಿಕೊಳ್ಳಬೇಕೇ ಹೊರತು, ಇನ್ನೊಬ್ಬರು ಗಳಿಸಿದ ಅನ್ನವನ್ನು ಉಣಬಾರದು. ಎಲ್ಲರು ಸೇರಿ ಸಾಮೂಹಿಕ ದುಡಿಮೆ ಮಾಡಿಕೊಂಡು ಬದುಕು ಹಸನುಗೊಳಿಸಬೇಕೆಂಬ ಹಂಬಲ. ಜೊತೆಗೆ ಜಿಡ್ಡುಗಟ್ಟಿದ ವ್ಯವಸ್ಥೆಯನ್ನು ಒಡೆದು ಹಾಕಿ ಸರ್ವಸಮಾನತೆಯ ಸುಂದರ ಸುಖೀ ಸಮಾಜ ನಿರ್ಮಿಸಬೇಕೆಂಬ ಉತ್ಕಟ ಬಯಕೆ. ವರ್ಗ, ವರ್ಣ, ಮಡಿ, ಮೈಲಿಗೆ, ಮೇಲು, ಕೀಳುಗಳೆಂಬುದನ್ನು ತಾರತಮ್ಯದಿಂದ ಕೂಡಿದ ಶೋಷಣೆ ರಹಿತ ಸರ್ವಸಮಾನತೆಯ ಸರಳ, ಸುಂದರ, ಸಮಾಜ, ಸಂಸ್ಕೃತಿಯನ್ನು ಆವಿಷ್ಕಾರಗೊಳಿಸಲು ಯತ್ನಿಸಿದರು. ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವ ಘನವಾದ ಉದ್ದೇಶವನ್ನುಟ್ಟುಕೊಂಡು, ಜನಸಾಮಾನ್ಯರ ನಾಡಿಯ ಮಿಡಿತಕ್ಕೆ ಸಹಜವಾಗಿ ಆತ್ಮೀಯವಾಗಿ ಸ್ಪಂದಿಸುತ್ತ, ಸಾರ್ವಕಾಲಿಕ ಜೀವನ ಮೌಲ್ಯಗಳನ್ನು ಅಳವಡಿಸಿಕೊಂಡು ಜನತೆಯನ್ನು ಒಳ್ಳೆಯ ದಾರಿಯಲ್ಲಿ ಕೊಂಡೊಯ್ಯಲು ಮುಂದಾದರು.

**ಅಡಿ ಟಿಪ್ಪಣಿ**

೧. ಪಂಚಗಣಾಧೀಶ್ವರರ: ಸಾಂಸ್ಕೃತಿಕ ಅಧ್ಯಯನ., ಡಾ.ಸತೀಶ ಪಾಟೀಲ, ಪುಟ.೧

೨. ಮಂಟೇಸ್ವಾಮಿ ಕಾವ್ಯ ಸಾಂಸ್ಕೃತಿಕ ಮುಖಾಮುಖಿ, ಡಾ.ವೆಂಕಟೇಶ ಇಂದ್ವಾಡಿ, ಪುಟ.೧೬೪

೩. ಅದೇ ಪುಟ.೧೭೮-೧೭೯

೪. ನಾಥಪಂಥ., ಡಾ.ರಹಮತ್ ತರೀಕೆರೆ, ಪುಟ.೧೭೭-೧೭೮

೫. ಪಂಚಗಣಾಧೀಶ್ವರರ: ಸಾಂಸ್ಕೃತಿಕ ಅಧ್ಯಯನ., ಡಾ.ಸತೀಶ ಪಾಟೀಲ, ಪುಟ.೩೬-೩೭

೬. ಅದೇ ಪುಟ (ಅನುಬಂಧ ೮ ರಲ್ಲಿದೆ)

೭. ತಿಪ್ಪೇಶನ ಚರಿತ್ರೆ ಲಾವಣಿ ಶತಕ., ಅಪರೋಕ್ಷಾನುಭವಿ ಶ್ರೀಸಕ್ರಪ್ಪಸ್ವಾಮಿಗಳವರು, (ಪದ್ಯ ೯೪-೯೫)

೮. ನಾಯಕನಹಟ್ಟಿ ತಿಪ್ಪೇಸ್ವಾಮಿ ಸಂಕಥನ., ರೇಖಾ ಎಸ್.ಟಿ, ಪುಟ.೯೨

೯. ಪಂಚಗಣಾಧೀಶ್ವರರ: ಸಾಂಸ್ಕೃತಿಕ ಅಧ್ಯಯನ., ಡಾ.ಸತೀಶ ಪಾಟೀಲ, (ಅನುಬಂಧ ೮ ರಲ್ಲಿದೆ)

೧೦. ಅದೇ ಪುಟ.೭೯

೧೧. ಬಾಲಬಸವರ ತುಮನೆಪ್ಪ ಹಾಡಿದ ಗೋಣಿಬಸಪ್ಪನ ಕಾವ್ಯ., ಡಾ.ವೆಂಕಟೇಶ ಇಂದ್ವಾಡಿ, ಪುಟ.೯೭-೯೮

೧೨. ಬಾಲಬಸವರು ಸಾಹಿತ್ಯ ಹಾಗೂ ಸಂಸ್ಕೃತಿ ಅಧ್ಯಯನ ಬಿ.ಆರ್.ಮಂಜುನಾಥ (ಎಂ.ಫಿಲ್ ಅಪ್ರಕಟಿತ ಪ್ರಬಂಧ) ಪುಟ.೮೮-೮೯

೧೩. ಪಂಚಗಣಾಧೀಶ್ವರರ: ಸಾಂಸ್ಕೃತಿಕ ಅಧ್ಯಯನ., ಡಾ.ಸತೀಶ ಪಾಟೀಲ, ಪುಟ.೪೦

೧೪. ಅದೇ ಪುಟ.೨೭

೧೫. ಅದೇ ಪುಟ.೩೩

೧೬. ಅದೇ ಪುಟ.೩೩

೧೭. ಅದೇ ಪುಟ.೩೫

೧೮. ಅದೇ ಪುಟ.೧೧

## ಅಧ್ಯಾಯ - ನಾಲ್ಕು

## ಪವಾಡಗಳ ಅರ್ಥ ಸ್ವರೂಪ, ಹುಟ್ಟು ಮತ್ತು ಬೆಳವಣಿಗೆ

---

೪.೧. ಅರ್ಥ-ಸ್ವರೂಪ

೪.೨. ಹುಟ್ಟು -ಬೆಳವಣಿಗೆ

೪.೩. ಪಂಚಗಣಾಧೀಶ್ವರರ ಪವಾಡಗಳು

೪.೪. ಪಂಚಗಣಾಧೀಶ್ವರರ ಪವಾಡಗಳ ವರ್ಗೀಕರಣ

- ೪.೪.೧. ವ್ಯಕ್ತಿ ಸಂಬಂಧಿ ಪವಾಡಗಳು
- ೪.೪.೨. ಪ್ರಾಣಿ ಸಂಬಂಧಿ ಪವಾಡಗಳು
- ೪.೪.೩. ಸ್ಥಳ ಸಂಬಂಧಿ ಪವಾಡಗಳು
- ೪.೪.೪. ಇತರೆ ಪವಾಡಗಳು

೪.೫. ಪಂಚಗಣಾಧೀಶ್ವರರ ಪವಾಡಗಳ ವಿಶ್ಲೇಷಣೆ

- ೪.೫.೧. ವ್ಯಕ್ತಿ ಸಂಬಂಧಿ ಪವಾಡಗಳು
- ೪.೫.೨. ಪ್ರಾಣಿ ಸಂಬಂಧಿ ಪವಾಡಗಳು
- ೪.೫.೩. ಸ್ಥಳ ಸಂಬಂಧಿ ಪವಾಡಗಳು
- ೪.೫.೪. ಇತರೆ ಪವಾಡಗಳು

೪.೬. ಪವಾಡಗಳ ಆಶಯ

೪.೭. ಪವಾಡಗಳು ಮತ್ತು ನಂಬಿಕೆಯ ಜೊತೆಗಿರುವ ಸಂಬಂಧ

# ಅಧ್ಯಾಯ-ನಾಲ್ಕು

# ಪವಾಡಗಳ ಅರ್ಥ, ಸ್ವರೂಪ, ಹುಟ್ಟು ಮತ್ತು ಬೆಳವಣಿಗೆ

## ೪.೧. ಅರ್ಥ-ಸ್ವರೂಪ

ಮಹಾತ್ಮರ ಬದುಕಿನ ಸುತ್ತ ಅನೇಕ ಪವಾಡಗಳು ಹಬ್ಬಿಕೊಂಡಿರುವುದನ್ನು ನಾವು ನೋಡಬಹುದು. ಐತಿಹಾಸಿಕ ಪುರುಷರು, ಆದರ್ಶ ಜೀವಿಗಳೂ ಆದ ಮಹಾತ್ಮರ ಬದುಕು ಮತ, ಧರ್ಮ, ತತ್ತ್ವಗಳನ್ನು ಜನರಿಗೆ ತಿಳಿಸಲು ಪವಾಡ ಕಥೆಗಳು ಹುಟ್ಟಿಕೊಂಡವು. "ಐತಿಹ್ಯಗಳು ಬಾಯಿಂದ ಬಾಯಿಗೆ ಸಾಗಿ ಬರುವಾಗ ರಂಗು ರಂಗಾಗಿಯೋ, ಇಲ್ಲವೇ ಬಣ್ಣಗಟ್ಟಿ ಹರಡುವ ಸಾಧ್ಯತೆಯೂ ಇದೆ. ಕವಿಗಳು ಜನಸಾಮಾನ್ಯರ ಭಕ್ತಿ, ಶ್ರದ್ಧೆಗಳನ್ನು ಆಕರ್ಷಿಸಲು ಪವಾಡಗಳು ಅತ್ಯಂತ ಸಮರ್ಥ ಸಾಧನಗಳೆಂದು ಬಗೆದು ನಾಯಕನ ಮಹಿಮೆಯನ್ನು ಸಾರುವಾಗ ಪವಾಡ ಕಥೆಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಂಡರು.

ಪ್ರವಾದ<ಪವಾಡ ಸಂಸ್ಕೃತದ 'ವಾದ' ಪದಕ್ಕೆ 'ಪ್ರ' ಉಪಸರ್ಗ ಸೇರಿ 'ಪ್ರವಾದ' ಆಗುತ್ತದೆ. 'ವಾದ' ಎಂದರೆ ಚರ್ಚೆ, ತರ್ಕ, ಮಾತು, ಸಂಭಾಷಣೆ ಎಂಬ ಅರ್ಥಗಳಿವೆ. ಒಬ್ಬನ ಮಾತಿಗೆ ವಿಶೇಷ ಶಕ್ತಿ ಬಂದಾಗ ಪ್ರವಾದವಾಗುತ್ತದೆ. 'ಪ್ರವಾದ' ಹೇಳುವವನು 'ಪ್ರವಾದಿ' ಆಗುತ್ತಾನೆ. ಪ್ರವಾದೀ ಎಂದರೆ ತನ್ನದೇ ಸರಿ ಎಂದು ಹೇಳಿ ಹಾಗೆ ಮಾಡಿ ತೋರಿಸುವವ, ಅಂದರೆ ಇಲ್ಲಿ ಹೇಳುವುದು ಮತ್ತು ಹೇಳಿದ್ದನ್ನು ಮಾಡಿ ತೋರಿಸುವುದು ಎರಡೂ ಕೆಲಸಗಳನ್ನು ಪ್ರವಾದಿ ಮಾಡಬೇಕಾಗುತ್ತದೆ. 'ಪವಾಡ' ಎಂಬ ಪದವನ್ನು ಸಾಮರ್ಥ್ಯ, ದೃಷ್ಟಿ, ಮಹಿಮೆ, ಮಹಾತ್ಮ್ಯ ಎಂಬರ್ಥಗಳಲ್ಲೂ ಬಳಸಲಾಗಿದೆ. ಪವಾಡ ಎಂಬ ಪದವನ್ನು ಹಲವಾರು ವಿದ್ವಾಂಸರು ತಮ್ಮದೇ ಆದ ರೀತಿಯಲ್ಲಿ ವ್ಯಕ್ತಪಡಿಸಿದ್ದಾರೆ. ಅದ್ಭುತಕ್ರಿಯೆ, ಅಲೌಕಿಕಶಕ್ತಿ, ನಿಸರ್ಗದ ವಿರುದ್ಧ ನಡೆಯುವ ಪ್ರಕ್ರಿಯೆ ಎಂದು ಹೇಳಿದ್ದಾರೆ. ಪವಾಡಗಳನ್ನು ಕುರಿತು "ಕನ್ನಡ ತೆಲುಗುಗಳಲ್ಲಿ ಪವಾಡವೆಂದು, ತಮಿಳಿನಲ್ಲಿ 'ಪಾವಾಡ' ಎಂದು ಮರಾಠಿಯಲ್ಲಿ 'ಪೊವಾಡ' ಎಂದು ಕರೆಯುತ್ತಾರೆ. ಪವಾಡಕ್ಕೆ ಸಂವಾದಿಯಾದ ಇಂಗ್ಲೀಷ ಶಬ್ದ 'Miracle' ಇದನ್ನು ಇಂಗ್ಲೀಷ್ ಭಾಷಾಕೋಶಗಳಲ್ಲಿ ಹೀಗೆ ಅರ್ಥೈಸಲಾಗಿದೆ. ವಿಚಿತ್ರವಾದ, ಆಶ್ಚರ್ಯಕರವಾದ ಅಸಾಮಾನ್ಯವಾದ ವಸ್ತು ಅಥವಾ ಸಂಗತಿ. ಅಸಾಮಾನ್ಯ ಘಟನೆ ಅಥವಾ ನಿಸರ್ಗದ ಯಾವುದೇ ನಿಯಮ ನಿಬಂಧನೆಗಳಿಂದ ನಿಯಮಗಳಿಗೆ ಮಿಕ್ಕಿದ ಅಲೌಕಿಕ ಶಕ್ತಿಯ ಕಾರ್ಯ, ದೇವರ ಉದ್ದೇಶವನ್ನು ಈಡೇರಿಸಲೋಸುಗ ದೈವೀಶಕ್ತಿಯನ್ನು ಪ್ರಕಟಪಡಿಸಿದಾಗ ಸಂಭವಿಸುವ ಅದ್ಭುತವಾದ ಘಟನೆ.

ಪವಾಡಗಳು ಸಾಮಾನ್ಯ ವ್ಯಕ್ತಿಯಿಂದ ಸಾಧ್ಯವಾಗದೆ ಅಸಾಮಾನ್ಯ ಎನಿಸಿದ ವ್ಯಕ್ತಿಯಿಂದ ಜರುಗುವಂತಹ ಘಟನೆಗಳು ಅದ್ಭುತ ಆಶ್ಚರ್ಯದಿಂದ ಕೂಡಿರುವಂತಹ ಘಟನೆಗಳು. ಪವಾಡವೆಂದರೆ ಅಸಾಮಾನ್ಯವಾದ ಆಶ್ಚರ್ಯವನ್ನು ಉಂಟುಮಾಡುವ ನಿಸರ್ಗನಿಯಮದ ವಿರುದ್ಧಫಲಿಸುವ ಇಂಥ ಘಟನೆ ಅಥವಾ ಸಂಗತಿಯನ್ನು ಮಾನವೀಯ ಶಕ್ತಿಯಿಂದ ಎಸಗುವುದು ಅಸಾಧ್ಯ. ಪವಾಡಗಳು ದೇವರ ಇಲ್ಲವೆ ದೈವೀಶಕ್ತಿಯ ಬಲವಿದ್ದ ಮಾನವೀಯ ಅನುಕಂಪವುಳ್ಳ ಮಹಾಪುರುಷರಿಂದ ದುಃಖಿತರ, ಆರ್ತರ ರಕ್ಷಣೆಗಾಗಿ ಹಾಗೂ ಸಾಮಾನ್ಯ ಜನತೆ ದೈವೀಶಕ್ತಿಯಲ್ಲಿ ಸಂಶಯ ತಾಳಿದಾಗ ಅದರ ಸ್ಥಿರೀಕರಣಕ್ಕಾಗಿ ಯಾವುದೇ ಪೂರ್ವಬಾವಿ ತಯಾರಿಯಿಲ್ಲದೆ ಜರುಗುವ ಘಟನೆಗಳು ಎಂದು ಹೇಳಬಹುದು. ಅತಿಮಾನುಷ ಅಥವಾ ಚಮತ್ಕಾರಿಕ ಸಂಗತಿಗಳಿಂದ ಕೂಡಿದುದೇ ಅದ್ಭುತ ಕಥೆ. ಇಂತಹ ಕಥೆಗಳು ಸಾಮಾನ್ಯ ಜನತೆಯ ದಿನನಿತ್ಯ ಜೀವನದಲ್ಲಿ ಸಂಭವಿಸುವ ಸಂಗತಿಗಳು ಆಗಿವೆ.

ಧಾರ್ಮಿಕ ಮಹಾಪುರುಷರು ಯಾವ ಯೋಗ ಸಾಧನೆ ಇಲ್ಲದೆ ಪವಾಡಗಳನ್ನು ಪ್ರದರ್ಶಿಸಬಲ್ಲರೆಂದು ಸಾಮಾನ್ಯ ಜನ ಬಹು ಹಿಂದಿನಿಂದಲೂ ನಂಬಿಕೊಂಡು ಬಂದಿದ್ದಾರೆ. ಪವಾಡಗಳನ್ನು ಮಾಡದವರು ಧಾರ್ಮಿಕ ಮಹಾಪುರುಷರೇ ಅಲ್ಲವೆಂದೂ ತಿಳಿಯುತ್ತಾರೆ. ಯೇಸುಕ್ರಿಸ್ತ, ಕಬೀರ, ಬುದ್ಧ, ಮಹಾವೀರ, ಮಹಮ್ಮದ್ ಪೈಗಂಬರ, ಶಂಕರಾಚಾರ್ಯ ಮತ್ತು ಬಸವೇಶ್ವರ ಮುಂತಾದ ಧಾರ್ಮಿಕ ಮಹಾಪುರುಷರು ಸಂಕಷ್ಟದಲ್ಲಿ ಮುಳುಗಿದವರನ್ನು ಪಾರು ಮಾಡಲು ಅನೇಕ ಪವಾಡಗಳನ್ನು ಪ್ರದರ್ಶಿಸಿದ್ದಾರೆಂದು ಸಾಮಾನ್ಯ ಜನ ನಂಬಿದ್ದಾರೆ. ಇಂತಹ ಅನೇಕ ಸಂಗತಿಗಳು ಕಾವ್ಯ, ಪುರಾಣ ಮತ್ತು ಧಾರ್ಮಿಕ ಸಾಹಿತ್ಯದಲ್ಲಿ ವರ್ಣಿತವಾಗಿವೆ. ಧಾರ್ಮಿಕ ಮಹಾಪುರುಷರು ಪವಾಡಗಳನ್ನು ಮಾಡಿದ್ದೇವೆ ಎಂದು ಎಲ್ಲೂ ಹೇಳಿಕೊಂಡಿಲ್ಲ.

ಶಿವಶರಣರು ಅದ್ಭುತ ಶಕ್ತಿಶಾಲಿಗಳು, ಅಘಟಿತ ಘಟನಾ ಸಮರ್ಥರು, ಮಹಿಮಾಶಾಲಿಗಳು ಎಂದು ಅವರ ವ್ಯಕ್ತಿತ್ವ ಮಹಿಮೆಯನ್ನು ಇನ್ನಿತರ ಧಾರ್ಮಿಕ ಮಹಾಪುರುಷರಿಗಿಂತ ಇವರೇನು ಕಡಿಮೆಯಲ್ಲ. ಇವರು ಶ್ರೇಷ್ಠರಾದವರು ಎಂಬುದನ್ನು ಶ್ರೀಸಾಮಾನ್ಯರಿಗೆ ಬಿಂಬಿಸಲೋಸುಗ ಪವಾಡಗಳನ್ನು ಬಣ್ಣಿಸಿದರು. ಕವಿಯ ಕಾವ್ಯವಾಣಿಯಲ್ಲಿ ಕಸವೂ ಕೂಡ ರಸವಾಗಬಹುದು. ಅಸತ್ಯವಾದ, ಅಸಾಧ್ಯವಾದ ಸಂಗತಿಗಳೂ ಕೂಡ ಸತ್ಯವಾಗಿ ಸಾಧಿತವಾಗಬಹುದು. ನಿಜ ಜೀವನದಲ್ಲಿ ಬಸವಣ್ಣನವರು ಹೋದ ಜೀವವನ್ನು ಮತ್ತೇ ಮರಳಿ ಪಡೆದ ಸಂಗತಿ ಸತ್ಯವಲ್ಲ. ಆದರೆ ಸಾಹಿತ್ಯಿಕ ದೃಷ್ಟಿಯಲ್ಲಿ ಅದು ಸತ್ಯವಾದುದೇ. 'ರವಿ ಕಾಣದ್ದನ್ನು ಕವಿ ಕಂಡ' ಎನ್ನುವಂತೆ ಕವಿವಾಣಿಯು ಸಾಹಿತ್ಯದ ಸವಿನುಡಿಯಾಗಿ ಪರಿಣಮಿಸುವುದು. ಹೀಗಾಗಿಯೇ ಪುರಾಣಕಾರರು ತಮ್ಮ ಕೃತಿಗಳು ಮಹಾಭಾರತಕ್ಕಿಂತಲೂ ಯಾವ ದೃಷ್ಟಿಯಿಂದಲೂ ಕಡಿಮೆಯಲ್ಲ ಎಂದು ಹೇಳಿಕೊಂಡದ್ದುಂಟು.

ವೈಯಕ್ತಿಕ ಜೀವನದಲ್ಲಿ ಸಂಭವಿಸಿರಬಹುದಾದ ಹಲವಾರು ನೈಜ ಘಟನೆಗಳ ಸುತ್ತ ಪುರಾಣಕಾರರು ಅನೇಕ ಕಾಲ್ಪನಿಕ ಕಥೆಗಳನ್ನು, ಪವಾಡಗಳನ್ನು ಹೆಣೆದು ಅವುಗಳನ್ನು ಅದ್ಭುತವಾಗಿಸಿದ್ದಾರೆ. ಅವರನ್ನು ಅತಿಮಾನುಷ ವ್ಯಕ್ತಿಗಳನ್ನಾಗಿ, ಅವತಾರ ಪುರುಷರನ್ನಾಗಿ ಮಾಡಿವೆ. ಶ್ರೀಸಾಮಾನ್ಯ ದೃಷ್ಟಿಯಲ್ಲಿ ಅವರು ದೇವರ ಸಮಾನರಾಗಿದ್ದಾರೆ.

## ೪.೨. ಹುಟ್ಟು-ಬೆಳವಣಿಗೆ

ಒಂದು ಕಾಲಕ್ಕೆ ಸಮಾಜದ ಸಮಸ್ತ ಜನಸಮೂಹವನ್ನು ಒಳಗುಮಾಡಿಕೊಂಡು ಧಾರ್ಮಿಕ ಪುರುಷರ ಕಥೆಗಳನ್ನು ಮೌಖಿಕ (ಕಂಠಸ್ಥ)ವಾಗಿ ಪ್ರಚುರಪಡಿಸುವ ಹೊಣೆಗಾರಿಕೆಯನ್ನು ಅಕ್ಷರಸ್ಥ ಕೆಲ ಜನರು ಹೊತ್ತಿದ್ದರು. ಹೀಗಾಗಿ ಪುರಾಣ, ಕಾವ್ಯಗಳ, ಪ್ರವಚನ-ಕೀರ್ತನೆಗಳು, ಮಠ-ಮಾನ್ಯಗಳಂಥ ಧಾರ್ಮಿಕ ಪರಿಸರದಲ್ಲಿ ನಡೆಯುತ್ತಿದ್ದವು. ಪುರಾಣದಲ್ಲಿ ಅತಿಮಾನುಷ ಸಂಗತಿಗಳನ್ನು ವರ್ಣಿಸುವ ಮತ್ತು ಜನಸಮೂಹಕ್ಕೆ ಅದರ ಮಹತ್ವವನ್ನು ತಲುಪಿಸುವ ಹಿನ್ನೆಲೆಯಲ್ಲಿ ಚಾರಿತ್ರಿಕತೆಗೆ ಪವಾಡಗಳನ್ನು ಸೇರಿಸಿ ಪ್ರವಚನ ಮಾಡುವ ಪರಂಪರೆ ಬೆಳೆದು ಬಂದಿತು.

ಜನಪದ ಕಥೆಗಳಲ್ಲಿ ಕಂಡುಬರುವ ಮಾಂತ್ರಿಕ ವಸ್ತುಗಳು, ಮಂತ್ರದಂಡ, ಉಂಗುರ, ಕಪ್ಪು ಭೂತಕನ್ನಡಿ, ಮಾಯದ ಟೋಪಿ, ಮಂತ್ರದ ಚಾಪೆ ಮುಂತಾದವುಗಳಲ್ಲೆಲ್ಲ ಮಂತ್ರವಾದಿಯ ಕೈವಾಡ ಇದ್ದೇ ಇರುತ್ತದೆ. ಕಥೆಯ ಉದ್ದಕ್ಕೂ ಅದ್ಭುತ ಹಾಗೂ ಅಲೌಕಿಕತೆಯ ವಾತಾವರಣವನ್ನು ತುಂಬಿಕೊಳ್ಳುತ್ತವೆ. ಅತಿಮಾನುಷ ಕಥೆಗಳು ಹೆಸರೇ ಸೂಚಿಸುವಂತೆ ಅತಿಮಾನುಷ ಅಂಶಗಳಿಂದ ವಿಶೇಷವಾಗಿರುವ ಕಥನರೂಪವಾಗಿರುತ್ತದೆ. ಅತಿಮಾನುಷ ಕಥೆಗಳಲ್ಲಿ ನಾಯಕ, ನಾಯಕಿಯರು ವಿರೋಧಿ ಶಕ್ತಿಗಳ ಜೊತೆಯಲ್ಲಿ ಹೋರಾಡುತ್ತಾರೆ. ಅತಿಮಾನುಷ ಸಹಾಯಕರ ನೆರವಿನಿಂದ ಆ ಶಕ್ತಿಗಳನ್ನು ಗೆಲ್ಲುತ್ತಾರೆ. ಜನಪದ ಕಥೆಗಳಿಂದಲೂ ಅದ್ಭುತವಾದ, ಅಲೌಕಿಕವಾದ ಕಾರ್ಯವನ್ನು ಜನಪದ ಕಥೆಗಳು ಕಟ್ಟಿಕೊಡುತ್ತವೆ.

ಪವಾಡಗಳು ಯುಗ ಯುಗಾಂತರಗಳಿಂದಲೂ ಪ್ರಚಲಿತದಲ್ಲಿವೆ. ಭಾರತದಲ್ಲಿ ಬಾಳಿ ಬೆಳಗಿದ ಮಹಾತ್ಮರು, ಆಧ್ಯಾತ್ಮಿಗಳು, ಸಾಧು ಸಂತರು, ಶರಣರು, ಪ್ರವಾದಿಗಳು ಗಣನೆಗೂ ಎಟುಕದಷ್ಟು ಪವಾಡಗಳನ್ನು ಎಸಗಿದರೆಂದು ವರ್ಣಿಸಿರುವುದನ್ನು ನಾವು ಪುರಾಣಗಳಿಂದ ತಿಳಿಯುವೆವು. ಆದರೆ ವಿಸ್ಮಯಕಾರಿ ಸಂಗತಿಗಳು ನಮ್ಮ ವಿಚಾರದ ಹಿಡಿತಕ್ಕೆ ಸಿಗುವುದಿಲ್ಲವಾಗಿವೆ. ಬುದ್ಧಿಗೂ, ತರ್ಕಕ್ಕೂ ಹೊಳೆಯದ ಇವನ್ನು ನಂಬುವುದು ಕಷ್ಟವಾಗಿದೆ. ಒಂದು ದೃಷ್ಟಿಯಿಂದ ಇದು ನಿಜವಾದರೂ ಇನ್ನೊಂದು ದೃಷ್ಟಿಯಿಂದ ನಿಜವಲ್ಲ. ಪವಾಡ ಸುಳ್ಳು, ಸತ್ಯ ಎಂದು ಹುಡುಕುವುದಕ್ಕಿಂತ ಸಂದರ್ಭ ಮುಖ್ಯವಾಗಿರುತ್ತದೆ. ಪುರಾಣಕಾರರು ಪವಾಡ ಕಥೆಗಳಲ್ಲಾದರೂ "ಶರಣರ, ಸಂತರ, ಚರಿತ್ರೆಯನ್ನು ಉಳಿಸಿಕೊಂಡು ಬಂದಿರುವಲ್ಲ ಎಂದು ಸಮಾಧಾನ ಪಡಬೇಕು. ಪುರಾಣಗಳಲ್ಲೂ ಅವರ ಚರಿತ್ರೆ ಬರದಿದ್ದರೆ ನಮಗಿಂದು ಅವರ ಚರಿತ್ರೆಯನ್ನು ತಿಳಿದುಕೊಳ್ಳುವುದು ಕಷ್ಟವಾಗುತ್ತಿತ್ತು. ಪುರಾಣಗಳ ಉದ್ದೇಶ ಧರ್ಮಪ್ರಸಾರ ಮತ್ತು ಮಹಾಪುರುಷರ ಚರಿತ್ರೆಯನ್ನು ಮಹಿಮಾಪೂರ್ಣವಾಗಿ ಬಣ್ಣಿಸುವುದು. ಪುರಾಣಗಳು ಸಾಮಾನ್ಯಜನ ಸಮ್ಮುಖವಾಗಿರುವುದರಿಂದ ಪವಾಡಗಳನ್ನು ವರ್ಣಿಸಿದ್ದಾರೆ."[೧]

ಸಿಸಿರೋ ಎಂಬ ತತ್ವಜ್ಞಾನಿ "ಸಾಮಾನ್ಯ ಜನತೆಗಂತೂ ಪವಾಡಗಳು ಬೇಕೆಬೇಕು ಎನ್ನುವನು. Miracles are necessary for the poiety of ignorant folk".[೨] ಪವಾಡಗಳು ಪೂರ್ವಕಲ್ಪಿತ ದಂತಕತೆಯಲ್ಲ. ಎಲ್ಲೋ ಯಾವಾಗಲೋ ಘಟಿಸಿದ ಒಂದು ಘಟನೆ ವ್ಯಕ್ತಿ ಸಾಧನೆಯನ್ನು ಕುರಿತು ಹೇಳುವಂತಹದ್ದು.

ಪವಾಡಗಳೆಲ್ಲ ಸತ್ಯದ ಮುಖಕ್ಕೆ ಮುಚ್ಚಿದ ಸುವರ್ಣದ ಮುಚ್ಚಳಗಳಂತಿವೆ. ಆ ಮುಚ್ಚಳ ಓರೆ ಮಾಡಿದಾಗ ಸತ್ಯ ಸಾಕ್ಷಾತ್ಕಾರವಾಗುವುದು. ಪವಾಡಗಳಲ್ಲಿನ ಅದ್ಭುತ ಅಂಶಗಳನ್ನು ಆಚೆ ಸರಿಸಿದಾಗ ಸತ್ಯದೃಗ್ಗೋಚರವಾಗುವುದು. ಪವಾಡಗಳು ಸಾಂಕೇತಿಕವಾದ ಅರ್ಥವನ್ನು ಒಳಗೊಂಡಿವೆ. ಪವಾಡವು ಸಾಮಾನ್ಯ ಜೀವನದ ಶಿಷ್ಟಕ್ಕಿಂತ ಭಿನ್ನವಾಗಿದ್ದು, ವಿಶಿಷ್ಟವಾಗಿರಬೇಕು ಅಥವಾ ಅಸಾಮಾನ್ಯವಾಗಿರಬೇಕು. ಅಸಾಮಾನ್ಯತ್ವವನ್ನು ವರ್ತಮಾನಕ್ಕೆ ಒಗ್ಗಿಸಿಕೊಳ್ಳುವ ಅವಸರದಲ್ಲಿ ವರ್ತಮಾನಕ್ಕೂ ಇತಿಹಾಸಕ್ಕೂ ಇರುವ ಅಂತರ ಕುಗ್ಗಿ ಹೋಗುತ್ತದೆ. ವ್ಯಕ್ತಿಯೊಬ್ಬನು ತನ್ನನ್ನು ಪರಂಪರೆಯೊಂದಿಗೆ ಗುರುತಿಸಿಕೊಳ್ಳಲು ಮಾಡಿದ ಪ್ರಯತ್ನವೆನ್ನಬಹುದು. ಪವಾಡಗಳು ಬದುಕನ್ನು ಸುಲಲಿತವಾಗಿ ಮುಂದುವರಿಸಿಕೊಂಡು ಹೋಗಲು ಲೌಕಿಕ ಜೀವನದ ಒಳಿತಿಗಾಗಿ ಮನುಷ್ಯನ ಬದುಕು ಸುಗಮವಾಗಿ ನಡೆಸಿಕೊಂಡು ಹೋಗಲು ಇಂತಹ ಅದ್ಭುತವಾದ, ಅಸಾಮಾನ್ಯವಾದ ಪವಾಡಗಳು ಧ್ವನಿಪೂರ್ಣವಾಗುತ್ತವೆ.

ಮಹಿಮಾಶಾಲಿಗಳು ಭಕ್ತರಿಗೆ ಅಸಮಾಧಾನವಾದಾಗ ಎಂಥ ಅಸಾಧ್ಯ ಅಸಹಜ ಕೆಲಸಗಳನ್ನು ಸಹಜವಾಗಿ ನೆರವೇರಿಸಬಲ್ಲರು. ಆದರ್ಶಮಯ ಜೀವನ, ಎತ್ತಿಹಿಡಿದ ಮೌಲ್ಯಗಳು, ಧ್ಯೇಯ, ಧೋರಣೆಗಳು ಜನತೆಯ ಮನದಲ್ಲಿ ದೈವತ್ವದ ಭಾವವನ್ನು ಮೂಡಿಸುವವು. ಧಾರ್ಮಿಕ ಮಹಾಪುರುಷರು ದುಃಖಿತರನ್ನು ಆರ್ತರನ್ನು ರಕ್ಷಿಸಿ ಉದ್ಧರಿಸಿದ್ದನ್ನು ಕಾಣಬಹುದು. ಬದುಕಿನಲ್ಲಿ "ಚೈತನ್ಯದ ತಂಗಾಳಿ ಬೀಸಿ, ಧರ್ಮಗ್ಲಾನಿಯಾದಾಗ ಅದನ್ನು ರಕ್ಷಿಸಿ, ಜನರು ಧರ್ಮ ಭ್ರಷ್ಟರಾದಾಗ ಅವರನ್ನು ಸನ್ಮಾರ್ಗದಲ್ಲಿ ನಡೆಸಿ ತಮ್ಮ ದೇಹವನ್ನು ಗಂಧದ ಕೊರಡಿನಂತೆ ಸವೆಸಿದ ಬದುಕಿನ ಮುಖ್ಯ ಘಟನೆಗಳಿಗೆ ಸಂಬಂಧಿಸಿದಂತೆ ಪವಾಡಗಳು ಜನತೆಯ ಜೀವನಾಡಿಯಲ್ಲಿ ಹರಡಿಕೊಂಡಿದ್ದರೆ ಆಶ್ಚರ್ಯವೇನಿಲ್ಲ."[3] ಜನರ ಬದುಕಿನಲ್ಲಿ ಪವಾಡಗಳು ಬೆರೆತು ಹೋಗಿವೆ. ಪವಾಡಗಳನ್ನು ದೈವೀಪುರುಷರಿಂದ ಮಾಡಲು ಸಾಧ್ಯವಾಗುತ್ತದೆ ಎಂದು ಭಕ್ತ ಜನರು ನಂಬುತ್ತಾರೆ. ಅದೊಂದು ಅದ್ಭುತವಾದ, ಚಮತ್ಕಾರಿ ಕೆಲಸ. ಹಠಯೋಗಿ ಸಾಧನೆಯಿಂದ ಕುಂಡಲಿನಿ ಶಕ್ತಿಯನ್ನು ವಶಪಡಿಸಿಕೊಂಡು ಯೋಗಶಾಸ್ತ್ರದ ಮೂಲಕ ಇವುಗಳನ್ನು ಮಾಡುವುದು ಎಂದು ಪ್ರತಿಪಾದಿಸುವವರು ಇದ್ದಾರೆ.

ಪಂಚಗಣಾಧೀಶ್ವರರು ನಿಸ್ವಾರ್ಥವಾದ, ಮಾನವೀಯ ಅನುಕಂಪದಿಂದ, ನೊಂದ ಜನರಿಗೆ ಆಶಾದೀಪವಾಗಿ ಬೆಳದವರು. ಅವರ ಬದುಕು ಅಲೌಕಿಕವಾಗಿರುವುದರಿಂದ, ಅಸಾಮಾನ್ಯವಾಗಿರುವುದರಿಂದ ಪವಾಡ ಸದೃಶ್ಯವಾಗಿ ಕಂಡುಬರುತ್ತವೆ. ಪಂಚಗಣಾಧೀಶ್ವರರ ಪವಾಡಗಳು ಕಲ್ಪಿತವೆಂದು, ಸುಳ್ಳಿನ ಕಂತೆಯೆಂದು ವಾದಿಸಿದರೆ ತಪ್ಪಾದೀತು. ಹಾಗೆಂದು ಇವರು ಮಾಡಿದ ಎಲ್ಲ ಪವಾಡಗಳು ಅಕ್ಷರಶಃ ನಿಜವೆಂದು ಭಾವಿಸಬೇಕಾಗಿಯೂ ಇಲ್ಲ. ತಾರ್ಕಿಕವಾಗಿ ಪವಾಡ ಇವು ನಿಜ ಘಟನೆ ಎಂದು ಇವುಗಳಲ್ಲಿ ಭೇದವೆಣಿಸುವುದು ಕಷ್ಟಕರವಾದ ಕೆಲಸ. ಇವರ ನಡೆ-ನುಡಿಗಳು ಲೋಕದ ಕಣ್ಣಿಗೆ ಅತಿವಿಚಿತ್ರ, ಅತಿವಿಲಕ್ಷಣವಾಗಿ ಕಂಡುಬರುತ್ತವೆ. ಪವಾಡಗಳ ಸತ್ಯಾಸತ್ಯತೆಯ ನಿಲುಗಡೆ ಅವರವರ ಅನುಭವ ಹಾಗೂ ತಿಳುವಳಿಕೆಯ ಮಟ್ಟಕ್ಕೆ ಅನುಗುಣವಾಗಿರುತ್ತದೆ.

ಪವಾಡಗಳಿಂದ ಜನರನ್ನು ತಮ್ಮ ಕಡೆ ಒಲೈಸಿಕೊಳ್ಳುವುದು, ಜನರನ್ನು ರೋಗರುಜಿನಗಳಿಂದ, ಶತ್ರುಗಳಿಂದ, ಪ್ರಬಲವರ್ಗದವರಿಂದ ರಕ್ಷಿಸುವುದು ಬದುಕು ಸುಗಮಗೊಳಿಸಲು ಅನ್ಯಾಯ, ಅಸತ್ಯ, ಮೂಢನಂಬಿಕೆ, ಮೋಸ, ವಂಚನೆಗಳಿಂದ ರಕ್ಷಿಸಿ ಒಳ್ಳೆಯ ಮಾರ್ಗದಲ್ಲಿ ಜನರನ್ನು ರೂಪಿಸಲು ಪವಾಡಗಳನ್ನು ಅವರು ಮಾಡಿದರು ಎಂದು ಜನ ಭಾವಿಸಿದರು. ಪವಾಡಗಳು ಸಾಹಿತ್ಯಿಕ ನೆಲೆಯಲ್ಲಿ ಗುರುತಿಸಿಕೊಂಡವುಗಳಲ್ಲ, ಚಾರಿತ್ರಿಕವಾಗಿ ದಾಖಲೆಗೊಂಡವುಗಳಾಗಿಲ್ಲ. ಇವು ದಂತಕತೆಗಳ ರೂಪದಲ್ಲಿ ಮೌಖಿಕ ಸಾಹಿತ್ಯದಲ್ಲಿ ಬಳಕೆಯಲ್ಲಿವೆ. ಮೌಖಿಕ ಕಥನಗಳನ್ನೆ ಆಧರಿಸಿ ರೂಪುಗೊಂಡ ಕೆಲವು ಲಿಖಿತ ಕೃತಿಗಳಲ್ಲಿ ಕೂಡ ಇವು ಕಂಡುಬರುತ್ತವೆ.

ಜನಸಮುದಾಯದ ಮನೋಧರ್ಮದ ಮುದ್ರೆಯನ್ನೊತ್ತಿಕೊಂಡು ಹುಟ್ಟಿರುವ ಪವಾಡಗಳು ಜನ ಸಾಂಸ್ಕೃತಿಕ ಬದುಕಿನ ಮೇಲೆ ಮಹತ್ತರವಾದ ಪರಿಣಾಮಗಳನ್ನು ಬೀರುತ್ತವೆ. ಒಂದು ಪ್ರದೇಶದ ಜನರು ಅಲ್ಲಿಯ ಯಾವುದೇ ವಸ್ತು ಪಳೆಯುಳಿಕೆ ಇಲ್ಲವೆ ಸ್ಮಾರಕಗಳ ಬಗೆಗೆ ಭಾವನಾತ್ಮಕ ಸಂಬಂಧವನ್ನು ಹೊಂದಿರುತ್ತಾರೆ. ಈ ಸಂಬಂಧ ಅವರ ಭಕ್ತಿ, ಆಚರಣೆ, ನಂಬಿಕೆ, ಆರಾಧನೆಯ ರೂಪದಲ್ಲಿ ಪ್ರಕಟ ವಾಗಿರುತ್ತದೆ. ಇದು ಕಥೆಯ ರೂಪದಲ್ಲೋ, ವಂದತಿಯ ರೂಪದಲ್ಲೋ ಒಬ್ಬರಿಂದೊಬ್ಬರಿಗೆ ಮುಟ್ಟುತ್ತಾ ಬಂದು ಅಳಿಸಿ ಹೋಗಲಾರದಂತಹ ಸಂಗತಿಯಾಗಿ, ಘಟನೆಯಾಗಿ ಅಷ್ಟೆ ಏಕೆ ಇತಿಹಾಸವೆಂಬಂತೆ ಉಳಿದುಕೊಳ್ಳುತ್ತದೆ.

## ೪.೩. ಪಂಚಗಣಾಧೀಶ್ವರರ ಪವಾಡಗಳು

ಭಾರತದ ಇತಿಹಾಸದಲ್ಲಿ ಪವಾಡ ಕಥೆಗಳು ಮತ್ತೆ ಮತ್ತೆ ಹುಟ್ಟಿ ಬೆಳೆದು ಬಂದಿವೆ. ಮಹಾತ್ಮರನ್ನು ಕುರಿತ ಪವಾಡಗಳ ಆರೋಪಣೆ ಎಲ್ಲ ಕಾಲಕ್ಕೂ ಕಂಡುಬರುತ್ತವೆ. ಪವಾಡಗಳಿಂದ ಮಹಾಮಹಿಮರ ಜೀವನ ಮತ್ತಷ್ಟು ಶ್ರೇಷ್ಠಸ್ಥಾನವನ್ನು ಪಡೆಯುತ್ತದೆ. ಜನಸಾಮಾನ್ಯರಿಗಿಂತಲೂ ಉನ್ನತ ಸ್ಥಾನವನ್ನು ಅಲಂಕರಿಸುತ್ತದೆ. ಇಂತಹ ಅದ್ಭುತ ಅತಿಮಾನುಷ ಘಟನೆಗಳು ನಮ್ಮ ಜನಪದರಲ್ಲಿ, ಪುರಾಣ ಕತೆಗಳಲ್ಲಿ ಬೆಳೆದುಕೊಂಡು ಬಂದಿವೆ. "ಪುರಾಣಗಳು ಆಗಿಹೋದ ಘಟನೆಗಳನ್ನೊಳಗೊಂಡಿರುತ್ತದೆಂದು ಮತ್ಸ್ಯಪುರಾಣವು ಹೇಳುತ್ತದೆ."[೪] ಪುರಾಣಗಳು ಹಿಂದೆ ನಡೆದ ವಾಸ್ತವ ಘಟನೆಗಳನ್ನು ಹೇಳುತ್ತಿರುವುದಾಗಿ ವರ್ಣಿಸಿದರೂ ಅವು ಜನಾಂಗಗಳ ಧಾರ್ಮಿಕ, ನಂಬುಗೆ, ಆಚರಣೆ, ಪದ್ಧತಿಗಳನ್ನು ದಾಖಲಿಸುತ್ತವೆ. ಐತಿಹಾಸಿಕ ಪುರುಷರೂ ಆದರ್ಶ ಜೀವಿಗಳು ಆದ ಮಹಾತ್ಮರ ಬದುಕನ್ನು ಜನರಿಗೆ ತಿಳಿಯುವಂತೆ ಪುರಾಣಗಳ ರಚನೆಗೆ ಒಂದು ವಿಶಿಷ್ಟ ಉದ್ದೇಶವುಂಟು. ಮತ, ಧರ್ಮ, ತತ್ತ್ವಗಳನ್ನು ಅವುಗಳ ನೀತಿ-ನೆಲೆಗಟ್ಟನ್ನು, ಸಂದೇಶವನ್ನು ಜನಸಾಮಾನ್ಯರಿಗೆ ತಿಳಿಸುವುದಕ್ಕಾಗಿ ಪುರಾಣಗಳು ಹುಟ್ಟುಕೊಂಡಿವೆ. ಅವು ಸರಳವಾದ ರೀತಿಯಲ್ಲಿ ಜನಸಾಮಾನ್ಯರಿಗೆ ಸುಲಭವಾಗಿ ಅರ್ಥವಾಗಲು ಹುಟ್ಟಿಕೊಂಡಂತಹವು.

"ಕನ್ನಡದಲ್ಲಿ ಪುರಾಣ ಪರಂಪರೆಯನ್ನು ಆರಂಭಿಸಿದ ಕೀರ್ತಿ ಜೈನ ಕವಿಗಳಿಗೆ ಸಲ್ಲುತ್ತದೆ. ಜೈನ ಕವಿಗಳಿಗೆ ಮೇಲ್ಪಂಕ್ತಿಯಾಗಿ ನಿಂತ ಕವಿ ಪಂಪನು. ಈತನು ಲೌಕಿಕ ಮತ್ತು ಆಗಮಿಕ ಕಾವ್ಯಮಾರ್ಗವನ್ನು

ರೂಪಿಸಿದ್ದರಲ್ಲಿ ಬಹುತೇಕವಾಗಿ ಆಗಮಿಕ ಕಾವ್ಯ ಪರಂಪರೆ ಪುರಾಣ ಪರಂಪರೆಯೇ ಆಗಿದೆ. ಮುಂದೆ ಈ ಪುರಾಣ ಪರಂಪರೆಯು ಕರ್ನಾಟಕದ ಎಲ್ಲ ಪ್ರಮುಖ ಧರ್ಮಗಳ ಸಾಹಿತ್ಯಗಳಲ್ಲಿಯೂ ವಿಪುಲವಾಗಿ ಬೆಳೆದು ಬಂದಿದೆ.”[೫] ಕವಿಗಳು ಪುರಾಣಗಳ ಮೂಲಕ ಧರ್ಮದ ತಿರುಳನ್ನು ಅಥವಾ ವ್ಯಕ್ತಿಯನ್ನು ವೈಭವೀಕರಿಸಿ ಹೇಳುವಾಗ ಪುರಾಣಗಳು ಮಹತ್ವವಾಗಿವೆ.

ಪುರಾಣಗಳು ಅದ್ಭುತ ಶಕ್ತಿಯನ್ನು ಹೊಂದಿರುತ್ತವೆ. ಅವು ಅಲೌಕಿಕ ಶಕ್ತಿಯ ನೆಲೆಗಟ್ಟಿನಲ್ಲಿ ನಡೆಯುವಂತಹ ಘಟನೆಗಳಾಗಿವೆ. “ಪರಮೇಶ್ವರನ ತ್ರಿಪುರದಹನ ಲೀಲೆ, ಜಲಂಧರ ಲೀಲೆಗಳು, ಅಸುರ ಶಕ್ತಿಗಳ ವಿರುದ್ಧ ಹೋರಾಡಿದ ಲೀಲೆಗಳು, ಲೋಕಕಂಟಕರಾಗಿ, ಉನ್ಮತ್ತರಾಗಿ, ಅಸತ್ಯ, ಅನ್ಯಾಯ, ಅತ್ಯಾಚಾರಕ್ಕಿಳಿದಿದ್ದ ರಾಕ್ಷಸಿ ಪ್ರವೃತ್ತಿಗಳನ್ನು ನಾಶಗೊಳಿಸಿ, ಶಿವನು ಧಾರ್ಮಿಕ ಮೌಲ್ಯವನ್ನು ಎತ್ತಿಹಿಡಿದಿದ್ದನ್ನು ಕಾಣಬಹುದು.”[೬] ಮಹಿಮಪುರುಷರ ವ್ಯಕ್ತಿತ್ವವನ್ನು ಕಟ್ಟಿಕೊಡಲು ಮತ್ತು ಮಹಿಮೆಯನ್ನು ಸಾರಲು ಪುರಾಣಗಳು ರೂಪಿತವಾಗಿವೆ.

ಪವಾಡಗಳು ಜನಪದರಲ್ಲಿ ಮೌಖಿಕ ಸಾಹಿತ್ಯದ ಮೂಖೇನ ಸಾಗಿ ಬರುವಾಗ ಅನೇಕ ಬದಲಾವಣೆಗೆ ಮಾರ್ಪಟ್ಟಿರುವುದನ್ನು ನೋಡುತ್ತೇವೆ. ಹೀಗೆ ಬಾಯಿಂದ ಬಾಯಿಗೆ ಹರಿದು ಬರುವಾಗ ಜನರು ಅವರನ್ನು ಅದ್ಭುತ ವ್ಯಕ್ತಿಯಾಗಿ ಇಲ್ಲವೆ ದೈವತ್ವದ ಸ್ವರೂಪ ಕಲ್ಪಿಸಿದ್ದಾರೆ. ಮಹಾತ್ಮರ ಬದುಕಿನ ಸುತ್ತ ಪವಾಡಗಳು ಹರಡಿಕೊಂಡಿರುವುದನ್ನು ನಾವು ನೋಡುತ್ತೇವೆ. ಮಹಾನುಭಾವರ ಬದುಕು ಜನಮನವನ್ನು ತಿದ್ದಲು, ನೇರ್ಪಡಿಸಲು ಸದ್ಧರ್ಮದತ್ತ ನಡೆಸಲು ಮೀಸಲಾಗಿದ್ದಲ್ಲಿ ಅವರು ಲೋಕ ಕಲ್ಯಾಣವಾಗಲು ದುಡಿದವರು. ನಡೆಯೊಂದು ಪರಿ ನುಡಿಯೊಂದು ಪರಿ ಇರದೆ ಅವೆರಡರ ಅಪೂರ್ವ ಸಂಗಮ ಅವರಾಗಿದ್ದಲ್ಲಿ, ಜನತೆಯ ಉಸಿರಿನೊಂದಿಗೆ ಅವರ ಉಸಿರು ಬೆರೆತಿದ್ದಲ್ಲಿ ಜನತೆ ತಮ್ಮ ನಂಬುಗೆಯ ಪ್ರತೀಕವಾಗಿಯೋ ಇಲ್ಲವೇ ತಾವು ಕಂಡು ಕೇಳಿದ ಅದ್ಭುತ ಸಂಗತಿಗಳನ್ನು ಪವಾಡ ಕಥೆಗಳ ರೂಪದಲ್ಲಿ ಉತ್ಪ್ರೇಕ್ಷಿಸಿ ಹೇಳುವುದುಂಟು. ಕವಿಗಳು ಜನಸಾಮಾನ್ಯರ ಭಕ್ತಿ, ಶ್ರದ್ಧೆಗಳನ್ನು ಆಕರ್ಷಿಸಲು ಪವಾಡಗಳು ಅತ್ಯಂತ ಸಮರ್ಥ ಸಾಧನಗಳೆಂದು ಬಗೆದು ನಾಯಕನ ಮಹಿಮೋನ್ನತಿಯನ್ನು ಸಾರುವಾಗ, ಅಘಟಿತ ಘಟನಾ ಸಾಮರ್ಥ್ಯವನ್ನು ತಿಳಿಸುವಾಗ ಪವಾಡ ಕಥೆಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಂಡರು.

ಪವಾಡ ಕಥೆಗಳ ರೂಪದಲ್ಲಿ ಕಥೆಗಳು ರೂಪಿತವಾಗಿರುವುದನ್ನು ಸಾಹಿತ್ಯದಲ್ಲಿ ನೋಡುತ್ತೇವೆ. ಹರಿಹರ ರಾಘವಾಂಕರನ್ನು ಕುರಿತಂತೆ ಅನೇಕ ಪವಾಡ ಕತೆಗಳಿವೆ. “ಹಂಪೆಯ ವಿರೂಪಾಕ್ಷನ ಭಕ್ತನಾದ ಹರಿಹರನು ಒಮ್ಮೆ ಗರ್ಭಗುಡಿಯಲ್ಲಿ ಬೆಂಕಿಹತ್ತಿದ್ದನ್ನು ಕುಂತ ಜಾಗದಿಂದಲೇ ನೋಡಿ ಆರಿಸಿದನೆಂದು ಪವಾಡ ಕಥೆಯಿದೆ. ರಾಘವಾಂಕನು ಹರಿಶ್ಚಂದ್ರಕಾವ್ಯ ಬರೆದಾಗ ಹರಿಹರನು ಅವನ ಐದು ಹಲ್ಲುಗಳನ್ನು ಉದುರಿಸಿದನಂತೆ ನಂತರ ರಾಘವಾಂಕ ಐದು ಜನ ಶಿವ ಶರಣರ ಕಥೆ ಬರೆದಾಗ ಒಂದೊಂದಾಗಿ ಹಲ್ಲುಗಳು ಮರಳಿ ಹುಟ್ಟಿ ಬಂದ ಕಥೆ ತಿಳಿದು ಬರುತ್ತದೆ. ೧೨ನೇ ಶತಮಾನದ ಸಿದ್ಧರಾಮ ಚರಿತ್ರೆಯಲ್ಲಿ ಸಿದ್ಧರಾಮನ ಅನೇಕ ಪವಾಡ ಕತೆಗಳಿವೆ.”[೭] ಹೀಗೆ ಕಲ್ಪಿತ ಕಥೆಗಳಂತೆ ೧೨ನೇ ಶತಮಾನದ ಬಸವಣ್ಣನ ಕಾಲದಲ್ಲಿಯೂ

ನಿರೂಪಿತವಾಗಿವೆ. ಬಸವಣ್ಣ ಬಿಜ್ಜಳನ ಆಸ್ಥಾನದಲ್ಲಿ ಭಂಡಾರಿ ಆಗಿದ್ದ ಸಮಯದಲ್ಲಿ ಬಸವಣ್ಣ ಹಣವನ್ನು ದ್ವಿಗುಣಗೊಳಿಸಿದ್ದನ್ನು ಇದಕ್ಕೆ ಉದಾಹರಣೆಯಾಗಿ ನೋಡಬಹುದು.

ಮಹಾಭಾರತದ ಯುದ್ಧ ಪ್ರಸಂಗದಲ್ಲಿ ಶ್ರೀಕೃಷ್ಣ ಚಕ್ರದ ಸಹಾಯದಿಂದ ಸೂರ್ಯನನ್ನು ಹಿಡಿದು ನಿಲ್ಲಿಸಿ ದುರ್ಯೋಧನನ ಸಾವಿನ ನಂತರ ಸೂರ್ಯ ಅಸ್ತಂಗತವಾಗುವಂತಹ ಘಟನೆಯನ್ನು ನೋಡಬಹುದು. ಹಾಗೆಯೇ ದ್ರೌಪದಿಯ ಮಾನಪಹರಣ ಸಂದರ್ಭದಲ್ಲಿ ಶ್ರೀಕೃಷ್ಣ ದ್ರೌಪದಿಗೆ ಅಕ್ಷಯವನ್ನು ಕರುಣಿಸಿದ್ದು ಪವಾಡ ರೀತಿಯಲ್ಲಿ ಕಾಣುವಂತಹದ್ದು, ಹೀಗೆ ಹಲವಾರು ಪ್ರಸಂಗಗಳನ್ನು ಕಾಣಬಹುದು.

೧೨ನೇ ಶತಮಾನದ ಕೃತಿಗಳಲ್ಲಿ ಪವಾಡ ಕಥೆಗಳನ್ನು ಅಳವಡಿಸಿಕೊಂಡು ವರ್ಣಿಸುತ್ತ ಬಂದಿವೆ. ವೀರಶೈವ ಕವಿಗಳಲ್ಲಿ ಹರಿಹರನೇ ಮೊದಲಿಗ. ಹರಿಹರನು ಗ್ರಂಥ ರಚನೆ ಮಾಡಿದ್ದು ಶಿವಶರಣರ ಪುಣ್ಯ ಚರಿತ್ರೆಯನ್ನು ತಿಳಿಸುವುದಕ್ಕಾಗಿ. ಪುಣ್ಯ ಚರಿತ್ರೆ ಎಂದಾಗ ಶ್ರೀ ಸಾಮಾನ್ಯರಿಗೆ ಮಹಿಮಾ ಪುರುಷರ ಕಥೆಗಳನ್ನು, ಪವಾಡಗಳನ್ನು ವರ್ಣಿಸಬೇಕಲ್ಲವೇ? ಹಾಗಾಗಿ ಆದರ್ಶವಾದಿಯಾದ ಹರಿಹರ ತನ್ನ ಜೀವಿತ ಕವಿತ್ವಗಳೆರಡನ್ನು ಈಶ್ವರೋಪಾಸನೆಗೆ ಮೀಸಲಾಗಿರಿಸಿದ್ದಾನೆ. ಧಾರ್ಮಿಕ ಪರಿಸ್ಥಿತಿಯಲ್ಲಿ ಪ್ರಚಲಿತವಿದ್ದ ಪವಾಡಗಳನ್ನು ಕುರಿತು ವರ್ಣಿಸಿದ್ದಾನೆ.

"ಶರಣರ ಅಂತಃಕರಣ, ಭಕ್ತರ ನೋವು-ಸಂಕಟಗಳಿಗೆ ಬಹುಬೇಗ ಸ್ಪಂದಿಸುತ್ತ ಜನತೆ ನೆಮ್ಮದಿಯ ಬದುಕನ್ನು ನಡೆಸಲು ಶ್ರಮಿಸಿದವರು. ಕಣ್ಣಿಲ್ಲದವರಿಗೆ ಕಣ್ಣುಗಳನ್ನು, ಮಾತನಾಡಲಾಗದ ಮೂಗರಿಗೆ ಮಾತನಾಡುವ ಶಕ್ತಿಯನ್ನು, ಕಿವಿ ಕೇಳಿಸದವರಿಗೆ ಶ್ರವಣಶಕ್ತಿಯನ್ನು, ಕೈ ಕಾಲುಗಳಿಲ್ಲದವರಿಗೆ ಕೈಕಾಲುಗಳನ್ನು ಅನುಗ್ರಹಿಸಿ ಅಂಗವಿಕಲರ ಬದುಕಿನಲ್ಲಿ ನವ ಚೈತನ್ಯವನ್ನುಂಟು ಮಾಡಿ ಅವರ ಬಾಳಿಗೆ ಬೆಳಕನ್ನೀಯುವ ಪ್ರಸಂಗಗಳು ಪವಾಡಗಳ ರೂಪದಲ್ಲಿ ವೀರಶೈವ ಪುರಾಣಗಳಲ್ಲಿ ಬಂದಿರುವುದುಂಟು."[೮] ಇಂತಹ ಅದ್ಭುತ ಶಕ್ತಿಗಳಿಗೆ ಮಾರು ಹೋದಂತಹ ಜನ ಅವರನ್ನು ದೈವತ್ವದ ಸ್ಥಾನಕ್ಕೇರಿಸಿ ಪೂಜಿಸಲು, ಆರಾಧಿಸಲು ಪ್ರಾರಂಭಿಸಿದರು.

೧೫-೧೬ನೇ ಶತಮಾನದಲ್ಲಿ ಶರಣರು ಇಟ್ಟ ಕ್ರಾಂತಿಕಾರಿ ಹೆಜ್ಜೆಯ ಗುರುತುಗಳನ್ನು ಕಾಣಬಹುದು. ಶರಣರ ಕಾಯಕ ತತ್ವ, ಜಾತ್ಯಾತೀತ ಮನೋಭಾವ, ಸ್ತ್ರೀ-ಪುರುಷರ ಸಮಾನತೆ ಮುಂತಾದ ಪ್ರಗತಿಪರ ಧೋರಣೆಗಳನ್ನು ಅನುಷ್ಠಾನದಲ್ಲಿ ತಂದರು. ಪಂಚಗಣಾಧೀಶ್ವರರು ೧೬-೧೭ನೇ ಶತಮಾನದಲ್ಲಿ ಬದುಕಿದಂತಹವರು. ಇವರು ಪ್ರಭುತ್ವದ ವಿರುದ್ಧ ಹೋರಾಡಲು ಪವಾಡಗಳನ್ನು ಮಾಡಿದರು. ಶ್ರೀ ಸಾಮಾನ್ಯರ ಹಿತದೃಷ್ಟಿಯಿಂದ ಪವಾಡಗಳನ್ನು ಮಾಡಿದವರು. ಸಮಾಜ ಸಂಘಟನಾ ಶಕ್ತಿಯಿಂದ ಜನತೆಯನ್ನು ತಮ್ಮತ್ತ ಆಕರ್ಷಿಸಿಕೊಂಡು, ಅವರಿಗೆ ತಮ್ಮ ಅನುಭವಗಳನ್ನು ಧಾರೆಯೆರೆದರು. ಧರ್ಮದ ತತ್ವಗಳನ್ನು ಜೀವನ ಮೌಲ್ಯಗಳನ್ನು ಅರುಹಿದರು. ತಾವು ನಡೆದ ಮಾರ್ಗದಲ್ಲಿಯೇ ಜನತೆಯೂ ಬಾಳುವಂತೆ ಪ್ರೇರೇಪಿಸಿದರು. ಹೀಗೆ ವೈಯಕ್ತಿಕ ಜೀವನದಲ್ಲಿ ಸಂಭವಿಸಿರಬಹುದಾದ ಹಲವಾರು ನೈಜ ಸಂಗತಿಗಳ ಸುತ್ತ ಪುರಾಣಕಾರರು ಕಾಲ್ಪನಿಕ ಕಥೆಗಳನ್ನು, ಪವಾಡ ಕಥೆಗಳನ್ನು ಹೆಣೆದು ಅವುಗಳನ್ನು ಅದ್ಭುತವಾಗಿಸಿದ್ದಾರೆ. ಜನತೆಯ ದೃಷ್ಟಿಯಲ್ಲಿ

ದೈವತ್ವದ ಸ್ಥಾನಕ್ಕೇರಿದ್ದಾರೆ. ಪಂಚಗಣಾಧೀಶ್ವರರು ಪವಾಡಗಳ ಮೂಲಕ ಮಧ್ಯಕರ್ನಾಟಕ ಭಾಗದಲ್ಲಿ ನೆಲೆನಿಂತ ದೈವವಾಗಿದ್ದಾರೆ.

ಪವಾಡಗಳು ಸಮುದಾಯದ ನಂಬಿಕೆಗಳನ್ನು ಆಧರಿಸಿರುವುದರಿಂದ ಈ ತರದ ನಂಬಿಕೆಗಳಿಗೆ ಧಾರ್ಮಿಕ ಪರಿವೇಷವಿರುವುದರಿಂದ ಅಂತಿಮವಾಗಿ ಅವು ಜನಪದರ ಧೋರಣೆಯನ್ನು ಹೊಂದಿವೆ. ಪಂಚಗಣಾಧೀಶ್ವರರ ಪವಾಡಗಳಲ್ಲಿ ಮುಖ್ಯವಾಗಿ ಈ ಕೆಳಗಿನವುಗಳು ಕಂಡುಬರುತ್ತವೆ.

೧. ಮಕ್ಕಳಿಲ್ಲದವರಿಗೆ ಸಂತಾನ ಫಲ ನೀಡುವುದು.

೨. ಕಾಯಿಲೆವಾಸಿ ಮಾಡುವುದು

೩. ಸಾವಿನಿಂದ ಉಳಿಸುವುದು

೪. ಬರಗಾಲ ಓಡಿಸುವುದು

೫. ಸಾಂಕ್ರಮಿಕ ರೋಗಗಳನ್ನು ನಿವಾರಿಸುವುದು

೬. ಸತ್ತ ಎಮ್ಮೆ, ಆಕಳು, ಕರು ಬದುಕಿಸುವುದು.

೭. ಭಕ್ತರ ಬಡತನ ನಿವಾರಿಸುವುದು

೮. ಮದ್ದನ್ನು ನೀಡುವುದು

೯. ಭವಿಷ್ಯವನ್ನು ನುಡಿಯುವುದು.

ಹೀಗೆ ಹಲವಾರು ರೀತಿಯ ಪವಾಡಗಳನ್ನು ಮಾಡಿದ್ದಾರೆ.

ಕರ್ನಾಟಕದಲ್ಲಿ ಮಾತ್ರ ಪವಾಡ ಕಲ್ಪನೆಯಿಲ್ಲ. ಭಾರತದಲ್ಲಿ ಅಷ್ಟೆ ಏಕೆ ಅದು ವಿಶ್ವವ್ಯಾಪ್ತಿಯಾಗಿದೆ. ಪವಾಡಗಳಿಲ್ಲದೆ ಮಹಾಕಾವ್ಯಗಳೇ ಇಲ್ಲ. ಹನುಮಂತ ಲಂಕೆಗೆ ಹೋದದ್ದು ಪವಾಡವೇ. ಪವಾಡವಿಲ್ಲದೆ ರಾಮಾಯಣವಿಲ್ಲ. ದ್ರೌಪದಿಗೆ ಅಕ್ಷಯವಸ್ತ್ರವನ್ನು ಮಾಡುವುದೇ ಪವಾಡ. ಮಂಟೇಸ್ವಾಮಿ, ಮಾದೇಶ್ವರ, ಮೈಲಾರಲಿಂಗ, ಜುಂಜಪ್ಪ ಇವರು ಪವಾಡಗಳ ಮೂಖೇನ ಗುರುತಿಸಿಕೊಂಡವರು. ನಂತರ ಮಧ್ಯಕರ್ನಾಟಕದಲ್ಲಿ ಬರುವಂತಹ ಪಂಚಗಣಾಧೀಶ್ವರರಾದ ತಿಪ್ಪೇಸ್ವಾಮಿ, ಗುರುಬಸವೇಶ್ವರ, ಕೆಂಪಯ್ಯ, ಮದ್ದಾನೇಶ್ವರ, ಕೋಲಶಾಂತಯ್ಯ ಗೋಣಿಬಸವ ಇವರು ಪವಾಡಗಳ ಮೂಲಕ ಗುರುತಿಸಿಕೊಂಡವರಾಗಿದ್ದಾರೆ. ಪಂಚಗಣಾಧೀಶ್ವರರು ಧಾರ್ಮಿಕ ಮಹಾಪುರುಷರಾಗಿ ಜನಹಿತವನ್ನು ಬಯಸಿದವರು. ಇವರ ಜೀವನ ಪುರಾಣಗಳ ಪ್ರಕಾರ ಸೃಷ್ಟಿಕರ್ತ ಬ್ರಹ್ಮನು ಮಹಾಪುರುಷನನ್ನು ಸೃಷ್ಟಿಸುವಾಗ ಅನೇಕ ಪವಾಡಗಳ ಮೂಲಕ ಭೂಮಿಯ ಮೇಲೆ ಅವತರಿಸುವಂತೆ ಮಾಡುತ್ತಾನೆ. ಹೀಗೆ ಕಥೆಗಳ ಉದ್ದಕ್ಕೂ ಪವಾಡಗಳ ಚಿತ್ರಣವಿದೆ. ಪಂಚಗಣಾಧೀಶ್ವರರು ಪವಾಡಗಳ ಮೂಲಕ ಜನರ ಹೃದಯದಲ್ಲಿ ನೆಲೆನಿಂತ ದೈವಗಳಾಗಿದ್ದಾರೆ.

ಜನ ಸಮುದಾಯದ ಮನೋಧರ್ಮದ ಮುದ್ರೆಯನ್ನೊತ್ತಿಕೊಂಡು ಹುಟ್ಟಿದ ಪವಾಡಗಳು ಅಥವಾ ಐತಿಹ್ಯಗಳು ಸಾಂಸ್ಕೃತಿಕ ಬದುಕಿನ ಮೇಲೆ ಮಹತ್ತರವಾದ ಪರಿಣಾಮಗಳನ್ನು ಬೀರುತ್ತವೆ. ಒಂದು ಪ್ರದೇಶದ ಜನರು ಅಲ್ಲಿಯ ಯಾವುದೇ ವಸ್ತು ಪಳೆಯುಳಿಕೆ ಇಲ್ಲವೆ ಸ್ಮಾರಕಗಳ ಬಗೆಗೆ ಭಾವನಾತ್ಮಕ ಸಂಬಂಧವನ್ನು

ಹೊಂದಿರುತ್ತಾರೆ. ಈ ಸಂಬಂಧ ಅವರ ಭಕ್ತಿ, ಆಚರಣೆ, ನಂಬಿಕೆ, ಆರಾಧನೆಯ ರೂಪದಲ್ಲಿ ಪ್ರಕಟವಾಗಿರುತ್ತದೆ. ಇದು ಕಥೆಯ ರೂಪದಲ್ಲೋ ವದಂತಿ ರೂಪದಲ್ಲೋ ಒಬ್ಬರಿಂದೊಬ್ಬರಿಗೆ ಮುಟ್ಟುತ್ತಾ ಬಂದು ಅಳಿಸಿ ಹೋಗಲಾರಂದತಹ ಸಂಗತಿಯಾಗಿ, ಘಟನೆಯಾಗಿ, ಅಷ್ಟೇ ಏಕೆ ಇತಿಹಾಸವಾಗಿ ಉಳಿದುಕೊಳ್ಳುತ್ತದೆ.

ಮಧ್ಯ ಕರ್ನಾಟಕ ಭಾಗದಲ್ಲಿ ಬರುವ ಪಂಚಗಣಾಧೀಶ್ವರರು ಹಲವಾರು ಪವಾಡಗಳನ್ನು ಮಾಡಿ ಜನತೆಯಲ್ಲಿ ಅಚ್ಚರಿಯನ್ನುಂಟು ಮಾಡಿದ್ದಾರೆ. ಹೀಗೆ ಅವರು ಮಾಡಿದಂತಹ ಪವಾಡಗಳನ್ನು ಕುರಿತು ಅಧ್ಯಯನ ಮಾಡುವ ಸಲುವಾಗಿ, ಪವಾಡಗಳನ್ನು ಅಧ್ಯಯನದ ಅನುಕೂಲಕ್ಕಾಗಿ ನಾಲ್ಕು ರೀತಿಯಾಗಿ ವರ್ಗೀಕರಣ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ.

**೪.೪. ಪಂಚಗಣಾಧೀಶ್ವರರ ಪವಾಡಗಳ ವರ್ಗೀಕರಣ**

೧. ವ್ಯಕ್ತಿ ಸಂಬಂಧಿ ಪವಾಡಗಳು

೨. ಪ್ರಾಣಿ ಸಂಬಂಧಿ ಪವಾಡಗಳು

೩. ಸ್ಥಳ ಸಂಬಂಧಿ ಪವಾಡಗಳು

೪. ಇತರೆ ಪವಾಡಗಳು

**೪.೪.೧. ವ್ಯಕ್ತಿ ಸಂಬಂಧಿ ಪವಾಡಗಳು**

ಪವಾಡಗಳು ಅಸಾಮಾನ್ಯ ವ್ಯಕ್ತಿಯ, ಮಹಿಮಾಪುರುಷರ ಸಾಧನೆಯ ಪ್ರತೀಕವಾಗಿರುತ್ತವೆ. ತನ್ನ ನಡೆ-ನುಡಿಗಳಿಂದ ಲೋಕಕ್ಕೆ ಉಪಯೋಗವಾಗುವ ನಿಟ್ಟಿನಲ್ಲಿ ಕೆಲಸ ಕಾರ್ಯಗಳನ್ನು ಎಸಗಿರುತ್ತಾನೋ ಜನತೆಯ ಮನದಲ್ಲಿ ನೆಲೆನಿಂತಿರುತ್ತಾನೋ ಅಂತಹ ವ್ಯಕ್ತಿಯ ಮೇಲೆ ಪವಾಡಗಳು ಹುಟ್ಟಿಕೊಳ್ಳುತ್ತವೆ. ಸಮಾಜ ಸೇವೆ, ಪರೋಪಕಾರ, ರೋಗ ವಾಸಿಮಾಡುವುದು, ಬಡತನ ನಿವಾರಣೆ, ಮೌಢ್ಯತೆಯನ್ನು ಹೋಗಲಾಡಿಸುವುದು, ಅಸಮಾನತೆಯನ್ನು ತೊಡೆದುಹಾಕುವುದು, ವೈರಿಗಳನ್ನು ಎದುರಿಸಿ ಜನತೆಯ ನೆಮ್ಮದಿಗೆ ಶ್ರಮಿಸುವ ವ್ಯಕ್ತಿಯ ಸುತ್ತ ಪವಾಡ ಕಥೆಗಳು ಎಣೆಯಲ್ಪಟ್ಟಿವೆ. ಈ ಹಿನ್ನೆಲೆಯಲ್ಲಿ ಪಂಚಗಣಾಧೀಶ್ವರರ ಪವಾಡಗಳನ್ನು ಈ ಕೆಳಗಿನಂತೆ ವರ್ಗೀಕರಿಸಲಾಗಿದೆ.

೧. ಹುಚ್ಚನಂತೆ ತಿರುಗಾಡಿದ್ದು.

೨. ಕಲ್ಲು ಒಗೆದವರು ಕಾಲು ಮುರಿದುಕೊಂಡಿದ್ದು.

೩. ನಿಂಬಿಯಕ್ಕನ ಮನೆಯ ಆಳಾಗಿ ಮೆರೆದದ್ದು.

೪. ಮೂರುಕಲ್ಲು ದೇವಾಲಯದಲ್ಲಿ ಪವಾಡ ಮೆರೆದದ್ದು.

೫. ಗುರುವು ದಾದಿನಾಯಕನಿಂದ ಕುರುಡನಿಗೆ ಕಣ್ಣು ಕೊಡಿಸಿದ್ದು.

೬. ಸತ್ತ ಸೊಸೆಗೆ ಜೀವ ಕೊಟ್ಟದ್ದು.

೭. ದಿವ್ಯದೃಷ್ಟಿಯಿಂದ ಹಾಳುಬಾವಿಯಲ್ಲಿ ಬಿದ್ದು ಸತ್ತವನನ್ನು ಬದುಕಿಸಿದ್ದು.

೮. ಅಂಗಳದ ಧೂಳಿನಿಂದ ವಡ್ಡರ ವಿಷಮಜ್ವರ ನಿವಾರಣೆಯಾದದ್ದು.

೯. ಕಂಚಿಗೆರೆ ತಿಪ್ಪಣ್ಣಗೌಡನಿಗೆ ಗುರುವಿನ ನಾಮಸ್ಮರಣೆಯಿಂದ ವಿಷಮಜ್ವರ ವಾಸಿಯಾದದ್ದು.

೧೦. ಕುಷ್ಠರೋಗ ನಿವಾರಣೆ ಮಾಡಿದ್ದು.

೧೧. ಗುರುನಾಮಸ್ಮರಣೆಯಿಂದ ಶೀಲವಂತ ಲಿಂಗಣ್ಣನಿಗೆ ಶೂಲಿರೋಗ ಇಲ್ಲವಾಗಿಸಿದ್ದು.

೧೨. ಗುರುವು ಮಲ್ಲಶೆಟ್ಟಿಯನ್ನು ಹೊಡೆದು ತಲೆಶೂಲ ಬಿಡಿಸಿದ್ದು.

೧೩. ಸದಾಶಿವ ಯತಿಯ ಕುಷ್ಠರೋಗ ಕಳೆದುದು.

೧೪. ಭಸ್ಮಲೇಪನದಿಂದ ಗಂಡಮಾಲೆಯ ಹುಣ್ಣು ಮಾಯವಾದದ್ದು.

೧೫. ರೋಗಿಯಾದ ವಿಷ್ಣು ಭಕ್ತನು ನಿರೋಗಿಯಾದುದು.

೧೬. ಭದ್ರಶೆಟ್ಟಿಯ ಬಂಧನ ಬಿಡಿಸಿದ್ದು.

೧೭. ಕಿರುನಾಲಿಗೆಯನ್ನು ಸರಿ ಮಾಡಿದ್ದು.

೧೮. ಗರ್ಭಿಣಿ ಸ್ತ್ರೀಯ ಬೆಂದೊಡಲ ಶಾಪ ಹಿಂಗಿಸಿ ಮಗುವನ್ನು ಕರುಣಿಸಿದ್ದು.

೧೯. ಯಮಧೂತರನ್ನು ಬಯ್ದು ಕೂಸನ್ನು ಮರಳಿ ತರಿಸಿದ್ದು.

೨೦. ತುಂಗಭದ್ರೆಯಲ್ಲಿ ತೇಲಿ ಹೋಗುವ ಕೂಸನ್ನು ಕೈಚಾಚಿ ರಕ್ಷಣೆ ಮಾಡಿದ್ದು.

೨೧. ಶಿವಭಕ್ತ ದಂಪತಿಗಳಿಗೆ ಮಕ್ಕಳ ಫಲ ಕರುಣಿಸಿದ್ದು.

೨೨. ಮಾತಿಗೆ ತಪ್ಪಿದ ಭಕ್ತನಿಗೆ ಪ್ರಾಯಶ್ಚಿತ್ತದ ಅರಿವು ಮೂಡಿಸಿದ್ದು.

೨೩. ದಿಲ್ಲಿಯ ಅಕ್ಬರ ಚಕ್ರವರ್ತಿಯ ಅರಮನೆಯಲ್ಲಿ ತೋರಿದ ಮಹಿಮೆ.

೨೪. ಕರಡಿಗೆಯಲ್ಲಿ ಲಿಂಗ ಮಾಯವಾದದ್ದು.

೨೫. ಹೈದರ್‌ಗೆ ಪುತ್ರ ಸಂತಾನ ಕರುಣಿಸಿದ್ದು.

೨೬. ಹರಿಜನ ಕೇರಿಗೆ ಹೋಗುವುದು.

೨೭. ಬುತ್ತಿಯನ್ನು ಪವಾಡ ಮಾಡಿದ್ದು.

೨೮. ನಿಡುಗಲ್ಲು ದೊರೆಗೆ ಪುತ್ರ ಸಂತಾನ ನೀಡಿದ್ದು.

೨೯. ಮದ್ದಾನೇಶ್ವರರ ನೇತ್ರ ದೃಷ್ಟಿಯಿಂದ ಮಗು ಜನಿಸಿದ್ದು.

೩೦. ಶಿರ ಪವಾಡ.

೩೧. ಮಗುವನ್ನು ಸಾಯಿಸಿ ಮತ್ತೆ ಜೀವ ಬರಿಸಿದ್ದು.

೩೨. ಬೆತ್ತದಿಂದ ಹಣವನ್ನು ನೀಡಿದ್ದು.

೩೩. ಶಿವನಯ್ಯನ ಗರ್ವಭಂಗ ಮಾಡಿದ್ದು.

೩೪. ಬೂದಿಯಿಂದ ಬೇಡರ ಕೈ ಕಾಲುಗಳನ್ನು ನಿಯಂತ್ರಿಸಿದ್ದು.

೩೫. ಹರಪನಹಳ್ಳಿ ಉಪ್ಪಾರರು ಊಟದಲ್ಲಿ ವಿಷ ಹಾಕಿದ್ದು.

೩೬. ಉಪ್ಪಾರರ ಬಂಧನದಿಂದ ಹೊರ ಬಂದದ್ದು.

೩೭. ಕಲ್ಲು ಗಾಣದಿಂದ ಪಾರಾದದ್ದು.

೩೮. ಗುರುವನ್ನು ಪಡೆದದ್ದು.

೩೯. ಶಿವನಯ್ಯನನ್ನು ನಾಶ ಮಾಡಿದ್ದು.

**೪.೪.೨. ಪ್ರಾಣಿ ಸಂಬಂಧಿ ಪವಾಡಗಳು**

ಪವಾಡ ಕಥೆಗಳಿಗೂ ಪ್ರಾಣಿಗಳಿಗೂ ಅವಿನಾಭಾವ ಸಂಬಂಧವಿದೆ. ಪ್ರಾಣಿಗಳು ಜನಪದರ ಅಥವಾ ಗ್ರಾಮೀಣ ಬದುಕಿನ ಭಾಗವಾಗಿದ್ದವು. ನಿತ್ಯ ಬದುಕಿನ ಮಹತ್ತರವಾದ ಪಾತ್ರವನ್ನು ಪ್ರಾಣಿಗಳು ನಿರ್ವಹಿಸುತ್ತಿದ್ದವು. ಎತ್ತು, ಹೊಲವನ್ನು ಉಳುಮೆ ಮಾಡಲು, ಆಹಾರ ಸಾಮಾಗ್ರಿಗಳನ್ನು ಒಂದು ಕಡೆಯಿಂದ ಮತ್ತೊಂದು ಕಡೆ ಸಾಗಾಣಿಕೆಗೆ ಕೃಷಿ ಚಟುವಟಿಕೆ ಎತ್ತುಗಳು ರೈತನ ಬದುಕಿನ ಜೀವನಾಡಿಯಾಗಿವೆ. ಆಕಳು ಮನುಷ್ಯನ ಬದುಕಿನ ದಿನನಿತ್ಯ ಜೀವನದಲ್ಲಿ ಹೈನುಗಾರಿಕೆಯಲ್ಲಿ ಪ್ರಧಾನ ಪಾತ್ರವನ್ನು ವಹಿಸುತ್ತದೆ. ಗೊಬ್ಬರ ಸಂಗ್ರಹಣೆ ಮೊದಲಾದವುಗಳ ಹಿನ್ನೆಲೆಯಲ್ಲಿ ಕುರಿ, ಕೋಳಿ, ಎತ್ತು, ಆಕಳು, ಎಮ್ಮೆಗಳು ರೈತನ ಬದುಕಿನಲ್ಲಿ ಬಹಳ ಮುಖ್ಯಪಾತ್ರವಹಿಸುವುದರಿಂದ ಇಂತಹ ಪ್ರಾಣಿಗಳಿಗೂ ಮನುಷ್ಯನಿಗೂ ಅವಿನಾಭಾವ ಸಂಬಂಧಗಳಿವೆ. ಪಂಚಗಣಾಧೀಶ್ವರರು ಮಾಡಿದ ಪವಾಡಗಳಲ್ಲಿ ರೈತನ ಬದುಕಿಗೂ ಪ್ರಾಣಿಗಳಿಗೂ ಸಂಬಂಧವನ್ನು ಕಟ್ಟಿಕೊಡುತ್ತವೆ. ಈ ನೆಲೆಯೊಳಗೆ ಅವರು ಪ್ರಾಣಿಗಳನ್ನು ಬದುಕಿಸುವಂತಹ ಪವಾಡಗಳನ್ನು ನೋಡುತ್ತೇವೆ. ಅವುಗಳು ಈ ಕೆಳಕಂಡಂತಿವೆ.

೧. ವಿಭೂತಿ ಲೇಪನದಿಂದ ಸತ್ತ ಎಮ್ಮೆ ಬದುಕಿಸಿದ್ದು.

೨. ಗುರುವಿನ ಭಸ್ಮ ಲೇಪನದಿಂದ ಆಕಳು ಮತ್ತು ಕರು ಬದುಕಿಸಿದ್ದು.

೩. ಇಲಿಯು ಕಚ್ಚಿಕೊಂಡು ಹೋದ ಲಿಂಗದ ಸಂಗಡ ಚೇಷ್ಟೆಮಾಡಿದ್ದು.

೪. ಸಾಸಲೂರ ಬೇಡರ ದೊರೆಯ ಸತ್ತ ಕುದುರೆಗೆ ಜೀವದಾನ ಮಾಡಿದ್ದು.

೫. ಸತ್ತಗೂಳಿಯನ್ನು ತನ್ನತ್ತ ಬರಮಾಡಿಕೊಂಡದ್ದು.

೬. ಹಾವು ಕಚ್ಚಿದ ಬಿಲಗೂರ ಲಿಂಗಣ್ಣನಿಗೆ ಬಸ್ಮಲೇಪನದಿಂದ ವಿಷ ಇಳಿಸಿದ್ದು.

೭. ಜಂಗಮನನ್ನು ಮದ್ದಾನೆಯಿಂದ ರಕ್ಷಿಸಿದ್ದು.

೮. ಗುರುವು ನೆಲ ಕಚ್ಚಿದ ಎತ್ತನ್ನು ಮೇಲೆ ಎಬ್ಬಿಸಿದ್ದು.

೯. ಹಾವು ಹಿಡಿದು ಬಾಲ ಪಡೆದು ಬಂಗಾರ ಪಡೆದದ್ದು.

೧೦. ಸತ್ತೆಮ್ಮೆ ಹಾಲು ಕರೆದದ್ದು.

೧೧. ಉಗ್ರಸರ್ಪ ಹಗ್ಗವಾಗುವುದು.

೧೨. ಹುಲಿಗಳನ್ನು ಹೂಡಿ ಬೇಸಾಯ ಮಾಡಿದ್ದು.

೧೩. ಕರುವಿನ ಕೋಟೆಯಲ್ಲಿ ಸತ್ತ ಎಮ್ಮೆ ಬದುಕಿಸಿದ್ದು.

೧೪. ಶಿಕಾರಿಪುರ ಗ್ರಾಮದಲ್ಲಿ ಹುಚ್ಚುನಾಯಿ ಪವಾಡ ಮಾಡಿದ್ದು.

೧೫. ಬಾಗಳಿಯಲ್ಲಿ ಬಿಕ್ಷಾಟನೆ ಮಾಡಿದ್ದು.

೧೬. ಹಾವು ಕಚ್ಚಿ ಸತ್ತಿದ್ದ ಮಗನನ್ನು ಬದುಕಿಸಿದ್ದು.

೧೭. ಗೂಳಿಯ ರೂಪ ಧರಿಸಿದ್ದು.

೧೮. ಹಾವಾಗಿ ಹಾಲು ಕುಡಿದಿದ್ದು.

**೪.೪.೩. ಸ್ಥಳ ಸಂಬಂಧಿ ಪವಾಡಗಳು**

ಮಹಿಮಾಪುರುಷನಾದ ವ್ಯಕ್ತಿ ಒಂದು ನಿರ್ದಿಷ್ಟ ಸ್ಥಳಕ್ಕೆ ಬದ್ಧನಾಗಿದ್ದರೂ ಅಲ್ಲಿ ಸ್ಥಳದ ಮಹತ್ವಿಕೆಯನ್ನು ಮೀರಿ ವ್ಯಕ್ತಿತ್ವ ಕೆಲಸ ಮಾಡುತ್ತಿರುತ್ತದೆ. ವ್ಯಕ್ತಿಯಿಂದಾಗಿ ಸ್ಥಳಕ್ಕೆ ಮಹತ್ವ ಬಂದಿರುತ್ತದೆ. ನಿರ್ದಿಷ್ಟ ಸ್ಥಳದಲ್ಲಿ ನಡೆದಂತಹ ಘಟನೆಯನ್ನು ಕುರಿತು ಹೇಳುವಂತಹದ್ದು. ಘಟನಾವಳಿಗೂ ಮತ್ತು ಸ್ಥಳಕ್ಕೂ ಸಂಬಂಧವಿರುವುದನ್ನು ಕಾಣುತ್ತೇವೆ.

೧. ಬೆತ್ತವನ್ನು ಮುಟ್ಟಿ ನೀರು ಬರಿಸಿದ್ದು.

೨. ದೇವಾಲಯದ ತುಂಬ ಬೆತ್ತ ಜೋಳಿಗೆ ತುಂಬಿದ್ದು.

೩. ಕೆರೆ ಕಟ್ಟಿಸಿದ್ದು.

೪. ನಿಡುಗಲ್ಲಿನಲ್ಲಿ ಪವಾಡ ಮೆರೆದದ್ದು.

೫. ಕೆರೆ ಮತ್ತು ಪುರವನ್ನು ಕಟ್ಟಿಸಿದ್ದು.

**೪.೪.೪. ಇತರೆ ಪವಾಡಗಳು**

ಇಲ್ಲಿ ಘಟನೆಯೇ ಮುಖ್ಯವಾಗಿರುತ್ತದೆ. ಸ್ಥಳ ಮತ್ತು ವ್ಯಕ್ತಿಗಳು ಎರಡನೇ ಸ್ಥಾನದಲ್ಲಿ ಬರುತ್ತಾರೆ.

೧. ಬಸ್ಮದ ಉಂಡೆಯನ್ನು ಕೊಟ್ಟು ಕರುಣಿಸಿದ್ದು.

೨. ಧಾನ್ಯವನ್ನು ಅಕ್ಷಯ ಮಾಡಿದ್ದು.

೩. ಅಪ್ಪಿಕೊಂಡ ಮೋಟು ಮರ ಚಿಗಿಯುವುದು.

೪. ಕಲ್ಲು ಊಟದ ಪೇಣಿಯಾಗುವುದು.

೫. ಬೆಂಕಿ ಮಂಜುಗಡ್ಡೆಯಾಗುವುದು.

೬. ಕೊಂಡನಹಳ್ಳಿಯಲ್ಲಿ ಮೂಢನಂಬಿಕೆ ಹೋಗಲಾಡಿಸಿದ್ದು.

೭. ಬೆಂಕಿಯಿಂದ ಪಾರಾದದ್ದು.

೮. ಮೊರವಿ ಅಂಗಿಯನ್ನು ತೊಟ್ಟು ಮೂರ್ಛೆ ಹೋದದ್ದು.

೯. ಬರಡು ಮರ ಕಾಯಿ ಬಿಟ್ಟಿದ್ದು.

೧೦. ಫಣಿಯಪ್ಪನಿಗೆ ಶಾಪ ಹಾಕಿದ್ದು.

**೪.೫. ಪಂಚಗಣಾಧೀಶ್ವರರ ಪವಾಡಗಳ ವಿಶ್ಲೇಷಣೆ**

ಪಂಚಗಣಾಧೀಶ್ವರರು ಮಾಡಿರುವಂತ ಪವಾಡಗಳಲ್ಲಿ ವ್ಯಕ್ತಿ ನೆಲೆಯಲ್ಲಿ, ಸ್ಥಳದ ಹಿನ್ನೆಲೆಯಲ್ಲಿ,

ಪ್ರಾಣಿಗಳ ಜೊತೆಯಲ್ಲಿ ಸಂಬಂಧವನ್ನು ಕಟ್ಟಿಕೊಡುವ ನೆಲೆಯ ಒಳಗೆ ಪವಾಡಗಳು ಕಂಡುಬರುತ್ತವೆ. ಪಂಚಗಣಾಧೀಶ್ವರರು ಮಾಡಿದಂತಹ ಪವಾಡಗಳನ್ನು ವ್ಯಕ್ತಿ, ಸ್ಥಳ, ಪ್ರಾಣಿ ಹಾಗೂ ಇತರೆ ನೆಲೆಯಲ್ಲಿ ವಿಂಗಡಿಸಿಕೊಂಡು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**೪.೫.೧. ವ್ಯಕ್ತಿ ಸಂಬಂಧಿ ಪವಾಡಗಳು**

ಪಂಚಗಣಾಧೀಶ್ವರರು ಮಾಡಿರುವಂತಹ ಪವಾಡಗಳಲ್ಲಿ ಹೆಚ್ಚು ವ್ಯಕ್ತಿಯ ಬದುಕಿನ ಜೊತೆ ನಿಕಟ ಸಂಪರ್ಕವನ್ನು ಹೊಂದಿರುವುದರಿಂದ, ವ್ಯಕ್ತಿ ಕೇಂದ್ರಿತ ನೆಲೆಯೊಳಗೆ ಪವಾಡಗಳು ಕಂಡುಬರುತ್ತವೆ. ಸತ್ತ ವ್ಯಕ್ತಿಯನ್ನು ಬದುಕಿಸುವ, ರೋಗವಾಸಿ ಮಾಡುವ, ರೋಗವನ್ನು ಬರಿಸುವ, ರೋಗಿಗಳಿಗೆ ಮದ್ದನ್ನು ನೀಡುವುದು. ಹೀಗೆ ಹಲವಾರು ಘಟನೆಗಳು ವ್ಯಕ್ತಿ ಕೇಂದ್ರಿತ ನೆಲೆಯಲ್ಲಿ ಅಭಿವ್ಯಕ್ತಗೊಂಡಿರುವುದರಿಂದ ಅಂತಹ ಪವಾಡಗಳನ್ನು ಕುರಿತು ಈ ಕೆಳಗೆ ವಿಶ್ಲೇಷಿಸಲಾಗಿದೆ.

**೧. ಹುಚ್ಚನಂತೆ ತಿರುಗಾಡಿದ್ದು.**

ಕೊಟ್ಟೂರು ಗುರುಬಸವನು ತನ್ನ ನಿಜಸ್ವರೂಪವನ್ನು ಮರೆಸಿ ಜನರಿಗೆ ಹುಚ್ಚನ ಹಾಗೆ ಕಾಣಿಸುತ್ತ ತನ್ನಷ್ಟಕ್ಕೆ ತಾನೇ ಕುಣಿದಾಡುತ್ತ, ಉಬ್ಬುತ್ತ, ಪುಣ್ಯಾತ್ಮರಿಗೆ ಸಂತೋಷವನ್ನುಂಟು ಮಾಡುತ್ತ ಅಲ್ಲಲ್ಲಿ ಜನರಿಗೆ ನಿಜಸ್ವರೂಪವನ್ನು ತೋರುತ್ತ ಪುರಜನರಿಗೆ ಆಶ್ಚರ್ಯ ಉಂಟಾಗುವಂತೆ ತನ್ನ ರೀತಿಯಲ್ಲಿಯೇ ಇರುತ್ತಿದ್ದನು. ವಯಸ್ಕರ ಜೊತೆಗೆ ವಿನೋದವಾಡುತ್ತಿದ್ದನು. ಪಂಡಿತರೊಡನೆ ಪಾಂಡಿತ್ಯದಿಂದ ಸರಸವಾಡುತ್ತಿದ್ದನು. ಹೀಗೆ ಲೀಲಾ ಪುರುಷನಾಗಿ ಜನರಿಗೆ ವಿಚಿತ್ರ ರೀತಿಯ ಹುಚ್ಚನಂತೆ ಕಾಣುತ್ತ ಲಿಂಗಾನುಭವ ಸುಖದಿಂದ ಇರುತ್ತಿದ್ದನು.

**೨. ಕಲ್ಲು ಒಗೆದವನು ಕಾಲು ಮುರಿದು ಕೊಂಡಿದ್ದು.**

ಒಬ್ಬ ದುರುಳನು ಓಡಿ ಬಂದು ದೊಡ್ಡ ಕಲ್ಲು ತೆಗೆದುಕೊಂಡು ಗುರುವಿನ ಮೇಲೆ ಒಗೆಯಲು ಬಂದಾಗ, ಗುರುವು ಆ ದುರುಳನನ್ನು ಹೊರಳಿ ನೋಡಿದಾಕ್ಷಣವೇ ಅವನು ಕಾಲು ಮುರಿದು ನೆಲಕ್ಕೆ ಬಿದ್ದನು. ಕೂಡಲೇ ಗುರುವು ಕೋಪದಿಂದ ನುಡಿದುದನ್ನು ಕೇಳಿ ಭಯ ಹುಟ್ಟಿ ನಡುಗಿ ಗುರುವಿಗೆ ನಮಸ್ಕರಿಸಿದನು. ಇದನ್ನು ನೋಡಿದ ಜನ ಸಾಮಾನ್ಯರು ಮಹಿಮಾಪುರುಷನೆಂದು ಹೊಗಳಿದರು.

**೩. ನಿಂಬಿಯಕ್ಕನ ಮನೆಯ ಆಳಾಗಿ ಮೆರೆದುದು.**

ಗುಣವತಿಯಾದ ನಿಂಬಿಯಕ್ಕ, ಮರುಗಿ ಹುಚ್ಚನನ್ನು ಹತ್ತಿರ ಕರೆದು ಏನಯ್ಯ ನನ್ನ ಮಗನಾಗಿ ಮನೆಯೊಳಗಿದ್ದು, ಅಡವಿಗೆ ಹೋಗಿ ದನವನ್ನು ಕಾಯ್ದುಕೊಂಡು ಬಂದರೆ ನಾನು ನಿನಗೆ ಎಣ್ಣೆ, ಬೆಣ್ಣೆ ಉಣ್ಣಿಸಿ ಜೋಪಾನ ಮಾಡುವೆನು ಎಂದು ಹೇಳಲು ಆ ಸ್ತ್ರೀಯು ಮುಗ್ಧ ಸ್ವಭಾವಕ್ಕೆ ಮೆಚ್ಚಿದ ಗುರುವು ಆಕೆಯ ದನಕರುಗಳನ್ನು ಕಾಯುವ ಕೆಲಸದಲ್ಲಿ ನಿರತನಾದನು. ಹೀಗೆ ದನಕಾಯುತ್ತಿರಲು ಒಂದು ದಿನ ಸಂಗಡಿಗರಾದ ಬೀರ, ಮೈಲಾರ ಇವರಿಗೆ ದನಕರುಗಳನ್ನು ಮನೆಗೆ ಹೊಡೆದುಕೊಂಡು ಹೋಗಲು ಒಪ್ಪಿಸಿ ತಾನು ಅಲ್ಲಿನ ಹಳ್ಳದಲ್ಲಿ ಲಿಂಗವನ್ನು ರಚಿಸಿ ಸುಖಾಸನದಲ್ಲಿ ಕುಳಿತುಕೊಂಡು ಪೂಜೆಯಲ್ಲಿ ನಿರತನಾದನು.

ಮಾನಸಪೂಜೆ ಮಾಡುತ್ತ, ಸಮಾಧಿ ಸ್ಥಿತಿಯಲ್ಲಿ ಇರುವಾಗ, ಮಳೆ ಬೀಳತೊಡಗಿತು. ಸ್ವಲ್ಪ ಸಮಯದಲ್ಲಿಯೇ ಜೋರಾಗಿ ಮಳೆ ಸುರಿಯಿತು. ಹಳ್ಳದಲ್ಲಿ ನೀರಿನ ಪ್ರವಾಹ ಬಂದು ಹುಚ್ಚುಸ್ವಾಮಿ ಅದರಲ್ಲಿ ಮುಳುಗಿ ಹೋದನು. ಏಳು ದಿನಗಳವರೆಗೂ ನೀರಿನ ಪ್ರವಾಹ ಕಡಿಮೆಯಾಗಲಿಲ್ಲ. ಪ್ರವಾಹದಲ್ಲಿ ಮುಳುಗಿದ್ದ ಸ್ವಾಮಿಯು ಏಳು ದಿನಗಳವರೆಗೂ ಸಮಾಧಿಯಲ್ಲಿಯೇ ಇದ್ದನು. ಜೊತೆಗಿದ್ದ ಗೆಳೆಯರು ಓಡಿ ಬಂದು ದನಗಾಯಿ ಹುಚ್ಚನು ಹಳ್ಳದಲ್ಲಿ ಮುಳುಗಿ ಹೋದನು ಎಂದು ನಿಂಬಿಯಕ್ಕನಿಗೆ ಹೇಳಿದರು. ಆ ಸ್ವಾಮಿಯ ಗುಣಗಳನ್ನೆಲ್ಲ ನೆನೆದುಕೊಂಡು ಹಾಡಿಕೊಂಡು ಅಳಹತ್ತಿದಳು. ಅವಳ ಅಳವು ಸ್ವಾಮಿಗೆ ಕೇಳಿತೇನೋ ಎಂಬಂತೆ ಎಂಟನೇ ದಿನ ಬೆಳಗಾಗುತ್ತಲೇ ಎಂದಿನಂತೆ ದಡದಲ್ಲಿ ಬಂದನು. ಆಶ್ಚರ್ಯವನ್ನು ನೋಡಿ ಜನ ಆತನನ್ನು ಕೊಂಡಾಡಿದರು.

**೪. ಮೂರುಕಲ್ಲು ದೇವಾಲಯದಲ್ಲಿ ಪವಾಡ ಮೆರೆದದ್ದು.**

ಒಮ್ಮೆ ಪಟ್ಟಣದ ದುರುಳರು ಹುಚ್ಚು ಸ್ವಾಮಿಯನ್ನು ಊರುಬಿಟ್ಟು ಕಳುಹಿಸಲು ಯೋಚಿಸಿದರು. ಸ್ವಾಮಿಯು ಊರ ಹತ್ತಿರವಿರುವ ಮೂರುಕಲ್ಲು ದೇವಾಲಯದಲ್ಲಿ ಶಿವಧ್ಯಾನದಲ್ಲಿ ನಿರತನಾಗಿ ಸಮಾಧಿಯೊಳಗಿದ್ದನು. ಆತನ ಮೈಮೇಲೆ ವಿಷಸರ್ಪಗಳು ಹರಿದಾಡುತ್ತಿದ್ದವು. ಹೀಗೆ ಸರ್ಪಗಳಿಂದ ಆವೃತ್ತನಾಗಿ ಸಮಾಧಿ ಸ್ಥಿತಿಯಲ್ಲಿರಲು "ದೇವಾಲಯಕ್ಕೆ ಬೆಂಕಿ ಹತ್ತಿಕೊಂಡಿತು. ಊರ ಜನರೆಲ್ಲ ಗಾಬರಿಗೊಂಡು ಅಯ್ಯೋ ಬೆಂಕಿ ಹತ್ತಿಕೊಂಡು ಪಾಪ ಹುಚ್ಚ ಸತ್ತನೇನೋ ಶಿವ ಶಿವಾ, ಎಂದು ಮರುಗಿದರು. ಬೆಂಕಿ ನಂದಿದ ಮೇಲೆ ಬಂದು ನೋಡಲು ಸುಟ್ಟ ದೇವಾಲಯದ ಮಧ್ಯದಲ್ಲಿ ಪುಟಕ್ಕಿಟ್ಟ ಬಂಗಾರದ ಗೊಂಬೆಯಂತೆ ಆನಂದ ತುಂಬಿದ ಮುಗುಳ್ನಗೆ ಸೂಸುತ್ತ ಗುರುವು ಕುಳಿತಿದ್ದನು. ನೆರೆದ ಜನರು ನೋಡಿ ಈತ ಸಾಮಾನ್ಯನಲ್ಲ ಎಂದು ತಿಳಿದು ಎಲ್ಲರೂ ನಮಸ್ಕರಿಸಿ ಕೊಂಡಾಡಿದರು."[೯] ಇಂತಹ ಅದ್ಭುತ ಮಹಿಮೆಯನ್ನು ಜನತೆಗೆ ತೋರಿಸುವುದರ ಮೂಲಕ ಜನರಲ್ಲಿದ್ದಂತಹ ಕುಹಕ ಭಾವನೆಯನ್ನು ಕಿತ್ತೆಸೆದು ದೈವೀಭಾವನೆ ಮೂಡಿಸಲು ಪವಾಡಗಳನ್ನು ಮಾಡಿದರು.

**೫. ಗುರುವು ದಾದಿನಾಯಕನಿಂದ ಕುರುಡನಿಗೆ ಕಣ್ಣು ಕೊಡಿಸಿದ್ದು.**

ಒಂದು ದಿನ ಗುರುವನ್ನು ಹೊಗಳುತ್ತಾ ಬಂದು ಅನಾಥ ಬಂಧುವೇ ನನ್ನನ್ನು ಕಾಪಾಡು. ತಾಪತ್ರಯದಿಂದ ಬಳಲಿ ಬೆಂಡಾದ "ನನಗೆ ಕಣ್ಣುಗಳನ್ನು ಕೊಟ್ಟು ರಕ್ಷಿಸು, ಇಲ್ಲದಿದ್ದರೆ ಇಲ್ಲಿಯೇ ಸತ್ತು ಹೋಗುವೆನು ಎಂದು ಹಟ ಹಿಡಿದನು. ಹೀಗೆ ಏಳುದಿನಗಳವರೆಗೂ ದೇವಾಲಯದಲ್ಲಿದ್ದು ಭಕ್ತಿಯಿಂದ ಬೇಡಿಕೊಳ್ಳಲು ಗುರುವು ನೀನು ಕೇಳಿದ್ದನ್ನು ಕೊಡಲಿಕ್ಕೆ ನಾನೇನು ಅರಸನೇ, ಕೊಡುವವನು ಈ ಊರ ಅರಸನಾದ ದಾದಿನಾಯಕನಿದ್ದಾನೆ. ಆತನ ಬಳಿಗೆ ಹೋಗು ಎಂದನು. ಆಗ ಕೋಲಶಾಂತೇಶನು ಅವನಿಗೆ ಸಮಾಧಾನ ಹೇಳಿ ಗುರುವಿನ ಅಪ್ಪಣೆಯಂತೆ ರಾಜನಲ್ಲಿಗೆ ಹೋಗು ಆತನ ಮಹಿಮೆ ಯಾರಿಗೆ ಗೊತ್ತು? ಎಂದು ಹೇಳಿ ಕಳುಹಿಸಲು ಕುರುಡನು ದಾದಿನಾಯಕನಲ್ಲಿಗೆ ಬಂದನು. ಕಣ್ಣು ಕೇಳಲು ಬಂದ ಸ್ಥಿತಿಯನ್ನು ಅರಿತ ದಾದಿನಾಯಕನು ಆನಂದ ಆಶ್ಚರ್ಯಗಳನ್ನು ತುಂಬಿದ ಮನಸ್ಸುಳ್ಳವನಾಗಿ ಇದನ್ನು ಪರೀಕ್ಷಿಸಿ ಗುರುವನ್ನು ಹೊಂದಿ ಬಾಳುವೆನೆಂದು ನಿರ್ಧರಿಸಿ ಹುಟ್ಟು ಕುರುಡನಾದ ನಿನಗೆ ಈಗಲೇ ಕಣ್ಣು ಬರಲಿ"[೧೦] ಎಂದಾಕ್ಷಣವೇ

ಗುರುವರನ ಮಹಿಮೆಯಿಂದ ಕಣ್ಣು ಬಂದವು ಎಂದು ಹೇಳಿದ. ಕಣ್ಣಿಲ್ಲದವರಿಗೆ ಕಣ್ಣನ್ನು ಕೊಡುವುದರ ಜೊತೆಗೆ ಕಣ್ಣಿದ್ದು ಇಲ್ಲದೆ ಹಾಗೆ ಬದುಕುವಂತಹ ಜನರಿಗೆ ಜ್ಞಾನದ ಕಣ್ಣನ್ನು ತೆರೆಸುವಂತಹ ಸಂಕೇತವಾಗಿ ಕಂಡುಬರುತ್ತದೆ.

**೬. ಸತ್ತ ಸೊಸೆಗೆ ಜೀವ ಕೊಟ್ಟದ್ದು.**

"ಒಬ್ಬ ಸದ್ಭಕ್ತೆಯು ಪ್ರತಿನಿತ್ಯ ಗುರು ಬಸವರಾಜನ ಸೇವೆಯನ್ನು ಅತ್ಯಂತ ಭಕ್ತಿ ವಿಶ್ವಾಸಗಳಿಂದ ಮಾಡುತ್ತಿದ್ದಳು. ಹೀಗೆ ಒಂದು ದಿನ ಜಂಗಮ ಸೇವೆಯಲ್ಲಿರುವಾಗ ಒಮ್ಮೆಲೇ ಅವಳ ಸೊಸೆ ತೀರಿಕೊಂಡಳು. ಕೂಡಲೇ ಅತ್ತೆಯು 'ಬಸವಯ್ಯ' ಬಸವೇಸ ಕರುಣಿಸು ಎನ್ನುತ್ತಾ ಎಲ್ಲರಿಗೂ ಆಶ್ಚರ್ಯವಾಗುವಂತೆ ಸತ್ತ ಸೊಸೆಯ ಶವವನ್ನು ತಂದು ಗುರುವಿನ ಮುಂದಿಟ್ಟು, ಅಯ್ಯಾ ತಂದೆ ನನ್ನ ಮನೆ ಮುರಿಯಿತಪ್ಪಾ ಎಂದು ಹಂಬಲಿಸುತ್ತ ಈ ಬಡವಿಯನ್ನು ಕಾಪಾಡಯ್ಯ ಎಂದು ಬೇಡಲು ಗುರುವು ಕರುಣೆಯಿಂದ 'ಏಳೇಳು' ಎಂದ ಕೂಡಲೇ ಸತ್ತಿದ್ದ ಸೊಸೆಯ ಮರುಹುಟ್ಟು ಪಡೆದು ಗುರುವಿಗೆ ನಮಸ್ಕರಿಸಿದಳು."[೧೧] ಹೀಗೆ ಜೀವ ಬದುಕಿಸುವುದರ ಮೂಲಕ ಜನರನ್ನು ತಮ್ಮ ಕಡೆ ಓಲೈಸಿಕೊಂಡರು. ತಮ್ಮ ವೈದ್ಯಶಕ್ತಿಯಿಂದ ಸೊಸೆಯನ್ನು ಬದುಕಿಸಿಕೊಟ್ಟರು.

**೭. ದಿವ್ಯದೃಷ್ಟಿಯಿಂದ ಹಾಲು ಬಾವಿಯಲ್ಲಿ ಬಿದ್ದು ಸತ್ತವನನ್ನು ಬದುಕಿಸಿದ್ದು.**

ಶಿವ ಭಕ್ತನೊಬ್ಬನು ಊರ ಹಾಳುಬಾವಿಯಲ್ಲಿ ಬಿದ್ದು ಸಾಯಲು, ಭಕ್ತರೆಲ್ಲರು ಕೂಡಿ ಗುರುವಿನಲ್ಲಿಗೆ ಬಂದು ನಮಸ್ಕರಿಸಿ ಜೀವದಾನ ಮಾಡಬೇಕೆಂದು ಬೇಡಿದರು. ಭಕ್ತರ ಇಚ್ಛೆಯಂತೆ ಕರುಣಾ ದೃಷ್ಟಿಯಿಂದ ನೋಡಲು ಆ ಗುರುವಿನ ದಿವ್ಯ ದೃಷ್ಟಿಯೇ ಪ್ರಾಣವಾಯಿತೆನ್ನುವಂತೆ ಭಕ್ತನು ಎದ್ದು ನಮಸ್ಕರಿಸಿದನು.

**೮. ಅಂಗಳದ ಧೂಳಿನಿಂದ ವಡ್ಡರ ವಿಷಮಜ್ವರ ನಿವಾರಣೆಯಾದದ್ದು.**

ಮತ್ತಿಘಟ್ಟ ಎಂಬ ಊರಲ್ಲಿ ವಡ್ಡರ ಸಮಾಜದ ಬಹು ಜನರು ಉಗ್ರಜ್ವರದಿಂದ ಸಾಯುತ್ತಿರಲು ಅಲ್ಲಿಯ ಶಿವಭಕ್ತನೊಬ್ಬನು ಅವರನ್ನು ಕರೆದು ಸತ್ತವರಿಗೆ ಜೀವಕೊಡುವನೆಂದು ಹೆಸರಾಗಿರುವ ಗುರುಬಸವನಲ್ಲಿಗೆ ಹೋಗಿ ಬೇಡಿಕೊಂಡು ಸುಖವಾಗಿರಿ ಎಂದು ಹೇಳಿದನು. ಆತನ ಮಾತಿನಂತೆ ವಡ್ಡರೆಲ್ಲರೂ ಗುರುಬಸವನಲ್ಲಿಗೆ ಬಂದು ಗುರುವಿಗೆ ನಮಸ್ಕರಿಸಿ ಭಯ ಭಕ್ತಿಯಿಂದ ಬೇಡಿಕೊಂಡು ರಾಜಾಂಗಣದಲ್ಲಿ ಹೊರಳಾಡಿದರು. ಅಂಗಳದ ಧೂಳು ಮೈಗೆ ಮೆತ್ತಿದ ಕೂಡಲೇ ಅವರ ಜ್ವರ ಭಾದೆ ಇಲ್ಲವಾಗಿ ನಿರೋಗಿಗಳಾದರು. ಅವರೆಲ್ಲರೂ ಗುರುಬಸವನ ಸೇವಕರಾಗಿ ಸೇವೆ ಮಾಡಿದರು.

**೯. ಕಂಚಿಗೆರೆ ತಿಪ್ಪಣ್ಣಗೌಡನಿಗೆ ಗುರುವಿನ ನಾಮಸ್ಮರಣೆಯಿಂದ ವಿಷಮಜ್ವರ ವಾಸಿಯಾದದ್ದು.**

ಒಮ್ಮೆ ಜ್ವರದಿಂದ ಬಳಲುತ್ತಿರುವಾಗ ಮನಸ್ಸಿನಲ್ಲಿ ಗುರುಬಸವನ ಪಾದವನ್ನು ನೆನೆದು ಬಾಯಿಂದ 'ಗುರುಬಸವ' ಎಂದು ಗುರುನಾಮವನ್ನು ಜಪಿಸಿದ ಕೂಡಲೇ ಬೆಂಕಿಯನ್ನು ನೀರಿನಲ್ಲಿ ಅದ್ದಿದಂತೆ ವಿಷಮ ಜ್ವರದ ತಾಪ ಆರಿ ಸಮಾಧಾನವಾಯಿತು. ರೋಗವನ್ನು ಗುಣಪಡಿಸುವಂತಹ ಸಕ್ತಿಯನ್ನು ಪಡೆದವರಾಗಿದ್ದರು. ಅದರಿಂದ ಕಾಯಿಲೆಗಳನ್ನು ವಾಸಿಮಾಡಿ ಜನರ ದೃಷ್ಟಿಯಲ್ಲಿ ದೈವತ್ವದ ಸ್ಥಾನವನ್ನು ಪಡೆದರು.

**೧೦. ಕುಷ್ಟರೋಗ ನಿವಾರಣೆ ಮಾಡಿದುದು.**

ಒಬ್ಬ ಕುಷ್ಟ ರೋಗಿಯು ಮೈಯಲ್ಲಿ ಕೀವು, ರಕ್ತ, ಸುರಿಯುತ್ತ, ದುರ್ವಾಸನೆಯಿಂದ ನರಕಯಾತನೆ ಅನುಭವಿಸುತ್ತಿರುವಾಗ ಗುರುವಿನ ಅರಿವಾಗಿ ದೇವಾಲಯವನ್ನು ಪ್ರದಕ್ಷಿಣೆ ಹಾಕಿ ನಮಸ್ಕರಿಸುತ್ತಿರುವಾಗ ಆ ರೋಗಿಯು ನಿರೋಗಿಯಾದನು ಆಗ ಜನರೆಲ್ಲ ಗುರುವನ್ನು ಕೊಂಡಾಡಿದನು. ರೋಗಿಗೆ ಮದ್ದನ್ನು ನೀಡಿ ರೋಗ ವಾಸಿಮಾಡಿದರು.

**೧೧. ಗುರುನಾಮಸ್ಮರಣೆಯಿಂದ ಶೀಲವಂತ ಲಿಂಗಣ್ಣನಿಗೆ ಶೂಲಿರೋಗ ಇಲ್ಲವಾದುದು.**

ಶೀಲವಂತ ಲಿಂಗಣ್ಣನಿಗೆ ಶೂಲಿರೋಗ ಸೇರಿ ದುಃಖಿತನಾಗಿದ್ದಾಗ ಗುರುಬಸವನನ್ನು ಮನಸ್ಸಿನಲ್ಲಿರಿಸಿ ಬಾಯಿಂದ ಬಸವಾ, ಬಸವಾಚಾರ್ಯ, ಓಸ್ವ ಚೂಡಾಮಣಿ ಎಂದು ಒಂದೇ ಸವನೆ ನಾಮಗಳನ್ನು ಜಪಿಸಲು ರೋಗವಾಸಿಯಾಗಿ ಕೈಕಾಲುಗಳು ಮೊದಲಿನಂತಾದವು.

**೧೨. ಸದಾಶಿವ ಯತಿಯ ಕುಷ್ಟರೋಗ ಕಳೆದುದು.**

ಸದಾಶಿವ ಯತಿಯು ಕುಷ್ಟರೋಗದಿಂದ ನರಳುತ್ತಿದ್ದು, ಆಗ ಗುರುಬಸವನು ತನ್ನ ಕೈಯಿಂದ ಸದಾಶಿವನ ಮೈಯೆಲ್ಲಾ ಸವರಲು ರೋಗವೇ ಇಲ್ಲವಾಯಿತು.

**೧೩. ಗುರುವು ಮಲ್ಲಶೆಟ್ಟಿಯನ್ನು ಹೊಡೆದು ತಲೆಶೂಲ ಬಿಡಿಸಿದುದು.**

ಗುರುಬಸವ ಶಿವ ಶರಣರೊಡನೆ ಸಂಭ್ರಮದಿಂದ ಬೀದಿಯಲ್ಲಿ ಬರುತ್ತಿರುವಾಗ "ಮಲ್ಲಶೆಟ್ಟಿ ಎಂಬ ಪ್ರೀತಿಯ ಭಕ್ತನು ಎದುರಿಗೆ ಬಂದು ಕಾಲಿಗೆ ನಮಸ್ಕರಿಸಿ ಮೇಲೆದ್ದನು. ಕೂಡಲೆ ಗುರುವು ಅವನ ಮುಖಕ್ಕೆ ಜೋರಾಗಿ ಹೊಡೆದನು. ಹೊಡೆತಕ್ಕೆ ಭಕ್ತ ನೆಲಕ್ಕೆ ಬಿದ್ದು ಹೊರಳಾಡಿದನು. ಇದೇನೆಂದು ಶಿವಗಣರೆಲ್ಲಾ ಕೇಳಲು ಮಲ್ಲಶೆಟ್ಟಿಯು ಹನ್ನೆರಡು ವರ್ಷದಿಂದ ಕಾಡುತ್ತಿದ್ದ ಭಯಂಕರ ತಲೆಶೂಲೆ ಇಲ್ಲದಂತಾಯಿತು ಎಂದು ಹೇಳುತ್ತ ಗುರುವನ್ನು ಅತಿ ಭಕ್ತಿಯಿಂದ ಸ್ತುತಿಸಿದನು."[೨] ಹೀಗೆ ರೋಗವನ್ನು ವಾಸಿ ಮಾಡುವುದರಿಂದ ಜನರ ಪ್ರೀತಿಗೆ ಪಾತ್ರರಾಗಿ ಅವರ ದೃಷ್ಟಿಯಲ್ಲಿ ಮಹಾಮಹಿಮ ಪುರುಷರು ಎನಿಸಿಕೊಂಡರು.

**೧೪. ಬಸ್ಮಲೇಪನದಿಂದ ಗಂಡ ಮಲಿಯ ಹುಣ್ಣು ಮಾಯವಾದುದು.**

ಅವಣಗೆರೆಯ ಚೆನ್ನಮಲ್ಲಯ್ಯನ ಹೆಂಡತಿಯು ಗಂಡಮಾಲಿ ಹುಣ್ಣಿನಿಂದ ಬಳಲುತ್ತಿರುವಾಗ ಚೆನ್ನಮಲ್ಲಯ್ಯ ಗುರುಧ್ಯಾನಮಾಡಿ ಬಸ್ಮವನ್ನು ಆ ಹೆಂಡತಿಯ ಕುತ್ತಿಗೆಗೆ ಸವರಲು ಹುಣ್ಣು ಮಾಯವಾಯಿತು.

**೧೫. ರೋಗಿಯಾದ ವಿಷ್ಣು ಭಕ್ತನು ನಿರೋಗಿಯಾದುದು.**

ಒಬ್ಬ ವಿಷ್ಣುಭಕ್ತನಿಗೆ ಶರೀರದಲ್ಲಿ ಹಲವು ವಿಚಿತ್ರ ಬೇನೆಗಳ ಜೊತೆಗೆ ಕುಷ್ಟರೋಗವು ಸೇರಿಕೊಂಡು, ಅವನ ಮೈಕಾಂತಿ ಶಕ್ತಿ ಎಲ್ಲವೂ ನಾಶವಾಗಿ ಪ್ರಾಣ ಬಿಡುವ ಸ್ಥಿತಿಯಲ್ಲಿರುವಾಗ ವೆಂಕಟೇಶ್ವರ ಬಳಿಗೆ ಹೋಗಿ ದಯಾನಿಧಿ ಕರುಣಿಸು ಎಂದು ಬೇಡಿಕೊಂಡಾಗ, ಆಗ ವೆಂಕಟೇಶನು ಅಪ್ಪರಲ್ಲಿ ಬಂದು 'ಬುದ್ಧಿಗೇಡಿ' ಎಲ್ಲರನ್ನು ಪಾಲಿಸುವ ದಯಾಸಾಗರ ಕೊಟ್ಟೂರು ಗುರುಬಸವನು ಕಣ್ಣಮುಂದಿರಲು ಏಕೆ ಘಾಸಿಗೊಳ್ಳುವೆ

ಎಂದು ಹೇಳಲು ಗುರು ಸನ್ನಿಧಿಗೆ ಬಂದು ಬೇಡಿಕೊಳ್ಳುತ್ತಾನೆ. ಆಗ ಅವನ ದೇಹದಲ್ಲಿ ನೆಲೆಸಿದ ರೋಗಗಳೆಲ್ಲವೂ ಬಿಟ್ಟು ಹೋಗುತ್ತದೆ.

**೧೬. ಭದ್ರಶೆಟ್ಟಿಯ ಬಂಧನ ಬಿಡಿಸಿದುದು.**

ರೆಟ್ಟಿಹಳ್ಳಿ ಭದ್ರಶೆಟ್ಟಿಯ ಸಕಲ ಸಂಪತ್ತಿನಿಂದ ಸುಖವಾಗಿದ್ದನು. ಅವನಿಗೆ ಆಗದ ಕೆಲವು ನೀಚರು ಅರಸನ ಆಳುಗಳಿಗೆ ಚಾಡಿ ಹೇಳಿದರು. ಅವರು ಶೆಟ್ಟಿಯನ್ನು ಕರೆ ತಂದು ಸೆರೆಮನೆಯಲ್ಲಿ ಹಾಕಿದರು" ಆಗ ಸೆಟ್ಟಿಯು ದುಃಖಿಸುತ್ತಾ ವಿಪತ್ಕಾಲದಲ್ಲಿ ಕಾಯುವನು ಶಿವ ಸ್ವರೂಪಿ ಕೊಟ್ಟೂರು ಗುರುಬಸವೇಶನೇ ಎಂದು ಭಾವಿಸಿ ಆತನ ನಾಮವನ್ನು ಜಪಿಸಲು ಸೆರೆಮನೆಯ ಕೀಲಿಗಳು ತಮ್ಮಿಂದ ತಾವೇ ಬಿಚ್ಚಿಬಿಟ್ಟವು. ಇದನ್ನು ತಿಳಿದ ಅರಸನು ಅಂಜಿಕೊಂಡು ಆ ಶೆಟ್ಟಿಯನ್ನು ಬಿಡುಗಡೆ ಮಾಡಿದನು.

**೧೭. ಕಿರುನಾಲಿಗೆಯನ್ನು ಸರಿ ಮಾಡಿದುದು.**

ಗುರುಬಸವ ನಾಮದ ಮಹತ್ವವನ್ನು ಹೊಗಳುತ್ತಾ ದರ್ಶನಕ್ಕೆ ಬಂದು ನಮಸ್ಕರಿಸಿದ ಭಕ್ತನ ಕಿರುನಾಲಿಗೆಯನ್ನು ರಕ್ಷಿಸಿದನು.

**೧೮. ಗರ್ಭಿಣಿ ಸ್ತ್ರೀಯ ಬೆಂದೊಡಲ ಶಾಪ ಹಿಂಗಿಸಿ ಮಗುವನ್ನು ಕರುಣಿಸಿದುದು.**

ಹಿರಿಯಕಲ್ಲು ಗ್ರಾಮದ ಶಂಕರಶೆಟ್ಟಿ ಎಂಬ "ಶಿವಭಕ್ತನ ಹೆಂಡತಿ ತುಂಬು ಗರ್ಭಿಣಿಯಾಗಿದ್ದಳು. ಆದರೂ ದಂಪತಿಗಳಲ್ಲಿ ಸಂತೋಷವಿರಲಿಲ್ಲ. ಕಾರಣ ಹಲವು ಸಲ ಗರ್ಭಿಣಿಯಾಗಿ ಒಂದು ಶಿಶುವೂ ಕೂಡ ಜೀವಂತವಾಗಿ ಹೊರಬಂದಿರಲಿಲ್ಲ. ಹೀಗಿರುವಾಗ ಅಲ್ಲಿಯ ಜನರು ಕೊಟ್ಟೂರು ಗುರುಬಸವ ಭಕ್ತರಿಗೆ ಇಷ್ಟಾರ್ಥ ಫಲಗಳನ್ನು ಕೊಡುತ್ತಾನೆಂದು ಹೇಳುತ್ತಿದ್ದರು. ಇದನ್ನು ಕೇಳಿಸಿಕೊಂಡು ಸತಿಯು ತನ್ನ ಪತಿಗೆ ತಿಳಿಸಿದಳು. ಆಗ ಅವರಿಬ್ಬರೂ ಕೊಟ್ಟೂರು ಗುರುಬಸವನ ನಾಮವನ್ನು ಜಪಿಸುತ್ತ ಹುಟ್ಟಿದ ಮಗುವಿಗೆ ಗುರುವಿನ ಹೆಸರನ್ನಿಡಬೇಕೆಂದು ಸಂಕಲ್ಪ ಮಾಡಿಕೊಂಡರು. ಆಗ ಬಸವನಾಮದ ಜಪದಿಂದ ಸುಖವಾಗಿ ಸುಕುಮಾರನನ್ನು ಹಡೆದಳು".[೨] ಆಗ ದಂಪತಿಗಳು ಆನಂದ ಭರಿತರಾಗಿ ಕುಮಾರನೊಡನೆ ಕೊಟ್ಟೂರಿಗೆ ಬಂದು ಸದ್ಗುರುವಿನ ಸೇವೆ ಮಾಡಿ ಕೃತಾರ್ಥರಾದರು.

**೧೯. ಯಮಧೂತರನ್ನು ಬೈಯ್ದು ಕೂಸನ್ನು ಮರಳಿ ತರಿಸಿದ್ದು.**

ಉತ್ತರ ದೇಶದ ಒಂದು ಗ್ರಾಮದಲ್ಲಿದ್ದ ಶಿವಭಕ್ತರಿಗೆ ಯಾವ ಕೊರತೆ ಇರಲಿಲ್ಲ. ಆದರೆ ಪುತ್ರ ಸಂತಾನವಿಲ್ಲ ಎಂಬ ಕೊರಗು ಅವರನ್ನು ಕಾಡುತ್ತಿತ್ತು. ಹೀಗಿರಲು ಕೊಟ್ಟೂರು ಗುರುಬಸವನ ಕೀರ್ತಿ ತಿಳಿದ ದಂಪತಿಗಳು. ಕೊಟ್ಟೂರು ಗುರುಬಸವನ ವ್ರತವಿಡಿದು ಪುತ್ರ ಚಿಂತನೆ ಮಾಡಿದರು. ಅದರ ಫಲವಾಗಿ ಆಕೆಗೆ ಗಂಡು ಮಗುವಾಯಿತು. ಆ ಮಗುವಿಗೆ 'ಬಸವ' ಎಂದು ಹೆಸರಿಟ್ಟರು. ಕೂಸು ಸುಖವಾಗಿ ಬೆಳೆದು ಎರಡು ವರ್ಷದ್ದಾಯಿತು. ಸಂಪದ್ಭರಿತವಾದ ದಂಪತಿಗಳು ಒಳ್ಳೆಯ ಸಂಭ್ರಮದಿಂದ ಕೂಸಿನೊಡನೆ ಗುರುದರ್ಶನಕ್ಕಾಗಿ ಕೊಟ್ಟೂರಿಗೆ ಹೊರಟರು. ಬರುವಾಗ ನಡುದಾರಿಯಲ್ಲಿ ಕೂಸು ಸತ್ತು ಹೋಯಿತು. ಅತೀ ದುಃಖಿತರಾಗಿ ಕೂಸನ್ನು ಅಲ್ಲಿಯೇ ಹುಗಿದು ಫಿರ್ಯಾದಿ ಕೊಡುವವರಂತೆ ದುಮ್ಮಾನದಿಂದಲೇ ಕೊಟ್ಟೂರು

ಗುರುಬಸವನಲ್ಲಿಗೆ ಬಂದರು. ಗುರುಬಸವನನ್ನು ಕಾಣುತ್ತಲೇ ಅಂಗಳದಲ್ಲಿ ಹೊರಳಾಡಿ ಅತ್ತರು. ಅವರ ಆರ್ತಧ್ವನಿಯನ್ನು ಕೇಳುತ್ತಲೇ ಗುರುಬಸವನು ನಿಮ್ಮ ಮಗನು ಬರುವನು ದುಃಖಿಸಬೇಡಿರಿ ಎಂದು ಅಪ್ಪಣೆ ಕೊಟ್ಟನು. ಇದು ಎಲ್ಲರಿಗೂ ಆಶ್ಚರ್ಯ ಈತನ ಪ್ರಭಾವದಿಂದ ಕೂಸಿನ ಜೀವನವನ್ನು ಒಯ್ಯುತ್ತಿದ್ದ ಯಮಧೂತರು ಹೆದರಿ ಶಿಶುವನ್ನು ಕೈಬಿಟ್ಟು ಹೋದರು. ಶಿಶುವಿಗೆ ಪುನಃ ಜೀವ ಬಂದಿತು. ಗುದ್ದಿನಲ್ಲಿದ್ದ ಕೂಸು ದೊಡ್ಡ ಧ್ವನಿಮಾಡಿ ಅಳಲು ಮೇಲಿದ್ದ ಮಣ್ಣು ಹಾರಿತು. ಇದರ ಧ್ವನಿಕೇಳಿ ಸಮೀಪದ ಜನರು ಕಂಡರು. ಭೂಮಾತೆಯೇ ಕೊಟ್ಟ ಮಗನೆಂದು ಅತ್ಯಂತ ಪ್ರೀತಿಯಿಂದ ಕೂಸನ್ನು ಕೊಟ್ಟೂರಿಗೆ ತಂದು ಗುರುವಿಗೆ ಅರ್ಪಿಸಿದರು. ಗುರುವು ಕೂಸನ್ನು ಅವರಿಗೆ ಒಪ್ಪಿಸಿದಾಗ ಎಲ್ಲರೂ ಆಶ್ಚರ್ಯದಿಂದ ಗುರುವನ್ನು ಹೊಗಳಿದರು. ಹೀಗೆ ಕೊಟ್ಟೂರು ಗುರುಬಸವನು ಸತ್ತ ಕೂಸಿಗೆ ಜೀವಕಳೆ ಕೊಟ್ಟನು ಎಂದು ಕೋಲಶಾಂತೇಶ ಮೊದಲಾದ ಶರಣರು ಹೊಗಳಿದರು.

**೨೦. ತುಂಗಭದ್ರೆಯಲ್ಲಿ ತೇಲಿ ಹೋಗುವ ಕೂಸನ್ನು ಕೈ ಚಾಚಿ ರಕ್ಷಣೆ ಮಾಡಿದ್ದು.**

"ಒಂದು ಸಲ ಗುರುಬಸವ ಕಿಕ್ಕಿರಿದು ತುಂಬಿದ ಸಭೆಯಲ್ಲಿ ಕುಳಿತಿದ್ದಾಗ ಒಮ್ಮಿಂದೊಮ್ಮೆಲೇ ಎರಡು ಕೈಗಳನ್ನು ಚಾಚಿ ತಾಯೇ ತೆಗೆದುಕೊ 'ಎಂದನು' ಕುಳಿತವರಿಗೆಲ್ಲಾ ಆಶ್ಚರ್ಯವಾಯಿತು. ಸ್ವಾಮಿ ಲೀಲಾಮೂರ್ತಿಯೇ ನಿಮ್ಮ ಲೀಲೆಯನ್ನು ತಿಳಿಯುವುದು ಹೇಗೆ ಸಾಧ್ಯ? ಈಗ ನೀವು ತೋರಿದ ಈ ಲೀಲೆಯ ವಿವರವನ್ನು ತಿಳಿಸಿ ಎಲ್ಲ ಭಕ್ತರಿಗೂ ಸಂತೋಷಪಡಿಸಿ ಕೃಪೆ ಮಾಡಬೇಕೆಂದು ಕೋಲಶಾಂತೇಶನು ಬಿನ್ನಹ ಮಾಡಿಕೊಳ್ಳಲು ಗುರುವು ಮುಗುಳ್ನಗುತ್ತ ಹೀಗೆ ಹೇಳಿದನು".[೮] ಒಬ್ಬ ಭಕ್ತಳು ತುಂಗಭದ್ರ ನದಿಯಲ್ಲಿ ಮುಳುಗಿ ಹೋಗುತ್ತಿರುವ ನನ್ನ ಕೂಸನ್ನು ಉಳಿಸೆಂದು ಕೇಳಿಕೊಳ್ಳುವಳು. ಕೂಸು ಮುಳುಗಿತು. ಆಗ ಕೂಸನ್ನು ಎತ್ತಿ ಆಕೆಗೆ ಒಪ್ಪಿಸಿದನೆಂದು ತಿಳಿಸಿದಾಗ ಸಭೆಯಲ್ಲ ಕೊಂಡಾಡಿತು.

**೨೧. ಶಿವಭಕ್ತ ದಂಪತಿಗಳಿಗೆ ಮಕ್ಕಳ ಫಲ ಕರುಣಿಸಿದ್ದು.**

ತರೂರ ಬಸವರಾಜ ಸೊಂಡೂರ ಪರವಿನಾಯಕ ಈ ಎಲ್ಲಾ ಶಿವಭಕ್ತದಂಪತಿಗಳಿಗೆ ಮಕ್ಕಳಿಲ್ಲದ ಕೊರಗು ಇರಲು ಇಚ್ಛಿಸಿದ ಫಲಗಳನ್ನು ಕೊಡುವ ಕೊಟ್ಟೂರು ಗುರು ಬಸವನನ್ನು ಮನದಲ್ಲಿ ಧ್ಯಾನಮಾಡಲು ಆತನ ಮಹಿಮೆಯಿಂದ ಅವರೆಲ್ಲಾ ಮಕ್ಕಳನ್ನು ಪಡೆದು ಸುಖೀಗಳಾದರು.

**೨೨. ಮಾತಿಗೆ ತಪ್ಪಿದ ಭಕ್ತನಿಗೆ ಪ್ರಾಯಶ್ಚಿತ್ತ ಅರಿವು ಮೂಡಿಸಿದ್ದು.**

ಗೋವಿಂದವಾಡಿಯ ಗೋವಿಂದನೆಂಬ ಬ್ರಾಹ್ಮಣನು ಒಳ್ಳೆಯ ಸಂಪತ್ತಿನಿಂದ ಕೂಡಿದ್ದನು. ಆತನಿಗೆ ಇಳಿ ವಯಸ್ಸಾದರೂ ಮಕ್ಕಳಾಗರಿಲಿಲ್ಲ. ಚಿಂತೆಯಿಂದ ಆತನು "ಕೊಟ್ಟೂರು ಗುರು ಬಸವನನ್ನು ನೆನೆಯುತ್ತಾ ಗುರುವೇ ನನ್ನ ಗಳಿಕೆಯ ಮೂರುಸಾವಿರ ಹೊನ್ನನ್ನು ನಿಮ್ಮ ಧರ್ಮ ಕಾರ್ಯಕ್ಕೆ ಕೊಡುವೆನು. ವಂಶೋದ್ಧಾರಕ ಮಗನನ್ನು ಕರುಣಿಸು ಎಂದು ಬೇಡಿಕೊಳ್ಳಲು ಅವನ ಕೋರಿಕೆಯು ಗುರುವಿಗೆ ಹೇಗೆ ಅರಿಕೆಯಾಯಿತೋ ಆ ವೃದ್ಧವಯಸ್ಸಿನಲ್ಲಿಯೂ ಬ್ರಾಹ್ಮಣನ ಹೆಂಡತಿ ಗರ್ಭಧರಿಸಿ ಗಂಡು ಮಗುವನ್ನು ಹಡೆದಳು. ದಂಪತಿಗಳು ಆನಂದದಿಂದ ಮಗುವನ್ನು ಬೆಳೆಸಿದರು. ಬ್ರಾಹ್ಮಣನು ಭಕ್ತಿಯಿಂದ ಮಗು ಮತ್ತು ಪತ್ನಿ ಸಮೇತನಾಗಿ

ಗುರುದರ್ಶನಕ್ಕೆ ಕೊಟ್ಟೂರಿಗೆ ಬಂದನು. ಬರುವಾಗ ನೀಚ ಬುದ್ಧಿಯಿಂದ ಮೂರು ಸಾವಿರ ಹೊನ್ನಿನ ಬದಲು ಮುನ್ನೂರು ಹೊನ್ನನ್ನು ನೀಡಿದನು. ಆ ತಪ್ಪಿಗೆ ದಾರಿಯಲ್ಲಿ ಕೂಸು ಸತ್ತು ಹೋಯಿತು".[೫೫] ತನ್ನ ನೀಚತನಕ್ಕೆ ತಕ್ಕ ಪ್ರಾಯಶ್ಚಿತವಾಯಿತು ಎಂದು ಕೊಂಡು ಸತ್ತ ಕೂಸನ್ನು ತೆಗೆದುಕೊಂಡು ಗುರುವಿನ ಬಳಿ ಬಂದು ಪಾದಕ್ಕೆ ಬಿದ್ದು ಮೊರೆಯಿಟ್ಟನು. ಆಗ ಗುರುವು ಆತನ ನೀಚ ಬುದ್ಧಿಯನ್ನು ಎಲ್ಲರಿಗೂ ಹೇಳಿ ಛೀಮಾರಿ ಹಾಕಿ ನಮ್ಮ ವಸ್ತುವನ್ನು ನಮಗೆ ಕೊಟ್ಟು ನಿನ್ನ ವಸ್ತುಬೇಕಾದರೆ ಒಯ್ಯಬಹುದು ಎಂದನು. ಬ್ರಾಹ್ಮಣನಿಗೆ ನಾಚಿಕೆಯಾಗಿ ಗುರುವಿನ ಮನವನ್ನು ಅರಿತು ತಪ್ಪನ್ನು ಕ್ಷಮಿಸಬೇಕೆಂದು ಬೇಡಿಕೊಂಡು ಸಂಕಲ್ಪ ಮಾಡಿಕೊಂಡಂತೆ ಎಲ್ಲ ಕಾಣಿಕೆಯನ್ನು ತಂದೊಪ್ಪಿಸಿ ಮಗನ ಜೀವವನ್ನು ಪಡೆದು ಸುಖಿಯಾಗಿದ್ದನು. ಈ ರೀತಿ ಗುರುವು ತಪ್ಪಿಗೆ ತಕ್ಕ ಶಿಕ್ಷೆವಿಧಿಸಿ ಅರಿವು ಮೂಡಿಸಿದನು.

**೨೩. ದಿಲ್ಲಿಯ ಅಕ್ಬರ್ ಚಕ್ರವರ್ತಿಯ ಅರಮನೆಯಲ್ಲಿ ತೋರಿದ ಮಹಿಮೆ.**

ಗುರುಬಸವ ದಿಲ್ಲಿಯ ಚಕ್ರವರ್ತಿ ಅಕ್ಬರನ ಅರಮನೆಯಲ್ಲಿ ತೋರಿದ ಪವಾಡ ಪುರಾಣ ಪ್ರಸಿದ್ಧವಾದುದು. ಈಗಲೂ ಕೊಟ್ಟೂರಿನ ಹಿರೇಮಠದಲ್ಲಿರುವ ಸಣ್ಣ ಖಡ್ಗವು ಅಕ್ಬರನೇ ಮೆಚ್ಚಿ ಭಕ್ತಿಪೂರ್ವಕವಾಗಿ ಕೊಟ್ಟಿದ್ದಾನೆ ಎನ್ನುವ ಪ್ರತೀತಿ ಇದೆ. ಸದ್ಗುಣವಂತನಾದ ಅಕ್ಬರನನ್ನು ಪರೀಕ್ಷಿಸಲು ಅರಮನೆಗೆ ಹೋಗಿ ಅಂತಃಪುರದ ಮಣಿಮಂಟಪದ ಮೇಲೆ ಕುಳಿತಾಗ ಇವರನ್ನು ನೋಡಿ ರಾಣಿಗೆ ಆಶ್ಚರ್ಯವಾಯಿತು. ಕೂಡಲೇ ದಾಸಿಯ ಮೂಲಕ ರಾಜನನ್ನು ಕರೆಯಿಸಿ ಸ್ವಾಮಿಯನ್ನು ತೋರಿಸಿದಳು. ರಾಜನು ಈತಯಾರಿರಬಹುದೆಂದು ಕ್ಷಣಕಾಲ ಯೋಚಿಸಿ ಕೊನೆಗೆ ಯಾರೋ ಒಬ್ಬ ಕುಟಿಲ ಮಂತ್ರಗಾರನಿರಬೇಕೆಂದು ಭಾವಿಸಿ ಇವನ ಸೊಕ್ಕನ್ನು ಇಳಿಸುವೆನೆಂದು ಖಡ್ಗಹಿಡಿದು ಮುಂದೆ ಹೋಗಬೇಕಾದರೆ ಕಾಲುಗಳು ಕೀಳದಾದವು. ಆಗ ರಾಜನಿಗೆ ಅಂಜಿಕೆಯಾಗಿ, ಸೊಕ್ಕು ಇಳಿದು ವಿವೇಕ ಉದಯವಾಯಿತು. ಈತನು ಒಬ್ಬ ಮಹಿಮಾಪುರುಷನೇ ಇರಬೇಕೆಂದು ನಿರ್ಧರಿಸಿ ನಮಸ್ಕರಿಸಿದನು. ಆಗ ಗುರುಬಸವ ಅರಸನಿಗೆ ತನ್ನ ನಿಜವಾದ ಮಹಿಮೆಯನ್ನು ತೋರಿಸಿ ಸಂತೋಷಪಡಿಸಲು ಮಂಗಳಕರವಾದ ಪರಶಿವನ ರೂಪದಲ್ಲಿ ಗೋಚರಿಸಿದನು. ದೇವ ದುಂದುಬಿಗಳು ಧ್ವನಿ ಮಾಡಿದವು. ದೇವತೆಗಳು ಹೂ ಮಳೆಗೆರೆದರು. ಇದನ್ನು ಕಂಡ ಬಾದಶಹನಿಗೆ ಭಯಭಕ್ತಿ, ವಿನಯಗಳು ಉಂಟಾಗಿ ಮನದಣಿಯೆ ಹೊಗಳಿದನು. ಆಗ ಬಾದಶಹನನ್ನು ಆನಂದದಿಂದ ನೋಡಿ ನಿನ್ನ ಭಾವನಿಷ್ಠೆಗೆ ಮೆಚ್ಚಿ ಕೊಟ್ಟೂರಿನಿಂದ ಬಂದೆವು. ನನ್ನ ಹೆಸರು 'ನಂದಿಲಿಂಗ' ಎಂದು ಹೇಳಿ ಗುರುವು ಬಯಲಾದನು. ತರುವಾಯ ಗುರುಬಸವ ನೆಲೆಸಿದ್ದ ಕೊಟ್ಟೂರು ಪುಣ್ಯಕ್ಷೇತ್ರವನ್ನು ನೋಡಲು ಅಕ್ಬರನು ಆಸೆಪಟ್ಟು ಸಕಲ ಮಂತ್ರಿ, ಆಪ್ತರನ್ನು ಕರೆದುಕೊಂಡು ಬಂದನು. ಏಳು ದಿನಗಳವರೆಗೆ ಗುರು ದರ್ಶನಕ್ಕಾಗಿ ಕಾಯ್ದು ಎಂಟನೆಯ ದಿನ ಗುರುದರ್ಶನ ಪಡೆದು ಸಂಭ್ರಮದಿಂದ ತನ್ನ ಕೈಯಲ್ಲಿದ್ದ ಖಡ್ಗವನ್ನು ಕೊಟ್ಟು ಆಶೀರ್ವಾದ ಪಡೆದನು.

**೨೪. ಕರಡಿಗೆಯಲ್ಲಿ ಲಿಂಗ ಮಾಯವಾದದ್ದು.**

ಒಮ್ಮೆ ಧಣಿಯವರ ಮನೆಯಲ್ಲಿ ಆರಾಧನೆ ನಡೆಯುತ್ತಿತ್ತು. ನೂರಾರು ಜನ ಜಂಗಮರಲ್ಲಿ ಇವರು ಸಹ ಒಬ್ಬರಾಗಿದ್ದರು. ಸ್ವಾಮಿಯನ್ನು ಭಕ್ತ ಸಮೂಹ ಸರಿಯಾಗಿ ಆಧರಿಸಲಿಲ್ಲ. ಶಿವಪೂಜೆಯ ಸಮಯದಲ್ಲಿ

ಅವರ ಕರಡಿಗೆಯಲ್ಲಿದ್ದ ಲಿಂಗವೆಲ್ಲ ಮಾಯವಾಗುತ್ತವೆ. ಆಗ ಅಲ್ಲಿರುವ ಭಕ್ತರೆಲ್ಲರು ಸ್ವಾಮಿಯ ಪಾದಕ್ಕೆ ಎರಗಿ ತಪ್ಪಾಯಿತು ಕ್ಷಮಿಸಿ ಸ್ವಾಮಿ ಎಂದು ಬೇಡಿಕೊಂಡಾಗ ಆಗ ಅವರ ಕರಡಿಗೆಯಲ್ಲಿ ಲಿಂಗ ಗೋಚರಿಸುತ್ತವೆ.

**೨೫. ಹೈದರ್‌ಗೆ ಪುತ್ರ ಸಂತಾನ ಕರುಣಿಸಿದ್ದು.**

೧೭-೧೮ನೇ ಶತಮಾನದಲ್ಲಿ ಹೈದರಾಲಿ ಚಿತ್ರದುರ್ಗ ಸಂಸ್ಥಾನದ ಮೇಲೆ ದಂಡೆತ್ತಿ ಬಂದ. ಹೀಗೆ ಬಂದಂತಹ ಸಮಯದಲ್ಲಿ ಪ್ರಯಾಣ ಮಾಡಿ ಬಂದು ಧಣಿವಾಗಿರುತ್ತದೆ. ರಾತ್ರಿವೇಳೆಯಾಗಿರುವುದರಿಂದ ತಿಪ್ಪೇರುದ್ರಸ್ವಾಮಿ ಗದ್ದುಗೆಯ ಪಕ್ಕ ಬಿಡಾರವನ್ನು ಹೂಡುತ್ತಾನೆ. ಹೀಗೆ ರಾತ್ರಿವೇಳೆಯಲ್ಲಿ ಮಲಗಿರುವಾಗ ತಿಪ್ಪೇರುದ್ರಸ್ವಾಮಿ ಹೈದರನ ಕನಸಿನಲ್ಲಿ ಬಂದು ನಿನಗೆ ಒಂದು ಗಂಡುಸಂತಾನವಾಗುತ್ತದೆ, ತುಂಬಾ ಹೆಸರುವಾಸಿಯಾದ ಮಗ ಹುಟ್ಟುತ್ತಾನೆ ಎಂದು ಹೇಳಿದರು. ಇದನ್ನು ಕೇಳಿ ಹೈದರನಿಗೆ ಆಶ್ಚರ್ಯವಾಗುತ್ತದೆ. ಪುತ್ರಸಂತಾನವಿಲ್ಲದ ಹೈದರನಿಗೆ ಈ ಮಾತನ್ನು ಕೇಳಿ ತುಂಬಾ ಸಂತೋಷವಾಗುತ್ತದೆ. ಇದಕ್ಕೆ ಪ್ರತಿಯಾಗಿ ಏನುಕೊಡಲಿ ಎಂದು ಕೇಳಿದಾಗ ಬಿಡಾರದ ಪಕ್ಕ ಗದ್ದುಗೆಯಿದೆ ಅಲ್ಲಿ ಒಂದು ಗೋರಿ ಕಟ್ಟಿಸಿಕೊಡಿ ಎಂದು ಹೇಳಿದರು. ಸ್ವಲ್ಪ ಸಮಯದ ಬಳಿಕ ಹೈದರನಿಗೆ ಸ್ವಾಮಿ ಹೇಳಿದಂತೆ ಗಂಡುಮಗು ಹುಟ್ಟಿತು. ಅದರ ನೆನಪಿಗಾಗಿ ಹೊರಮಠದಲ್ಲಿ ಗದ್ದುಗೆಯನ್ನು ಕಟ್ಟಿಸಿದ. ಹೊರಮಠ ಮುಸ್ಲಿಂ ಶೈಲಿಯಲ್ಲಿದೆ. ಇದು ಸ್ವಾಮಿ ಜೀವ ಸಮಾಧಿ ಮಠವಾಗಿದೆ. ಹೈದರಾಲಿ ಮಗನಿಗೆ 'ತಿಪ್ಪುಸಾಬ್' ಎಂದು ಹೆಸರಿಟ್ಟರು. ಅದು ಬ್ರಿಟಿಷರ ಆಡಳಿತ ಭಾಷೆಯಲ್ಲಿ 'ಟಿಪ್ಪುಸಾಬ್' ಎಂದು ಕರೆಯಲ್ಪಟ್ಟಿತು.

**೨೬. ಹರಿಜನ ಕೇರಿಗೆ ಹೋಗುವುದು.**

ಸ್ವಾಮಿಗಳು ಪ್ರತಿನಿತ್ಯ ಭಕ್ತನ ತೋಟಕ್ಕೆ ಕಪಿಲೆಬಾನಿಯ ಮೂಲಕ ನೀರನ್ನು ಆಯಿಸುವಾಗ ಕಪಿಲೆಬಾನೆ ಹರಿದು ಹೋಗುತ್ತದೆ. ಆಗ ಫಣಿಯಪ್ಪ ಸ್ವಾಮಿ ಅಜ್ಜನ ಹತ್ತಿರ ಹೋಗಿ ಹೋಲಿಸಿಕೊಂಡು ಬನ್ನಿ ನಾನು ಶಿವಪೂಜೆಗೆ ತಯಾರಿ ಮಾಡುತ್ತೀನಿ ಎಂದರು. ಆಯ್ತು ಎಂದು ತಿಪ್ಪೇಸ್ವಾಮಿ ಕಪಿಲೆಬಾನೆ ಹೊಲಿಸಿಕೊಂಡು ಬರಲು ಹೋದಾಗ ಬೇಗಾರನ ಹೆಂಡತಿ ಸ್ವಾಮಿ ಹಟ್ಟಿ ಒಳಗೆ ಬಂದೀರ ಮನೆಗೆ ಬನ್ನಿ ಪ್ರಸಾದ ಸ್ವೀಕರಿಸಿ ನಮ್ಮ ಮನೆ ಪಾವನವಾಗುತ್ತೆ ಎಂದಳು. ಆಕೆಯ ಮಾತಿಗೆ ಒಪ್ಪಿಗೆ ಸೂಚಿಸಿ ಸ್ವಾಮಿಗಳು ಅವರ ಮನೆಯಲ್ಲಿ ಶಿವಪೂಜೆಗೆ ಕುಳಿತರು. ಎಷ್ಟು ಹೊತ್ತಾದರೂ ಸ್ವಾಮಿಗಳು ಬರಲಿಲ್ಲ ಎಂದು ಹರಿಜನ ಕೇರಿಗೆ ಫಣಿಯಪ್ಪ ಬಂದಾಗ ಅಲ್ಲಿ ಸ್ವಾಮಿಗಳು ಪೂಜೆಗೆ ಕುಳಿತಿರುವುದನ್ನು ಕಾಣುತ್ತಾರೆ. ಮನೆಗೆ ಹೋಗಿ ಹೆಂಡತಿಗೆ ಸ್ವಾಮಿಗಳು ಬಂದರೆ ಮನೆಯೊಳಗೆ ಬಿಡಿಸಿಕೊಳ್ಳಬೇಡ ನಮಗೆ ತಕ್ಕುದಾದ ಶಿವನಲ್ಲ ಎಂದಾಗ ಮಾಳಮ್ಮ ಸ್ವಾಮಿಗಳು ಒಳಗೆ ಶಿವಪೂಜೆ ಕುಳಿತಿದ್ದಾರೆ ಎಂದು ಹೇಳಿದಳು. ಇದನ್ನು ಕಂಡು ಫಣಿಯಪ್ಪನಿಗೆ ಆಶ್ಚರ್ಯವಾಗುತ್ತದೆ. ಆಗ ತಪ್ಪಾಯಿತು ಸ್ವಾಮಿ ನನ್ನನು ಮನ್ನಿಸು ಎಂದು ಫಣಿಯಪ್ಪ ಬೇಡಿಕೊಳ್ಳುತ್ತಾನೆ.

**೨೭. ಬುತ್ತಿಯ ಪವಾಡ.**

ಫಣಿಯಪ್ಪನಿಗೆ ಸ್ವಾಮಿಗಳು ನಿನ್ನ ಹತ್ತಿರ ಇರುವಂತಹ ಬುತ್ತಿಯನ್ನು ಕೊಡು ಎಂದರು. ಫಣಿಯಪ್ಪ

ನನ್ನ ಹತ್ತಿರ ಬುತ್ತಿ ಸ್ವಲ್ಪಯಿದೆ ಸ್ವಾಮಿ ನನ್ನ ಗೆಳೆಯರೆಲ್ಲ ಇದ್ದೀವಿ ಎಂದರು. ಫಣಿಯಪ್ಪ ಬುತ್ತಿಯನ್ನು ನೀವೇ ತಿನ್ನಿ ಸ್ವಾಮಿ ಎಂದರು. ಸ್ವಾಮಿಗಳು ಬೇಡ ಇದ್ದುದರಲ್ಲೇ ಎಲ್ಲರು ಹಂಚಿ ತಿನ್ನೋಣ ತೆಗೆದುಕೊಂಡು ಬಾ ಎಂದು ಹೇಳಿದರು. ಬುತ್ತಿಯನ್ನು ಎಲ್ಲರಿಗೂ ಹಂಚಿದಾಗ ನಿಂಬೆಹಣ್ಣಿನ ಗಾತ್ರದಷ್ಟು ಬುತ್ತಿ ಎಲ್ಲರಿಗೂ ಬಂದಿತಂತೆ. ಫಣಿಯಪ್ಪ ಮತ್ತು ಗೆಳೆಯರು ಅಯ್ಯೋ ಊಟ ಸಾಲೋಲ್ಲ ಎಂದಾಗ ಊಟ ಮಾಡುತ್ತ ಮಾಡುತ್ತ ಬುತ್ತಿ ಒಂದಕ್ಕೆ ಎರಡು ಪಟ್ಟು ಜಾಸ್ತಿಯಾಗುತ್ತ ಹೋಗುತ್ತದೆ. ಆಗ ಎಲ್ಲರಿಗೂ ಆಶ್ಚರ್ಯವಾಗುತ್ತದೆ. ನಮ್ಮನ್ನು ಕ್ಷಮಿಸಿ ಸ್ವಾಮಿ ಎಂದು ಬೇಡಿದರು.

**೨೮. ಪುತ್ರಸಂತಾನ ಕರುಣಿಸಿದ್ದು.**

ನಿಡುಗಲ್ಲು ಸಂಸ್ಥಾನವು ಸಂಪತ್ತಿನಿಂದ ಕೂಡಿತ್ತು. ಅಲ್ಲಿನ ಜನರು ಕ್ಷೇಮವಾಗಿ ಬದುಕುತ್ತಿದ್ದರು. ಈ ಸಂಸ್ಥಾನದ ದೊರೆಗಳಿಗೆ ಮದುವೆಯಾಗಿ ೧೨ ವರ್ಷಗಳಾದರೂ ಪುತ್ರ ಸಂತಾನವಿಲ್ಲದೆ ಕೊರಗುತ್ತಿದ್ದರು. ಸ್ವಾಮಿಗಳು ಅರಮನೆಗೆ ಬಂದು ಭಿಕ್ಷೆ ಬೇಡಲು, ದಾನಸಾಲಮ್ಮ ಮೊರದಿಂದ ಮುತ್ತು ರತ್ನಗಳನ್ನು ಭಿಕ್ಷೆಗೆ ನೀಡಲು ಹೋಗುತ್ತಾಳೆ. ಆದರೆ ಸ್ವಾಮಿಗಳು ಬಂಜೆಯಿಂದ ಭಿಕ್ಷೆ ಪಡೆಯುವುದಿಲ್ಲವೆಂದು ಭಿಕ್ಷೆಯನ್ನು ನಿರಾಕರಿಸುತ್ತಾರೆ. ದುಃಖಿತಳಾದ ನಾಗತಿಯು ಸ್ವಾಮಿಗಳಿಂದ ಪುತ್ರ ಭಿಕ್ಷೆಯನ್ನು ಪಡೆಯುತ್ತಾಳೆ. ನಿಡುಗಲ್ಲಿನ ದೊರೆಗಳಿಗೆ ಏಳುಜನ ಪುತ್ರರ ಭಾಗ್ಯ ಲಭಿಸುತ್ತದೆ. ಅಂದಿನಿಂದ ನಿಡುಗಲ್ಲು ದೊರೆಗಳು ಸ್ವಾಮಿಯ 'ಗದ್ದುಗೆ'ಯನ್ನು ಪ್ರತಿಷ್ಠಾಪಿಸಿ ಆತನ ಕೃಪೆಗೆ ಒಳಗಾದರು.

**೨೯. ಮದ್ದಾನೇಶ್ವರರ ನೇತ್ರ ದೃಷ್ಟಿಯಿಂದ ಮಗು ಜನಿಸಿದ್ದು.**

ಪಂಚಗಣಾಧೀಶ್ವರರು ಬಾಗಳಿಯ ಕಲ್ಲೇಶ್ವರ ದೇವಾಲಯದಲ್ಲಿ ಉಳಿದುಕೊಂಡಿದ್ದರು. "ಶಿವಪೂಜೆಗೆ ಹೂ ಕೊಯ್ದು ತರಲಿಕ್ಕೆ ಮದ್ದಾನೆಸ್ವಾಮಿಯು ಶೃಂಗಾರ ತೋಟಕ್ಕೆ ಹೋಗಿ ಹೂ ಕೊಯ್ಯುವ ಸಮಯದಲ್ಲಿ ಮದ್ದಾನಸ್ವಾಮಿಯ ನೇತ್ರ ದೃಷ್ಟಿ ಕನಕವ್ವನ ಮೇಲೆ ಬೀಳುತ್ತದೆ. ಈ ನೇತ್ರದೃಷ್ಠಿಯಿಂದ ಕನಕವ್ವ ಗರ್ಭವತಿಯಾದಳು ಎಂಬುದು ಜನಪದರ ನಂಬಿಕೆಯಾಗಿದೆ".[೧೯] ಪುರಾಣಗಳಲ್ಲಿ ಶಿವಪಾರ್ವತಿಯರು ಆಶೀರ್ವದಿಸಿ ಕನಕವ್ವ ಮತ್ತು ಮದ್ದಾನಸ್ವಾಮಿಯರನ್ನು ಸತಿ-ಪತಿಗಳಾಗಿ ಮಾಡಿ ಅವರು ಮಗುವಿನ ಮೂಲಕ ಲೋಕಪ್ರಖ್ಯಾತಿಗೊಳಿಸುವ ಉದ್ದೇಶದಿಂದ ಕೂಡಿದೆ. ನೇತ್ರದೃಷ್ಟಿಯಿಂದ ಗರ್ಭಧರಿಸುವುದು ಇಲ್ಲಿ ಸಾಂಕೇತಿಕವಷ್ಟೆ. ಆದರ ನೆಪದಲ್ಲಿ ಅವರಿಬ್ಬರನ್ನು ಸತಿ-ಪತಿಯನ್ನಾಗಿ ಮಾಡುವ ಉದ್ದೇಶ ಮುಖ್ಯವಾಗಿದೆ. ಮದ್ದಾನಸ್ವಾಮಿಗೆ ಅಂತಹ ಒಂದು ಅದ್ಭುತ ಶಕ್ತಿಯಿರುವುದನ್ನು ಕಾಣಬಹುದು.

**೩೦. ಶಿರ ಪವಾಡ.**

ಗೋಣಿ ಬಸವರು ಸಂಚಾರ ಮಾಡುತ್ತ 'ಸಿಪ್ಪಿ' ಎಂಬ ಗ್ರಾಮಕ್ಕೆ ಬಂದರು. ಭಿಕ್ಷೆಯನ್ನು ಬೇಡಿದಾಗ ಆ ಊರಿನ ಜನರು ನಿಮ್ಮಂಥ 'ಕಾವಿ ಬಟ್ಟೆಯವರಿಗೆ ನಾವು ಭಿಕ್ಷೆಯನ್ನು ನೀಡಿದ್ದರಿಂದ ಊರು ಬಡತನದಲ್ಲಿ ಬೇಯುತ್ತಿದೆ. ಆದ್ದರಿಂದ ನಿನಗೆ ಭಿಕ್ಷೆಯನ್ನು ನೀಡುವುದಿಲ್ಲ ಎಂದು ನಿರಾಕರಿಸುತ್ತಾರೆ. ಬಸವರು ಕಾವಿಧಾರಿಗಳಿಗೆ ಭಿಕ್ಷೆ ನೀಡಿದರೆ ಬಡತನ ಬರುವುದಿಲ್ಲ ಎಂದರು. ಆದರು ಊರ ಜನರ ಪರೀಕ್ಷೆಗೆ

ಗುರಿಯಾಗುತ್ತಾರೆ. ನಮ್ಮ ಎದುರಿಗೆ ಪವಾಡ ಮಾಡಿ ತೋರಿಸು ಎಂದರು. ಬಸವನು 'ಕಾಳಿದೇವಿಯ ಗುಡಿಗೆ ಹೋಗಿ ಆಕೆಯ ಕೈಯಲ್ಲಿರುವ ಕತ್ತಿಯಿಂದ ಶಿರವನ್ನು ಕಡಿದುಕೊಂಡನು'. ಕೂಡಲೇ ಶಿರವು ಕಾಳಿದೇವಿಯ ಗುಡಿಯ ಕಟ್ಟೆಯ ಮೇಲೆ ಕುಳಿತಿತ್ತು. ಶಿರವನ್ನು ಶವಸಂಸ್ಕಾರ ಮಾಡಬೇಕೆಂದು ಸಿದ್ಧಮಾಡಿದರು. ಶಿರವನ್ನು ದೇಹದ ಜೊತೆ ಜೋಡಿಸಿ ಸುಡಲು ಸಿದ್ಧವಾದರು. ಶಿರ ಮತ್ತೆ ಕಾಳಿ ಗುಡಿ ಹತ್ತಿರ ಹೋಯಿತು. ನಂತರ ಅದನ್ನು ತಂದು ಜೋಡಿಸಿ ಸುಟ್ಟರು. ನಂತರ ಗೋಣಿ ಬಸವ ಬಿಳಿ ಕುದುರೆಯ ಮೇಲೆ ಏರಿ ಜನರಿಗೆ ದರ್ಶನಕೊಟ್ಟರು. ಆಗ ಜನ ಬಸವನಿಗೆ ಶರಣಾದರು. ಹೀಗೆ ಪವಾಡ ಮಾಡಿದ್ದರಿಂದ 'ಸಿಷ್ಟಿ' ಎಂಬ ಊರಿಗೆ 'ಶಿರ್ಸಿ' ಎಂದು ಹೆಸರಾಯಿತು.

**೩೧. ಮಗುವನ್ನು ಸಾಯಿಸಿ ಮತ್ತೆ ಜೀವ ಬರಿಸಿದ್ದು.**

ಹರಪನಹಳ್ಳಿಯಲ್ಲಿ ಮಾಟ-ಮಂತ್ರಗಳನ್ನು ಮಾಡುತ್ತಿದ್ದ ಕಾಳಿಕೊಂಡನೆಂಬ ಮಂತ್ರವಾದಿಯಿದ್ದ. ಅವನನ್ನು ಶಿವನಯ್ಯ ಕರೆಸಿ ನೀನು ಬಸವನಿಗೆ ಮಾಟ ಮಾಡಬೇಕೆಂದು ಕೇಳುತ್ತಾನೆ. ಅದಕ್ಕೆ ಕಾಳಿಕೊಂಡ ಒಪ್ಪುವುದಿಲ್ಲ ಅವನನ್ನು ಚಿತ್ರಹಿಂಸೆ ಮಾಡುತ್ತಾನೆ. ಪ್ರಾಣದ ಭಯಕ್ಕೋಸ್ಕರ ಮಾಟ ಮಾಡಲು ಕಾಳಿಕೊಂಡ ಒಪ್ಪಿಕೊಂಡ. ಇತ್ತ ಕಾಳಿಕೊಂಡನ ಹೆಂಡತಿ ನೀರು ತಂದು, ಮನೆ ಕೆಲಸ ಮುಗಿದರು ತೊಟ್ಟಿಲಲ್ಲಿರುವ ಮಗು ಏಳದೆ ಹೋದಾಗ ಮಗುವನ್ನು ನೋಡಿದ ಕೊಂಡನ ಹೆಂಡತಿ ಮಗು ತೆಗೆದುಕೊಂಡು ಕೊಂಡನಬಳಿ ಬಂದಾಗ ಮಗು ಸತ್ತಿರುವುದು ಕಾಳಿಕೊಂಡನಿಗೆ ತಿಳಿಯುತ್ತದೆ. ಮಹಿಮಾಪುರುಷ ಬಸವನ ಪ್ರಭಾವ ಎಂದು ಅರಿತ ಕಾಳಿಕೊಂಡ ಮತ್ತು ಹೆಂಡತಿ ಕಣ್ಣೀರಿಡುತ್ತಾರೆ. ಆಗ ಕಾಳಿಕೊಂಡ ಬಸವನನ್ನು ಕೈ ಮುಗಿದು ಬೇಡಿಕೊಳ್ಳುತ್ತಾನೆ. ಸ್ವಾಮಿ ನನ್ನ ಪ್ರಾಣದ ಭಯಕ್ಕಾಗಿ ನಾನು ಇಂತಹ ಪಾಪದ ಕೆಲಸ ಮಾಡಬೇಕಾಯಿತು. ನನ್ನನ್ನು ಕ್ಷಮಿಸಿ ಮಗುವನ್ನು ಬದುಕಿಸು ತಂದೆ ಎಂದು ಬೇಡಿಕೊಳ್ಳುತ್ತಾನೆ. ಆಗ ಬಸವ ಸತ್ತ ಮಗುವಿನ ಮೇಲೆ ಕರುಣೆ ತೋರಿ ಬದುಕಿಸಿದರು. ತಪ್ಪು ಮಾಡಿದವರು ಶಿಕ್ಷೆ ಅನುಭವಿಸಬೇಕು ಎಂಬುದರ ಅರಿವನ್ನು ಮೂಡಿಸಿದರು.

**೩೨. ಬೆತ್ತದಿಂದ ಹಣವನ್ನು ನೀಡಿದ್ದು.**

"ಹಿರೇಕೆರೆಯನ್ನು ಕಟ್ಟುವಾಗ ಕೆಲಸಗಾರರಿಗೆ ಕೂಲಿಯನ್ನು ಕೊಡದೆ ಕೆಲಸ ಮುಗಿದ ನಂತರ ಪ್ರತಿಯೊಬ್ಬ ಕೂಲಿಯವರನ್ನು ಕರೆದು ತಮ್ಮ ಮುಂದೆ ಇರುವ ಮಣ್ಣನ್ನು ದುಂಡಗೆ ಕುಪ್ಪೆ ಮಾಡಿರಿ ಎಂದು ಹೇಳಿ ತನ್ನಲ್ಲಿ ಇದ್ದ ಬೆತ್ತದಿಂದ ಸುತ್ತುಗೆರೆ ಎಳೆಯುತ್ತಿದ್ದನು. ನಂತರ ಕೂಲಿಯವರಿಗೆ ನಿಮ್ಮ ಕೂಲಿ ಆ ಮಣ್ಣಿನಲ್ಲಿದೆ ತೆಗೆದುಕೊಳ್ಳಿರಿ ಎಂದು ಹೇಳುತ್ತಿದ್ದನು. ಸೋಮಾರಿಗಳಿಗೆ ಏನು ಸಿಗುತ್ತಿರಲಿಲ್ಲ."[೨೨] ಯಾರು ಸಹ ಸೋಮಾರಿಗಳಾಗಿ ಜೀವನ ನಡೆಸಬಾರದು. ಒಂದಲ್ಲ ಒಂದು ರೀತಿಯ ಕಾರ್ಯವನ್ನು ಮಾಡಬೇಕು ಎಂಬ ಕಾರ್ಯತತ್ವದ ಅರಿವನ್ನು ಮೂಡಿಸಿದರು.

**೩೩. ಶಿವನಯ್ಯನ ಗರ್ವಭಂಗ ಮಾಡಿದ್ದು.**

ಶಿವನಯ್ಯನು ಗೋಣಿ ಬಸವನಿಗೆ ಮಾಟ ಮಾಡಿಸಲು ಕಾಳಿಕೊಂಡನ ಸಹಾಯದಿಂದ ಮಾಟದ

ಗೊಂಬೆಗಳಿಗೆ ಜೀವಕಳೆಯನ್ನು ತುಂಬಿ ಮಧ್ಯರಾತ್ರಿಯ ಯುಗಾದಿ ದಿವಸ ಅಮವಾಸ್ಯೆಯಂದು ಮಂತ್ರವಾದಿಯು ಎರಡು ಗೊಂಬೆಗಳನ್ನು ಮಜ್ಜನ ಬಾವಿಯಲ್ಲಿ ಹಾಕಿದನು. ಪ್ರತಿದಿನ ಗೋಣಿಬಸಪ್ಪ ಸ್ನಾನಮಾಡಲು ಹೋಗುತ್ತಿದ್ದರು. ಅಂದು ಸ್ನಾನ ಮಾಡಲು ಹೋದ ಸಮಯದಲ್ಲಿ ಗೊಂಬೆಗಳು ಭೂತಕಾರಾವಾಗಿ ಆರ್ಭಟಿಸ ತೊಡಗಿದವು. ಪೂಜಾರಿ ಕಲ್ಲಪ್ಪ ಎದುರಿದನು. ಆದರೆ ಬಸವನ ನೆರಳು ಬಿದ್ದಕೂಡಲೇ ಬಸವನ ಮುಖ ನೋಡಿದ ಕೂಡಲೇ ತಮ್ಮಲ್ಲಿಯ ಎಲ್ಲಾ ಶಕ್ತಿಯನ್ನು ಕಳೆದುಕೊಂಡವು. ಆಗ ಬಸವನ ಕಾಲಿಗೆರಗಿದವು. ಅವುಗಳನ್ನು ತೆಗೆದುಕೊಂಡು ಬಂದು ಊರ ಹೊರಗೆ ಕುಳ್ಳಿನ ಬಣವೆಯನ್ನು ಹಾಕಿ ಸುಡಲು ಮುಂದಾದರು. ಗೊಂಬೆಗಳನ್ನು ಬೆಂಕಿಯಲ್ಲಿ ಹಾಕಲು ಅವು ಸುಡದೆ ಆರ್ಭಟಿಸ ತೊಡಗಿದವು. ಬಸವ ತನ್ನ ಕೈಯಲ್ಲಿನ ಬೆತ್ತದಿಂದ ಕೊಟ್ಟೂರೇಶ್ವರನನ್ನು ನೆನೆದು ಮುಟ್ಟಿಸಿದರು. ಗೊಂಬೆಗಳು ಧಗದಗನೆ ಹತ್ತಿ ಉರಿದವು. ಆ ಬೂದಿಯಲ್ಲಿ ಮಾವಿನಕಾಯಿ ಗಾತ್ರದಷ್ಟು ಬಂಗಾರ ಸಿಗುತ್ತದೆ. ಶಿವಯ್ಯನು ಮಾಡಿದ ತಂತ್ರದಿಂದಾಗಿ ಶಿವನಯ್ಯನ ಗರ್ವಭಂಗವಾಗುತ್ತದೆ. ಅನ್ಯಾಯ, ಮೋಸವಂಚನೆ ಮಾಡಿದವರು ಶಿಕ್ಷೆಯನ್ನು, ಅವಮಾನವನ್ನು ಅನುಭವಿಸುತ್ತಾರೆ. ಮೋಸ ಮಾಡಬಾರದು ಒಳ್ಳೆಯ ದಾರಿಯಲ್ಲಿ ಬದುಕನ್ನು ನಡೆಸಬೇಕು ಎಂಬುದನ್ನು ಕಟ್ಟಿಕೊಡುತ್ತದೆ.

**೩೪. ಬೂದಿಯಿಂದ ಬೇಡರ ಕೈಕಾಲುಗಳನ್ನು ನಿಯಂತ್ರಿಸಿದ್ದು.**

ಗೋಣಿಬಸವನನ್ನು ಸಾಯಿಸಲು ಶಿವನಯ್ಯ ಬೇಡರಿಗೆ ಹೇಳುತ್ತಾನೆ. ೩೫೧ ಎಕರೆ ಭೂಮಿಯಲ್ಲಿ ನಿಮಗೆ ೧೫೧ ಎಕರೆ ಭೂಮಿಯನ್ನು ಕೊಡುತ್ತೇನೆ. ಗೋಣಿಬಸವನನ್ನು ನಾಶಮಾಡಿ ಎಂದು ಹೇಳಿದಾಗ ಹರಪನಹಳ್ಳಿಯ ಬೇಡರು ಹಣದ ಆಸೆಯಿಂದಾಗಿ ಈ ಕಾರ್ಯಕ್ಕೆ ಮುಂದಾಗುತ್ತಾರೆ. ಬಸವನನ್ನು ಕೊಲ್ಲಲು ಬೇಡರು ಬರುವಾಗ ಜೋಳಿಗೆಯಲ್ಲಿದ್ದ ಬೂದಿಯನ್ನು ಚೆಲ್ಲಿದರು. ಬೂದಿಯನ್ನು ದಾಟಿದ ಕೂಡಲೆ ಅವರ ಕೈಕಾಲುಗಳು ಮೇಲೇಳದಂತಾಗಿ ಅವರಿಗೆ ಯಾತನೆಯಾಗ ತೊಡಗಿತು. ಈ ಯಾತನೆಯನ್ನು ತಾಳಲಾರದೆ ಇದೆಲ್ಲವೂ ಗೋಣಿ ಬಸವನ ಮಹಾಮಹಿಮೆ ಎಂದು ತಿಳಿದು 'ದೇವಾ ಬಸವಾ ನಮ್ಮನ್ನು ರಕ್ಷಿಸು, ನಾವು ಮಾಡಿದ ತಪ್ಪನ್ನು ಕ್ಷಮಿಸು' ಹಣ ಮತ್ತು ಭೂಮಿಯ ಆಸೆಗಾಗಿ ಇಂತಹ ಕೃತ್ಯಕ್ಕೆ ಕೈ ಹಾಕಿದೆವು ಕ್ಷಮಿಸು ಎಂದು ಬೇಡಿಕೊಂಡರು.

**೩೫. ಹರಪನಹಳ್ಳಿ ಉಪ್ಪಾರರು ಊಟದಲ್ಲಿ ವಿಷ ಹಾಕಿದ್ದು.**

ಶಿವನಯ್ಯನು ಹರಪನಹಳ್ಳಿ ಉಪ್ಪಾರರನ್ನು ಕರೆಸಿ ಊಟದಲ್ಲಿ ವಿಷಹಾಕಿ ಕೊಲ್ಲಲು ಹೇಳಿದನು. ಹಣದ ಆಸೆಗಾಗಿ ಉಪ್ಪಾರರು ಒಪ್ಪಿಕೊಂಡರು. "ಬಸವನನ್ನು ಕೊಲ್ಲಲು ಒಂದು ಔತಣ ಕೂಟವನ್ನು ಏರ್ಪಡಿಸಿದರು. ಬಸವನಿಗಾಗಿ ವಿಷ ಮಿಶ್ರಿತ ಅಡಿಗೆಯನ್ನು ಮಾಡಿ ಊಟಕ್ಕೆ ಕರೆದರು. ಬಸವನು ಬೆಟ್ಟದ ಮಲ್ಲಯ್ಯನನ್ನು ಧ್ಯಾನಿಸುತ್ತಾ ಹೊರಟನು. ಕಪಟತನ, ದ್ರೋಹ, ಅಸೂಯೆ, ಆಸೆಗಳನ್ನು ತೊಲಗಿಸುವ ಸಲುವಾಗಿ ಮತ್ತು ಧರ್ಮವನ್ನು ಎತ್ತಿ ಹಿಡಿಯುವುದಕ್ಕಾಗಿ ಅವರ ಹಿಂದೆ ಹೊರಟನು".[೯] ಉಪ್ಪಾರರು ವಿಷ ಹಾಕಿ ಮಾಡಿದ ಅಡುಗೆಯನ್ನು ಬಸವ ಬೆಟ್ಟದ ಮಲ್ಲಯ್ಯನನ್ನು ಸ್ಮರಿಸುತ್ತಾ ಊಟ ಮಾಡಿದನು.

ಶಿವನಯ್ಯ ಬಸವನನ್ನು ಕೊಲ್ಲಲು ಮಾಡಿದ ಪ್ರಯತ್ನವೆಲ್ಲ ವಿಫಲವಾಯಿತು. ಬೇರೆಯವರಿಗೆ ಮೋಸಮಾಡಿದರೆ ಅದಕ್ಕೆ ತಕ್ಕ ಫಲ ಅವರೇ ಅನುಭವಿಸುವರು. ಮನುಷ್ಯ ಒಳ್ಳೆಯ ಆಲೋಚನೆಯನ್ನು ಮೈಗೂಡಿಸಿಕೊಂಡು ಬದುಕಬೇಕು ಎಂಬುದನ್ನು ಕುರಿತು ಹೇಳುತ್ತದೆ.

### ೩೬. ಉಪ್ಪಾರರ ಬಂಧನದಿಂದ ಹೊರ ಬಂದದ್ದು.

ಶಿವನಯ್ಯ ಬಸವನನ್ನು ಕೊಲ್ಲಲೇಬೇಕು ಎಂದು ಹಠಹಿಡಿದು ಹಲವಾರು ಯೋಜನೆಯನ್ನು ಹಾಕಿಕೊಳ್ಳುತ್ತಾನೆ. ಉಪ್ಪಾರರು ಬಸವನನ್ನು ಹಿಡಿದು ಹಗ್ಗದಿಂದ ಕಟ್ಟಿ ಹಾಕಿದ್ದರು. ನಂತರ ಶಿವನಯ್ಯನಿಗೆ ವಿಷಯ ತಿಳಿಸಿದರು. ಅತ್ಯಂತ ಸಂತೋಷದಿಂದ ಬಂದ. ಈ ಸಾರಿ ನೀನು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ ಎಂದು ಯೋಚಿಸಿದನು. ಬಸವನು ಬೆಟ್ಟದ ಮಲ್ಲಯ್ಯನನ್ನು, ಪಾತಾಳ ಗಂಗಮ್ಮನನ್ನು ಸ್ಮರಿಸಿದನು. ನನ್ನನ್ನು ಕಾಪಾಡು ಎಂದು “ಶಿವನಯ್ಯ ಉಪ್ಪಾರರಿಗೆ ಒಂದು ಚೀಲ ಸುಣ್ಣ ತರಬೇಕೆಂದು ಆಜ್ಞೆ ಮಾಡಿದನು. ಸುಣ್ಣವನ್ನು ಅದರಲ್ಲಿನ ಅರ್ಧ ತೆಗೆದು ಅದರಲ್ಲಿ ಬಸವನನ್ನು ಹಾಕಿ ಉಳಿದ ಅರ್ಧವನ್ನು ಬಸವನ ಮೇಲೆ ಸುರುವಿ ಚೀಲವನ್ನು ಬಿಗಿಯಾಗಿ ಕಟ್ಟಿ ಹರಪನಹಳ್ಳಿ ಹಿರೇಕೆರೆಗೆ ಹೊತ್ತು ತಂದರು. ಬಸವನು ಮಲ್ಲಯ್ಯನಿಗೆ ಮೊರೆಯಿಟ್ಟನು. ಉಪ್ಪಾರರು ಸುಣ್ಣದಲ್ಲಿ ಹಾಕಿದ ಚೀಲವನ್ನು ಕೆರೆಯಲ್ಲಿ ಒಗೆದರು. ಕೂಡಲೆ ಗಂಗಮ್ಮಳು ತನ್ನ ಕೈಯಿಂದ ಹಿಡಿದೆತ್ತಿ ನೀರಿಗೆ ತಾಕದಂತೆ ಮಾಡಿದಳು. ನಂತರ ಮೇಲಿನ ಸುಣ್ಣ ಕಲ್ಲಾಯಿತು. ಕೆಳಗಿನ ಸುಣ್ಣ ಒಂದು ಬಾಳೆಯ ಎಲೆಯಾಯಿತು. ಪಾತಳಿ ಗಂಗಮ್ಮ ಬಸವನನ್ನು ಒಂದು ಶಿಶುವನ್ನಾಗಿ ಮಾರ್ಪಡಿಸಿ ಬಾಳೆ ಎಲೆಯ ಮೇಲೆ ಮಲಗಿಸಿ ನೀರಿನಲ್ಲಿ ಬಿಟ್ಟಳು. ಸ್ವಲ್ಪ ಸಮಯದ ನಂತರ ತನ್ನ ನಿಜರೂಪವನ್ನು ಪಡೆದು ಕೂಲಹಳ್ಳಿಗೆ ಹಿಂತಿರುಗಿ ಸದರಿನ ಮೇಲೆ ಮಲಗಿರುತ್ತಾನೆ.”[೧೯] ಶಿವನಯ್ಯ ಬಸವ ಸತ್ತ ಎಂದು ತಿಳಿದು ಸಂತೋಷದಿಂದ ಕೂಲಹಳ್ಳಿ ತನ್ನ ವಂಶಕ್ಕೆ ಸೇರಿತು ಎಂದು ಹೋದನು. ಅಲ್ಲಿ ಬಸವನನ್ನು ಕಂಡು ಆಶ್ಚರ್ಯವಾಗುತ್ತಾನೆ. ನಾನು ಮಾಡಿದ ಎಲ್ಲಾ ಪ್ರಯತ್ನವು ವಿಫಲವಾಯಿತೆಂದು ವ್ಯಥೆ ಪಟ್ಟನು.

### ೩೭. ಕಲ್ಲು ಗಾಣದಿಂದ ಪಾರಾದದ್ದು.

ಶಿವನಯ್ಯನು ಸೈನಿಕರ ಸಹಾಯದಿಂದ ಬಸವನನ್ನು ಬಂಧಿಸಿ ಕೂಲಹಳ್ಳಿಯ ಸಂಪತ್ತನ್ನು ಚಿಗಟೇರಿಗೆ ತಂದನು. ಬಸವನ ಎದೆಯ ಮೇಲೆ ತನ್ನ ಪಾದವನ್ನು ಇರಿಸಿ ಎಲೈ ಬಸವ ಇನ್ನು ನೀನು ಬದುಕಲಾರೆ. ನಿನ್ನ ಕೊನೆಯಾಸೆ ಏನಿರುವುದು ಹೇಳು ಎಂದರು. ಬಸವ ಕೈಲಾಸದಲ್ಲಿರುವ ಶಿವ ಪಾರ್ವತಿಯನ್ನು ನೆನಪಿಸಿಕೊಳ್ಳುತ್ತಾನೆ. ನನಗೆ ಕಷ್ಟ ಮತ್ತು ವಿಪತ್ತುಗಳು ಬಂದಾಗ ನಮ್ಮನ್ನು ಸ್ಮರಿಸಿದರೆ ನಾವುಗಳು ನಿನ್ನ ಸಂಕಟಗಳನ್ನು ಪರಿಹರಿಸುತ್ತೇವೆ ಎಂದು ವಚನವಿತ್ತಿದ್ದೀರಿ, ಅದರಂತೆ ನನ್ನನ್ನು ರಕ್ಷಿಸಿ ಶಿವನಯ್ಯ ಕಲ್ಲುಗಾಣದಲ್ಲಿ ಹಾಕಿ ನನ್ನನ್ನು ಕೊಲ್ಲುವನು ಎಂದು ಬೇಡಿಕೊಂಡನು. ಬಸವನನ್ನು ರಕ್ಷಿಸುವ ಸಲುವಾಗಿ ಶಿವ ಪಾರ್ವತಿಯರು ಕಲ್ಲುಗಾಣದಲ್ಲಿ ಅವಿತುಕೊಂಡರು. ಶಿವನಯ್ಯನು ಕಲ್ಲುಗಾಣದಲ್ಲಿ ಹಾಕಿ ತಿರುವಲು ಹತ್ತಿದನು. ಇದಕ್ಕೂ ಮುಂಚೆಯೇ ಕಲ್ಲುಗಾಣದಲ್ಲಿ ಅವಿತುಕೊಂಡಿದ್ದ ಶಿವಪಾರ್ವತಿಯರು ಬಸವನಿಗೆ ಏನು ಆಗದಂತೆ ಅವನನ್ನು ಸಣ್ಣ ಶಿಶುವನ್ನಾಗಿ ಮಾರ್ಪಡಿಸಿ ಆತನನ್ನು ಎತ್ತಿಕೊಂಡು ಬಂದು ಕೂಲಹಳ್ಳಿಗೆ ಬಿಟ್ಟು ಆಶೀರ್ವದಿಸಿ ಮಾಯವಾದರು.

೩೮. ಗುರುವನ್ನು ಪಡೆದದ್ದು.

ಗೋಣಿಬಸವ ಅಳವಂಡಿಯಲ್ಲಿರುವ 'ಸಿದ್ಧಲಿಂಗಸ್ವಾಮಿ' ಎಂಬುವವರನ್ನು ಗುರುವನ್ನಾಗಿ ಪಡೆಯಲು ಹೋದಾಗ ಅವರು ನಾನು ರಥವನ್ನು ಕಟ್ಟಬೇಕೆಂದಿದ್ದೇನೆ ಅದಕ್ಕೆ ಹೊನ್ನಿಕಟ್ಟಿಗೆ ತಂದು ಕೊಡು. ನಿನ್ನ ಶಿಷ್ಯನಾಗಿ ಪಡೆಯುತ್ತೇನೆ ಎಂದರು. ಅದರಂತೆ ಆರು ಜನ ಸೇವಕರ ಜೊತೆ ಬಸವ ಮಲೆನಾಡಿನ ಹೊನ್ನೀಮರದ ವನಕ್ಕೆ ಹೋದರು. ಅಲ್ಲಿ ಮರ ಕಡಿಯಲು ಹೋದಾಗ "ಚೌಡಿ ಎಂಬ ರಾಕ್ಷಸಿಯು ವಾಸವಾಗಿದ್ದಳು. ಆ ಮರದ ಕೆಳಗೆ ಯಾವ ನರಪ್ರಾಣಿಯು ಹೋಗುವಂತಿರಲಿಲ್ಲ, ಹೋದವರು ಅಲ್ಲೇ ಸತ್ತು ಬೀಳುತ್ತಿದ್ದರು, ಅರುಮಂದಿಯನ್ನು ರಾಕ್ಷಿಸಿ ಕೊಂದಳು. ಬಸವನನ್ನು ನೋಡಿ ಆಕೆ ಸುಮ್ಮನಾದಳು. ಜೊತೆಗೆ ಇದ್ದ 'ಗಾಳಿ ಮತ್ತು ದೂಳಿ ಎಂಬ ರಾಕ್ಷಸಿಗಳು ಬಂದು ಬಸವನಿಗೆ ಶರಣಾದರು. ಅವರನ್ನು ಕೂಲಹಳ್ಳಿಗೆ ಕರೆತಂದು ದುರುಗಮ್ಮನೆಂಬ ಹೆಸರಿನಿಂದ ಮತ್ತು ಮರಿಯಮ್ಮಳೆಂಬ ಹೆಸರಿನಿಂದ ನನ್ನ ಕ್ಷೇತ್ರಕ್ಕೆ ಬೆಂಗಾವಲಾಗಿರು ಎಂದು ಆಜ್ಞೆ ಇತ್ತನು. ಪ್ರತಿವರ್ಷ ಇವರ ಜಾತ್ರೆ ನಡೆಯುತ್ತದೆ. ಚೌಡಮ್ಮನಿಗೂ ಸಹ ಇನ್ನು ನೀನು ದೇವ ಮಾನವಳಾಗು ಎಂದು ಆಜ್ಞೆ ಇತ್ತನು. ರಾಕ್ಷಸಿ ರೂಪವನ್ನು ತೊರೆದು ಕೂಲಹಳ್ಳಿ ಕ್ಷೇತ್ರಕ್ಕೆ ಬಂದು 'ಕೂಲಳ್ಳೆಮ್ಮ'ನೆಂಬ ಹೆಸರಿನಿಂದ ಪ್ರಖ್ಯಾತಳಾದಳು..."[೨೦] ನಿನ್ನ ಜಾತ್ರೆಯು ಒಂದು ಮಧ್ಯಾಹ್ನದೊಳಗೆ ಮುಗಿಯಲಿ ಎಂದು ಹರಿಸಿದನು. ಹೀಗೆ ಬಸವ ಮರವನ್ನು ಕಡಿದು ತಂದು ಅರ್ಧಭಾಗ ಗುಮ್ಮಗೋಳದಲ್ಲಿ, ಉಳಿದ ಅರ್ಧವನ್ನು ಅಳವಂಡಿಯಲ್ಲಿಡಬೇಕೆಂದು ರಾಕ್ಷಸಿಯರಿಗೆ ಹೇಳಿದನು. ಅವರು ಆ ಕೆಲಸವನ್ನು ಮಾಡಿ ಮುಗಿಸಿದರು. ಆಗ ಅಳವಂಡಿ ಸ್ವಾಮಿಗಳು ಕುಲಗುರುಗಳಾದರು. ಗುರುವಿರುವುದು ಗುಮ್ಮಗೋಳದಲ್ಲಿ ವರವಿರುವುದು ಕೂಲಹಳ್ಳಿಯಲ್ಲಿ ಎಂದು ಆಶೀರ್ವದಿಸಿದರು.

೩೯. ಶಿವನಯ್ಯನನ್ನು ನಾಶಮಾಡಿದ್ದು

ಬಸವನು ಗುಮ್ಮಗೋಳದಲ್ಲಿದ್ದಾಗ ಶಿವನಯ್ಯ ಸೈನ್ಯದೊಡನೆ ಹಮ್ಮಿಗಿಯ ದೇಸಾಯಿಯ ಜೊತೆ ಯುದ್ಧ ಮಾಡುತ್ತಾನೆ. ಬಸವ ಬೆಟ್ಟದ ಮಲ್ಲಯ್ಯನನ್ನು ಸ್ಮರಿಸಿ ದೇಸಾಯಿಯ ಮಕ್ಕಳಲ್ಲಿ ಶೌರ್ಯವನ್ನು ತುಂಬಿದನು. ಶಿವನಯ್ಯನ ವಿರುದ್ಧ ದೇಸಾಯಿಯ ಮಕ್ಕಳು ಹೋರಾಡುತ್ತಿರುವುದನ್ನು ನೋಡುತ್ತ ಕುಳಿತಿದ್ದ ದೇಸಾಯಿಯನ್ನು ಶಿವನಯ್ಯ ಮೋಸದಿಂದ ಸಾಯಿಸುತ್ತಾನೆ. ದೇಸಾಯಿಯ ಸಾವನ್ನು ಕಂಡ ಬಸವ ಕೋಪಗೊಳ್ಳುತ್ತಾನೆ. ಶಿವನಯ್ಯನನ್ನು ಬಿಡಬಾರದು ಎಂದು ಯೋಚಿಸಿ ತನ್ನ ದಿವ್ಯದೃಷ್ಟಿಯಿಂದ ನೋಡಲು ಆತನ ಮೈಯೆಲ್ಲಾ ಉರಿ ಸಂಕಟದಿಂದ ಒದ್ದಾಡುತ್ತಾನೆ. ಆಗ ಶಿವನಯ್ಯ ಬಸವನ ಬಳಿ ಬಂದು ಸ್ವಾಮಿ ನೀವು ಮಹಿಮಾ ಪುರುಷರು, ನಿಮ್ಮನ್ನು ಕಾಡಿದ್ದು ತಪ್ಪಾಯಿತು, ನನ್ನನ್ನು ರಕ್ಷಿಸು ತಂದೆ ಎಂದು ಬೇಡಿಕೊಂಡ. ಬಸವ ಇವನನ್ನು ಬಿಟ್ಟರೆ ಮುಂದೆ ತೊಂದರೆ ಆಗುತ್ತದೆ ಎಂದು ತಿಳಿದು ಸುಮ್ಮನಾದ. ಉರಿ ಸಂಕಟದಿಂದ ಬಳಲಿ ಶಿವನಯ್ಯ ಸಾವನ್ನಪ್ಪಿದ. ದೇಸಾಯಿಯ ಸಾವು ಬಸವನಿಗೆ ತುಂಬಾ ದುಃಖವನ್ನು ಉಂಟುಮಾಡಿತು. 'ಗುಮ್ಮಗೋಳದಲ್ಲಿ ನಡೆಯುವ ರಥೋತ್ಸವ ನಿನ್ನವಂಶದವರಿಂದಲೇ ನಡೆಯಲಿ. ನಿನ್ನ ವಂಶದವರೆ ನಡೆಸಿ ಕೊಡುವವರೆಗೂ ರಥ ಮುಂದಕ್ಕೆ ಹೋಗುವುದಿಲ್ಲ ಎಂದು ಆಶೀರ್ವದಿಸಿದನು. ಇಂದಿಗೂ ದೇಸಾಯಿ ವಂಶದವರಿಂದಲೇ ರಥದ ಕಾರ್ಯಕ್ರಮ ನಡೆಯುವುದನ್ನು ಕಾಣಬಹುದು. ಬಸವನನ್ನು ಕಾಡಿದ ಸಿದ್ಧರು

ಗೊಮ್ಮಗೋಳದಲ್ಲಿ ಅವರನ್ನು ಕಲ್ಲಾಗಿ ಮಾಡಿದ್ದಾನೆ. ನಂತರ ಮಲ್ಲಿಕಾರ್ಜುನ ಸ್ವಾಮಿಗಳಿಗೆ ಪಟ್ಟಕಟ್ಟಿ ಜೀವಸಮಾಧಿ ಹೊಂದಿದ'.

**೪.೫.೨. ಪ್ರಾಣಿ ಸಂಬಂಧಿ ಪವಾಡಗಳು.**

**೧. ವಿಭೂತಿ ಲೇಪನದಿಂದ ಸತ್ತ ಎಮ್ಮೆ ಬದುಕಿಸಿದ್ದು.**

ಕೊಟ್ಟೂರಿನ ಒಬ್ಬ ಭಕ್ತನ ಮನೆಯಲ್ಲಿ ಹಿಂಡುವ ಎಮ್ಮೆ ಸಾಯಲು ಅವನ ಹೆಂಡತಿ ಅದರ ಗುಣವನ್ನು ನೆನೆನೆನೆದು ದುಃಖಿಸಿದಳು. ಅದಕ್ಕೆ ಭಕ್ತನಾದ ಗಂಡನು, ಹೆಂಡತಿಯನ್ನು ಸಮಾಧಾನ ಮಾಡುತ್ತಾ ಗುರುವು ಊರ ಮಧ್ಯದಲ್ಲಿರುವಾಗ ಏಕೆ ದುಃಖಿಸಬೇಕು ಎನ್ನುತ್ತ ಬಸವ ಮಂತ್ರವನ್ನು ಉಚ್ಚರಿಸುತ್ತ ಎಮ್ಮೆಗೆ ವಿಭೂತಿ ಹಚ್ಚಲು ಎಮ್ಮೆಗೆ ಜೀವ ಬಂದಿತು.

**೨. ಗುರುವಿನ ಭಸ್ಮ ಲೇಪನದಿಂದ ಸತ್ತ ಆಕಳು ಮತ್ತು ಕರು ಬದುಕಿಸಿದ್ದು.**

ಜಂಗಮ ಆರಾಧನೆ ಮಾಡುವ ಒಬ್ಬ ಭಕ್ತನ ಮನೆಯಲ್ಲಿ ಆಕಳು ಮತ್ತು ಕರು ಎರಡು ಸಾಯಲು ಗುರುವನ್ನು ಮನಸ್ಸಿನಿಂದ ಧ್ಯಾನಿಸುತ್ತ ಬಸವ ಮಂತ್ರವನ್ನು ಉಚ್ಛರಿಸುತ್ತಾ ಭಸ್ಮವನ್ನು ಲೇಪಿಸಲು ಮೊದಲಿನಂತೆ ಅವು ಎದ್ದು ನಿಂತವು.

**೩. ಇಲಿಯು ಕಚ್ಚಿಕೊಂಡು ಹೋದ ಲಿಂಗದ ಸಂಗಡ ಚೇಷ್ಠೆ ಮಾಡಿದುದು.**

ಒಮ್ಮೆ ಹುಚ್ಚ ಸ್ವಾಮಿಯು ಲಿಂಗಧ್ಯಾನದಲ್ಲಿರುವಾಗ ಒಂದು ಇಲಿಯು ಲಿಂಗವನ್ನು ಒಯ್ದು ತನ್ನ ಬಿಲದಲ್ಲಿಟ್ಟುಕೊಂಡಿತು. ಸ್ವಾಮಿಯು ಮೂರು ದಿನಗಳಾದರು ಹಾಗೆಯೇ ಕುಳಿತನು. ಪ್ರಾಣ ಹೋದವರಂತೆ ಕುಳಿತ ಸ್ವಾಮಿಯನ್ನು ಒಬ್ಬ ಭಕ್ತ ನೋಡಿ ಗುರುವೇ ನನ್ನ ಮನೆಗೆ ದಯಮಾಡಿಸಬೇಕೆಂದು ಕೇಳಿಕೊಂಡನು. ಆಗ ಸ್ವಾಮಿಯು ಬಿಲದ ಕಡೆ ಕೈ ಮಾಡಿ ತೋರಿಸಿದನು. ಇದನ್ನು ಅರಿತ ಜಾಣ ಭಕ್ತನು ಬಿಲವನ್ನು ಅಗೆದು ಲಿಂಗವನ್ನು ತಂದುಕೊಟ್ಟನು. ಅದನ್ನು ಕೈಯಲ್ಲಿ ಹಿಡಿದು ಸ್ವಾಮಿಯೂ ಗಹಗಹಿಸಿ ನಗುತ್ತ ಇನ್ನೂ ಹುಡುಗಾಟಿಕೆ ಬಿಡಲಿಲ್ಲವೆ ನಿಂಬಕ್ಕ, ಸತ್ಯಕ್ಕ, ನುಲಿಯ ಚಂದಯ್ಯರು ನಿನಗೆ ಸರಿಯಾಗಿ ಬುದ್ಧಿ ಕಲಿಸಿದರು ಎಂದು ಲಿಂಗಕ್ಕೆ ಚೇಷ್ಟೆ ಮಾಡುವುದನ್ನು ಕಂಡು ಭಕ್ತನು ಸ್ವಾಮಿಯ ಮಹಿಮೆಯನ್ನು ನೋಡಿ ಆಶ್ಚರ್ಯಪಟ್ಟನು.

**೪. ಸಾಸಲೂರ ಬೇಡರ ದೊರೆಯ ಸತ್ತ ಕುದುರೆಗೆ ಜೀವದಾನ ಮಾಡಿದ್ದು.**

ಸಾಸಲೂರ ಬೇಡರ ದೊರೆಯು ತನ್ನ ಪ್ರೀತಿಯ ಕುದುರೆ ಸಾಯಲು ಅತಿ ದುಃಖಿತನಾಗಿ ಗುರುವಿನ ಪಾದಗಳಿಗೆ ಬಿದ್ದು ಬೇಡಿಕೊಂಡ 'ಅಶ್ವಕ್ಕೆ ಅಸ್ತುವನ್ನು ಕರುಣಿಸು' ಎಂದು ಬೇಡಲು ಗುರುವಿನ ಕೃಪ ದೃಷ್ಟಿಯಿಂದ ಕುದುರೆಗೆ ಜೀವ ಬಂತು. ಕುದುರೆಯ ಪ್ರಾಣವನ್ನು ಪಡೆದು ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಅಲ್ಲಿದ್ದ ಸಮಸ್ತರಿಗೂ ಈ ಪವಾಡವನ್ನು ನೋಡಿ ಆಶ್ಚರ್ಯದಿಂದ ಹೊಗಳಿದರು.

**೫. ಸತ್ತ ಗೂಳಿಯನ್ನು ತನ್ನತ್ತ ಬರಮಾಡಿಕೊಂಡ ಮಹಿಮೆ.**

ದೇವರ ಗೂಳಿಯೊಂದು ಸತ್ತಾಗ ಭಕ್ತರೆಲ್ಲರೂ ಉತ್ಸಾಹದಿಂದ ಅದನ್ನು ಹೂಳುವೆವೆಂದು ಗುರುವಿನಲ್ಲಿ ಕೇಳಿಕೊಂಡರು. ಗುರುವು 'ಬಸವನನ್ನು ನಮ್ಮ ಹತ್ತಿರ ಬರಲು ಹೇಳಿರಿ' ಎಂದರು. ಭಕ್ತರಿಗೆಲ್ಲಾ

ಆಶ್ಚರ್ಯವಾಯಿತು. ಗುರು ಮಹಿಮೆ ಏನಿದೆ ಎಂಬುದನ್ನು ತಿಳಿಯಲು ಆ ಗೂಳಿಯನ್ನು ಮೈ ತೊಳೆದು ಬಸ್ಮ, ಗಂಧ ಹಚ್ಚಿ ಶೃಂಗಾರ ಮಾಡಿ ಪೂಜಿಸಿ ಮಂಗಳ ವಾದ್ಯಗಳನ್ನು ಭಾರಿಸುತ್ತ ಉಘೇ -ಚಾಂಗು-ಬಲಾ ಎನ್ನುತ್ತಾ ನಂದಿನಾಥ ಬಸವರಾಜನು ನಿಮ್ಮನ್ನು ಬರಲಿಕ್ಕೆ ತಿಳಿಸಿರುವನು ಏಳು ಎನ್ನುತ್ತಲೇ, ಆ ಗೂಳಿಯು ತಕ್ಷಣ ಎದ್ದುನಿಂತು ಅತ್ತಿತ್ತ ಹಾರುತ್ತ ಚಲ್ಲಾಟ ಆಡುತ್ತಾ ಗುರುವಿನ ಬಳಿಗೆ ಬಂದಿತು. ಗೂಳಿ ಬರುವುದನ್ನು ದೂರದಿಂದಲೇ ಕಂಡು ಆನಂದಿತನಾಗಿ ಸಮೀಪಕ್ಕೆ ಕರೆದು ಆಲಂಗಿಸಿ, ಮುದ್ದುಕೊಟ್ಟು ಮನ್ನಿಸಿದನು. ಇದನ್ನು ನೋಡಿದ ಕೋಲಶಾಂತೇಶ ಮುಂತಾದ ಭಕ್ತರು ಗುರುಬಸವನ ಮಹಿಮೆಯನ್ನು ಕೊಂಡಾಡಿದರು.

**೬. ಹಾವು ಕಚ್ಚಿದ ಬಿಲಗೂರ ಲಿಂಗಣ್ಣನಿಗೆ ಬಸ್ಮಲೇಪನದಿಂದ ವಿಷ ಇಳಿಸಿದ್ದು.**

ಬಿಲಗೂರ ಲಿಂಗಣ್ಣನೆಂಬ ಭಕ್ತನಿಗೆ ನಾಗರಹಾವು ಕಚ್ಚಲು ಹೆದರದೇ ಗುರುಬಸವೇಶನ ನಾಮಸ್ಮರಣೆಯನ್ನು ಮಾಡಿ ಭಸ್ಮವನ್ನು ಲೇಪಿಸಲು ವಿಷವೆಲ್ಲಾ ಇಳಿದು ಯಾವ ತೊಂದರೆಯಾಗಲಾರದೆ ಸುಖವಾಗಿದ್ದನು.

**೭. ಜಂಗಮನನ್ನು ಮದ್ದಾನೆಯಿಂದ ರಕ್ಷಿಸಿದ್ದು.**

ಹೊಳಲ್ಕೆರೆಯ ಒಬ್ಬ ಗರ್ವಿಷ್ಟನಾದ ಸೆರೆಕುಡುಕನು ಒಬ್ಬ ಜಂಗಮನ ಮೇಲೆ ಮದ್ದಾನೆ ನೂಕಲು ಜಂಗಮನು ಕರುಣಿಸು ಗುರು ಬಸವೇಶ ಈ ಕಷ್ಟವನ್ನು ಪರಿಹರಿಸು ಎಂದು ಬೇಡಿದ ಕೂಡಲೇ ಆನೆಯು ಅಂಜಿ ಬೆದರಿ ಬಿಟ್ಟಿತು.

**೮. ಗುರುವು ನೆಲಕಚ್ಚಿದ ಎತ್ತನ್ನು ಮೇಲೆ ಎಬ್ಬಿಸಿದ್ದು.**

ವ್ಯಾಪಾರಸ್ಥರೊಡನೆ ಒಬ್ಬ ಭಕ್ತನು ಎತ್ತುಗಳನ್ನು ತರಲು ದ್ವಾರಕಗೆ ಹೋಗಿದ್ದನು. ಎತ್ತುಗಳನ್ನು ಕೊಂಡು ತರುವಾಗ ದಾರಿಯಲ್ಲಿ ಮೇಯಿಸುತ್ತಾ ನಿಂತಾಗ, ಒಂದು ಹೋರಿಯೊಡನೆ ಭಕ್ತನ ಎತ್ತು ಕಾದಾಡಿ ಶಕ್ತಿಗುಂದಿ ನೆಲಕ್ಕೆ ಬಿದ್ದಿತು. ಎಷ್ಟು ಎಬ್ಬಿಸಿದರೂ ಏಳಲಿಲ್ಲ. ಮುಂದೇನೆಂದು ಭಕ್ತನು ಚಿಂತಿಸಲು, ದಯಾನಿಧಿ ಬಸವರಾಜನು ತಾನೇ ಬಂದು ಎತ್ತನ್ನು ಎಬ್ಬಿಸಿ ಭಕ್ತನನ್ನು ಸಮಾಧಾನಗೊಳಿಸಿದನು. ಯಾರೂ ಇಲ್ಲದ ಈ ಅಡವಿಯಲ್ಲಿ ಸಹಾಯ ಮಾಡಿದರು ಯಾರಿರಬಹುದೆಂದು ಕೇಳಲು ನಗುತ್ತಾ ನಿನ್ನ ಸಂಕಟವನ್ನು ದೂರಮಾಡಲು ನಾನು ಕೊಟ್ಟೂರಿನಿಂದ ಬಂದೆನು. ನಾನೇ 'ನಂದಿಲಿಂಗ' ಎಂದು ಹೇಳಿ ಬಯಲಾದನು.

**೯. ಹಾವು ಹಿಡಿದು, ಬಾಲದಿಂದ ಬಂಗಾರ ಪಡೆದದ್ದು.**

ಅಸ್ಥಿರವಾದ ಒಬ್ಬ ಬಡ ಭಕ್ತನು ಆಸೆಪಟ್ಟು ಗುರುವನ್ನು ಕಂಡು ಈಗ ನಾನು ಧನವನ್ನು ಬೇಡಿದರೆ ನನಗೆಷ್ಟು ಕೊಡುವನೋ ಎಂದು ಮನದಲ್ಲಿ ಅಂದುಕೊಂಡು ಶಂಕಿಸುತ್ತಾ ಗುರುವಿನ ಬಳಿಗೆ ಒಂದು "ದೇವಾ ನಾನು ಬಹು ದರಿದ್ರನು; ಈ ದಾರಿದ್ರ್ಯದಿಂದ ನೀಚ ಕರ್ಮಗಳಿಂದ ಹೊಟ್ಟೆ ಹೊರೆಯಲು ದಾರಿಕಾಣದೆ ಹೇಸಿ ಬಂದಿರುವೆನು. ಹಿಂದೆ ಆನಿನ್ನ ಭಕ್ತರಿಗೆ ಹೊನ್ನಿನ ಮಳೆ ಸುರಿಸಿದಂತೆ ನನಗೂ ಕರುಣಿಸು ದೇವಾ; ಎಂದು ಬೇಡಿಕೊಳ್ಳಲು. ಅದಕ್ಕೆ ಗುರು ನಗು ಮುಖದಿಂದ ಈ ರಾತ್ರಿ ನಿನ್ನ ಮನೆಗೆ ಬಂದುದನ್ನೇ ಹೊನ್ನಿನ ಮಳೆ ಎಂದು ತಿಳಿ ಹೋಗು ಎನ್ನಲು, ಭಕ್ತನು ಹಿಗ್ಗಿ ಗುರುವಿಗೆ ನಮಿಸಿ ಮನೆಗೆ ಬಂದನು. ದಿನ

ರಾತ್ರಿಯೆಲ್ಲ ಹೊನ್ನಿನ ದಾರಿಯನ್ನು ಕಾಯ್ದು ಬೇಸತ್ತು ಕಡೆಗೆ ರಾತ್ರಿ ಒಂದು ಗಳಿಗೆ ಇದ್ದಾಗ ಹೊನ್ನೇ ಬರಲಿಲ್ಲವಲ್ಲ ಎಂದು ಮರುಗುತ್ತಿರುವಾಗ ಘೋರವಾದ ಒಂದು ಸರ್ಪ ಹರಿದು ಬಂತು. ಅಯ್ಯೋ ಮಾರಿ ಬಂದಿತಲ್ಲಾ. ಗುರುವು ಮರಣವನ್ನು ತಂದನಲ್ಲ ಎಂದು ನಿಶ್ಚೇತನನಾಗಲು ಸರ್ಪವು ಹೋರಿನ ಕಡೆಗೆ ಹರಿಯುತ್ತಿತ್ತು. ಆಗ ವಿವೇಕ ಬಂದು ಗುರುವಿನ ವಚನ ಸುಳ್ಳಾದೀತೆ? ಹೊನ್ನೇ ಹಾವಿನ ರೂಪದಲ್ಲಿ ಬಂದಿರಬೇಕು ಎನ್ನುತ್ತಾ ತುದಿ ಮಾತ್ರ ಉಳಿದಿದ್ದ ಅದರ ಬಾಲವನ್ನು ಹಿಡಿದು ಜಗ್ಗಲು ಅಷ್ಟೇ ಕತ್ತರಿಸಿ ಬಂದಿತು. ಆ ಬಾಲವೆ ಬಂಗಾರವಾಯಿತು. ತನ್ನ ಅಸ್ಥಿರ ಮನಸ್ಸನ್ನು ತಾನೇ ನಿಂದಿಸಿಕೊಳ್ಳುತ್ತಾ ಗುರುವಿನ ಒಳಗೆ ಹೋಗಿ, ದೇವಾ ನಿನ್ನ ಆಶೀರ್ವಾದದಿಂದ ಇಷ್ಟೇ ಹೊನ್ನು ದೊರಕಿತು."[೨೫] ಎಂದು ಅದನ್ನು ತೋರಿಸಲು, ಗುರುವು ನಕ್ಕು, ಅಷ್ಟೇ ಸಾಕು ಹೋಗು ಹೆಚ್ಚಿನ ಆಸೆ ಬೇಡ ಎಂದು ಕಳುಹಿಸಿದನು. ಹೀಗೆ ಅವರ ಕರ್ಮಾನುಗತ ಫಲಗಳಿಗೆ ಸರಿಯಾಗಿ ಅಷ್ಟಷ್ಟೆ ಫಲಗಳನ್ನು ಕೊಡುವ ಗುರುವಾಗಿದ್ದನು.

**೧೦. ಸತ್ತೆಮ್ಮೆ ಹಾಲು ಕರೆದದ್ದು.**

ಶ್ರೀಗಳು ಒಂದು ದಿನ ಶಿವಾರ್ಚನೆಯನ್ನು ಮುಗಿಸಿ ಸ್ವಾಮಿಗಳು ಮಾಳಮ್ಮನನ್ನು ಸ್ವಲ್ಪ ಕುಡಿಯಲು ಹಾಲು ಕೊಡಮ್ಮ ಇಂದೇಕೋ ಹಸಿವಿಲ್ಲ ಎಂದು ಕೇಳುತ್ತಾರೆ. ಮಾಳಮ್ಮ ಹಾಲು ಕೊಡಲು ನಿರಾಕರಿಸಿ ಏನುರೋಗ ಆಗಿತ್ತೋ ಏನೋ ಇವತ್ತು ಎಮ್ಮೆ ಹಾಲು ಕರೆದಿಲ್ಲ ಎಂದು ಹೇಳುತ್ತಾಳೆ. ಸ್ವಾಮಿಗಳು ಹಾಗೆ ಆಗಲಿ ಬಿಡಮ್ಮ ಎಂದು ಹೇಳಿ ಹೋದರು. ಸ್ವಲ್ಪ ಸಮಯದ ಬಳಿಕ ಕೊಟ್ಟಿಗೆಯಲ್ಲಿ ಕಟ್ಟಿದ್ದ ಎಮ್ಮೆ ಇದ್ದಕ್ಕಿದ್ದಂತೆ ಕೆಳಗೆ ಬಿದ್ದು ಪ್ರಾಣ ಬಿಟ್ಟಿತು. ಇದನ್ನು ಕಂಡು ಫಣಿಯಪ್ಪನ ಹೆಂಡತಿಗೆ ಆಶ್ಚರ್ಯವಾಗುತ್ತದೆ. ಸ್ವಾಮಿ ನಾನು ಮಾಡಿದ್ದು ತಪ್ಪಾಯಿತು, ನನ್ನನ್ನು ಕ್ಷಮಿಸು ಎಂದು ಬೇಡಿಕೊಂಡಾಗ ಸತ್ತ ಎಮ್ಮೆಯನ್ನು ಬದುಕಿಸಿದರು.

**೧೧. ಉಗ್ರಸರ್ಪ ಹಗ್ಗವಾಗುವುದು**

ಕೋಲಶಾಂತಯ್ಯನು ತನ್ನ ಅನೇಕ ಪವಾಡಗಳನ್ನು ಮೆರೆದವುಗಳಲ್ಲಿ ಉಗ್ರ ಸರ್ಪವನ್ನು ಕೂಡ ಹಗ್ಗವನ್ನಾಗಿ ಮಾಡಿರುವುದು ಒಂದು.

**೧೨. ಹುಲಿಗಳನ್ನು ಹೂಡಿ ಬೇಸಾಯ ಮಾಡಿದ್ದು.**

ಗೋಣಿಬಸಪ್ಪ ಚಿಕ್ಕಹಳ್ಳಿ ಗೌಡ್ರ ಮನೆಯಲ್ಲಿ ಕೆಲಸಕ್ಕಿದ್ದ. ಸೋಮವಾರದಂದು ಬೇಸಾಯಕ್ಕೆ ಎತ್ತುಗಳನ್ನು ಹೂಡಬಾರದೆಂಬ ಸಂಪ್ರದಾಯವಿದೆ. ಹೀಗಿರುವಾಗ ಗೋಣಿಬಸಪ್ಪ ನಾನು ಋಣಭಾರದ ಅನ್ನವುಣ್ಣಲಿಕ್ಕೆ ಆಗುವುದಿಲ್ಲವೆಂದು ಯೋಚಿಸಿ ಶಿವಧ್ಯಾನದಿಂದ ಹುಲಿಗಳನ್ನೇ ಪಳಗಿಸಿ ನೊಗಕ್ಕೆ ಹೂಡಿ ಕಾಳ ಸರ್ಪವನ್ನೇ ಮಿಣಿ, ಬಾರಿಕೋಲನ್ನು ಮಾಡಿಕೊಂಡು ಬೇಸಾಯ ಮಾಡಿದ. ಇದನ್ನು ಕಂಡಂತಹ ಚಿಕ್ಕಹಳ್ಳಿಯ ಗೌಡ್ರಿಗೆ ಆಶ್ಚರ್ಯವಾಗುತ್ತದೆ. ಈತ ಸಾಮಾನ್ಯನಲ್ಲ, ಮಹಾ ಮೇಧಾವಿ ಎಂದು ತಿಳಿದು ಕ್ಷಮೆಯಾಚಿಸಿದರು. ಗೋಣಿಬಸಪ್ಪ ಬಳಸುತ್ತಿದ್ದ ಕುಡುಗೋಲು ಇವತ್ತಿಗೂ ಮದ್ದಾನಸ್ವಾಮಿ ಮಠದಲ್ಲಿರುವುದನ್ನು ಕಾಣಬಹುದು.

## ೧೩. ಕರುವಿನ ಕೋಟೆಯಲ್ಲಿ ಸತ್ತ ಎಮ್ಮೆ ಬದುಕಿಸಿದ್ದು.

ಗೋಣಿಬಸಪ್ಪ ಹೊಳಲ್ ಮಾರ್ಗದಿಂದ ಕೋಟೆ ಎಂಬ ಗ್ರಾಮಕ್ಕೆ ಭಿಕ್ಷಾಟನೆಗೆಂದು ಹೊರಟನು. ಎಮ್ಮೆಯನ್ನು ಮೇಯಿಸುತ್ತಿದ್ದ ಹೆಂಗಸೊಬ್ಬಳನ್ನು ಜಂಗಮ ವೇಷಧಾರಿಯಾದ ಗೋಣಿಬಸವ ಅವಳ ಹತ್ತಿರ ಬಂದು ಅಮ್ಮ ನಾನು ಬಹುದೂರದಿಂದ ಬಂದಿರುವೆನು. ಹಸಿವಾಗಿದೆ ಬುತ್ತಿಕೊಡು ಎಂದು ಕೇಳುತ್ತಾರೆ. ಹೆಂಗಸು ಊರು ಹತ್ತಿರಯಿದೆ, ಹೋಗಿ ಅಲ್ಲಿ ನಮ್ಮ ಮನೆಯಿದೆ. ಹಸಿವಾಗಿದೆ ಎಂದು ಕೇಳಿ ಭಿಕ್ಷೆ ಹಾಕುತ್ತಾರೆ ಎಂದು ಸಮಾಧಾನ ಹೇಳಿ ಕಳುಹಿಸುತ್ತಾಳೆ. ಊರಿಗೆ ಬಂದ ಗೋಣಿ ಬಸಪ್ಪನಿಗೆ ಯಾರು ಭಿಕ್ಷೆಯನ್ನು ಹಾಕುವುದಿಲ್ಲ. ಹೀಗಾಗಿ ಹಸಿವು ಮತ್ತು ಬಿಸಿಲಿನಿಂದ ಬಳಲಿದ ಇವರು ಊರಿನ ಪಕ್ಕದ ಕಳ್ಳಿಮರದ ಕೆಳಗೆ ಕುಳಿತುಕೊಂಡನು. ಸ್ವಲ್ಪ ಸಮಯದಲ್ಲಿ ಬಸವನ ದೃಷ್ಟಿ ಊರ ಹೊರಗೆ ಮೇಯುತ್ತಿದ್ದ ಎಮ್ಮೆಯ ಮೇಲೆ ಬಿತ್ತು. ಇವರ ದೃಷ್ಟಿಯಿಂದ ಎಮ್ಮೆ ಸತ್ತು ಬಿದ್ದಿತು. ಆಗ ಹೆಂಗಸು ಓಡೋಡಿ ಮನೆಗೆ ಬಂದು ವಿಷಯ ತಿಳಿಸಿದಳು. ಮನೆಯ ಯಜಮಾನರೆಲ್ಲ ಹುಡುಕಿಕೊಂಡು ಬಂದು ಈ ವ್ಯಕ್ತಿ ಸಾಮಾನ್ಯ ವ್ಯಕ್ತಿಯಲ್ಲ, ಮಹಾನ್ ಪುರುಷ ಎಂದು ತಿಳಿದು ಪಾದಗಳನ್ನು ಗಟ್ಟಿಯಾಗಿ ಹಿಡಿದು ಬೇಡಿಕೊಂಡರು. ಸ್ವಾಮಿಗಳು ಸತ್ತು ಬಿದ್ದಿದ್ದ ಎಮ್ಮೆಯನ್ನು ಮೂರು ಸಲ ಸುತ್ತುವರೆದು ತನ್ನ ಕೈಯಲ್ಲಿದ್ದ ಬೆತ್ತದಿಂದ ಬೆಟ್ಟದ ಮಲ್ಲೇಶ್ವರನನ್ನು ನೆನೆಯುತ್ತ ಎಮ್ಮೆಯ ಮೈ ತಡವಿದನು. ಆಗ ಎಮ್ಮೆಗೆ ಜೀವಬಂತು.

## ೧೪. ಶಿಕಾರಿಪುರ ಗ್ರಾಮದಲ್ಲಿ ಹುಚ್ಚುನಾಯಿ ಪವಾಡ.

ಗೋಣಿಬಸವ ಭಿಕ್ಷೆ ಬೇಡುತ್ತಾ ಮಲೆಬೆನ್ನೂರು ಮಾರ್ಗವಾಗಿ ಶಿಕಾರಿಪುರವೆಂಬ ಗ್ರಾಮಕ್ಕೆ ಹೋಗುವರು. ಅಲ್ಲಿ ಗೋಣಿಬಸವರು ಭಿಕ್ಷೆ ಬೇಡಲು ಆರಂಭಿಸಿದರು. ಊರಿಗೆ ದಾರಿದ್ರ ಬಂದಿತ್ತು. ಒಪ್ಪತ್ತಿನ ಊಟಕ್ಕೂ ಸಹ ಗತಿಯಿಲ್ಲದಂತಾಯಿತು. ಜನರು ಕಾಡು ಮೃಗಗಳನ್ನು ಬೇಟೆಯಾಡಿ ಅದೇ ಮೃಗದ ಮಾಂಸವನ್ನು ಆಹಾರವಾಗಿ ಉಪಯೋಗಿಸುತ್ತಿದ್ದರು. ನಿಮ್ಮಂಥ ಶೀಲವಂತ ಜಂಗಮರಿಗೆ ಭಿಕ್ಷೆಯನ್ನು ನೀಡಲು ನಮ್ಮಲ್ಲಿ ಮಾಂಸ ಬಿಟ್ಟರೆ ಬೇರೇನೂ ಸಿಗಲಾರದು ಎಂದರು.

ಬಸವನಿಗೆ ಈ ಊರಿನಿಂದ ನಾನು ಹೇಗಾದರೂ ಮಾಡಿ ಭಿಕ್ಷೆಯನ್ನು ತೆಗೆದುಕೊಂಡು ಹೋಗಲೇಬೇಕೆಂದು ದೃಢ ನಿರ್ಧಾರ ಮಾಡಿಕೊಂಡು ಜನರ ಮನದಲ್ಲಿ ಏನಿದೆ ಎಂದು ಅರಿತರು. ಅವರನ್ನು ಪರೀಕ್ಷಿಸಬೇಕೆಂದು ನಿರ್ಧರಿಸಿ ಇಲ್ಲ ಎನ್ನದೆ ಭಿಕ್ಷೆಯನ್ನು ನೀಡಿ ಎಂದರು. ಊರಿನ ಜನರೆಲ್ಲ ಮಾತಾಡಿಕೊಂಡು ಜಂಗಮರಿಗೆ ಮಾಂಸವನ್ನೇ ಭಿಕ್ಷೆಯ ರೂಪದಲ್ಲಿ ನೀಡಬೇಕೆಂದು ನಿರ್ಧರಿಸಿದರು. ಗೋಣಿಬಸಪ್ಪ ಇದೆಲ್ಲವನ್ನು ಅರಿತು ಅಲ್ಲಿಯೇ ಸತ್ತು ಬಿದ್ದಿರುವ ನಾಯಿಯನ್ನು ಬದುಕಿಸಿ ಅದರ ದೇಹದಲ್ಲಿ ಸೇರಿಕೊಂಡನು. ಅಷ್ಟರಲ್ಲಿ ಊರಿನ ಜನರೆಲ್ಲ ಮಾಂಸವನ್ನೇ ತಂದು ಜಂಗಮನ ಜೋಳಿಗೆಯಲ್ಲಿ ಹಾಕಲು ಬಂದರು. ಆಗ ಹುಚ್ಚುನಾಯಿಯು ನಮ್ಮನ್ನು ಬೆನ್ನಟ್ಟಿಕೊಂಡು ಕಡಿಯಲು ಬರುತ್ತದೆ ಎಂದು ತಿಳಿದು ಕೈಯಲ್ಲಿದ್ದ ಮಾಂಸವನ್ನು ಕೆಳಕ್ಕೆ ಎಸೆದು ಓಡುತ್ತಿದ್ದರು. ಹುಚ್ಚುನಾಯಿ ಮಾಂಸವನ್ನು ತಿಂದು ಜನರನ್ನು ಕಚ್ಚಲು ಪ್ರಾರಂಭಿಸಿತು. ಆಗ ಜನ ಜಂಗಮನ ಹತ್ತಿರ ಬಂದು ಸ್ವಾಮಿ ನಮ್ಮನ್ನು ರಕ್ಷಿಸು ಎಂದು ಬೇಡಿಕೊಂಡರು.

ನಾಯಿಯ ಹುಚ್ಚು ಮಾಯವಾಗಿ ಜಂಗಮನ ಪಾದಕ್ಕೆರಗಿತು. ಆಗ ಜನರು ನಾವು ಜಂಗಮನನ್ನು ನಿಂದಿಸಿದ್ದಕ್ಕೆ ಈಗೆಲ್ಲ ಆಯಿತು. ನಮ್ಮನ್ನು ಕ್ಷಮಿಸು ಎಂದು ಸ್ವಾಮಿಯ ಪಾದಕ್ಕೆ ಎರಗಿದರು. ಇದರ ಪ್ರತೀಕವಾಗಿ ಶಿಕಾರಿಪುರದಲ್ಲಿ ಹುಚ್ಚುರಾಯನ ಮಠವಿರುವುದನ್ನು ಕಾಣಬಹುದು.

**೧೫. ಬಾಗಳಿಯಲ್ಲಿ ಭಿಕ್ಷಾಟನೆ ಮಾಡಿದ್ದು.**

ಜಂಗಮರ ಒಪ್ಪಿಗೆಯಿಲ್ಲದೆ ಬಾಗಳಿಯಲ್ಲಿ ಭಿಕ್ಷಾಟನೆ ಮಾಡುತ್ತಾನೆ, ಅದರ ತಪ್ಪಿಗೆ ಬಸವನ ಮೇಲೆ ತಪ್ಪುಹೊರಿಸಿ ಪಂಚಾಯ್ತಿಗೆ ಕರೆಸುತ್ತಾರೆ. ಆಗ ಗೋಣಿಬಸವ ಹುಲಿಯ ಮೇಲೆ ಕುಳಿತು ಪಂಚಾಯಿತಿಗೆ ಬರುತ್ತಾನೆ. ಇದನ್ನು ಕಂಡು ಜನ ಆಶ್ಚರ್ಯವಾಗಿ ದಿಕ್ಕಪಾಲಾಗಿ ಓಡುತ್ತಾರೆ. ಊರಿನ ಜನರೆಲ್ಲ ಗೋಣಿಬಸವನಿಗೆ ಶರಣಾದರು. ಇದರ ಪ್ರತೀಕವಾಗಿ ಬಾಗಳಿಯ ಬಡಗಿಯರು ಪ್ರತಿವರ್ಷ ರಥವನ್ನು ಕಟ್ಟುತ್ತಾರೆ.

**೧೬. ಹಾವುಕಚ್ಚಿ ಸತ್ತಿದ್ದ ಮಗನನ್ನು ಬದುಕಿಸಿದ್ದು.**

ಬಂಡ್ರಿಯಲ್ಲಿ ಕೊರವರ ದುರುಗಜ್ಜನ ಮಗನು ಹಾವು ಕಚ್ಚಿ ಸತ್ತಿರುತ್ತಾನೆ. ಆಗ ಗೋಣಿಬಸವ ಅವನನ್ನು ಬದುಕಿಸಿ ಪ್ರಾಣಭಿಕ್ಷೆ ನೀಡುತ್ತಾನೆ. ಕೊರವರು ಮಠದ ಕಸವನ್ನು ಬಳಿಯಲು ಪ್ರತಿ ವರ್ಷ ಕಸಬರಿಗೆಯನ್ನು ಕಟ್ಟಿ ಕೊಡುವ ಪ್ರತೀತಿಯಿದೆ. ಹೀಗೆ ಮಾಡುವುದರ ಮೂಲಕ ಅವರನ್ನು ಒಕ್ಕಲುಗಳಾಗಿ ಮಾಡಿಕೊಂಡರು.

**೧೭. ಗೂಳಿಯ ರೂಪದರಿಸಿದ್ದು.**

ಹೊಳಲು ಗ್ರಾಮದಲ್ಲಿ ಬಸವನು ಗೂಳಿಯ ರೂಪಧರಿಸಿ ಸೊಪ್ಪೆಯನ್ನು ತಿಂದು ಪವಾಡ ಮಾಡಿದರು.

**೧೮. ಹಾವಾಗಿ ಹಾಲು ಕುಡಿದಿದ್ದು.**

ಗೋಣಿಬಸವ ಹಾವನೂರಿನಲ್ಲಿ ಹಾವಾಗಿ ಹಾಲು ಕುಡಿದಿದ್ದರಿಂದ ಆ ಊರಿಗೆ ಹರನೆಂಬ ಹೆಸರು ಹೋಗಿ ಹಾವನೂರಾಯಿತು.

**೪.೫.೩. ಸ್ಥಳ ಸಂಬಂಧಿ ಪವಾಡಗಳು**

ಪವಾಡಗಳು, ಸ್ಥಳಗಳ ಜೊತೆ ಸಂಬಂಧವನ್ನು ಹೊಂದಿರುತ್ತವೆ. ನಿರ್ಧಿಷ್ಟ ಸ್ಥಳಗಳಲ್ಲಿ ನಡೆಯುವಂತಹ ಪವಾಡಗಳು ಸ್ಥಳಗಳ ಮಹತ್ವವನ್ನು ಕಟ್ಟಿಕೊಡುತ್ತವೆ. ಒಂದು ಸ್ಥಳದ ಚಾರಿತ್ರಿಕ ದಾಖಲೆಗಳನ್ನು ಐತಿಹ್ಯಗಳ ಮುಖೇನ, ಪವಾಡಗಳ ಮುಖೇನ ಕಟ್ಟಿಕೊಡುತ್ತವೆ.

**೧. ಬೆತ್ತವನ್ನು ಮುಟ್ಟಿ ನೀರು ಬರಿಸಿದ್ದು.**

ತಿಪ್ಪೇಸ್ವಾಮಿಯವರು ರಾಯದುರ್ಗದ ಕಡೆಯಿಂದ ನಾಯಕನಹಟ್ಟಿಗೆ ಪ್ರವೇಶ ಮಾಡುವ ಮೊದಲು ಮಾರ್ಗಮಧ್ಯದಲ್ಲಿ ಸಂಜೆಯಾಗುತ್ತದೆ. ಹೀಗೆ ಬರುತ್ತಿರುವಾಗ ಕೊಂಡ್ಲಹಳ್ಳಿ ಸಮೀಪಕ್ಕೆ ಬರುವಷ್ಟರಲ್ಲಿ ಕತ್ತಲಾಗುತ್ತದೆ. ಶಿವಪೂಜೆಗೆ ಎಲ್ಲೂ ನೀರು ಸಿಗುವುದಿಲ್ಲ. ಅದು ದಟ್ಟವಾದ ಕಾಡು ಪ್ರದೇಶ ಆಗಿರುತ್ತದೆ.

ಆಗ ಸ್ವಾಮಿಗಳು ಬೆತ್ತವನ್ನು ಮುಟ್ಟಿ ಮಣ್ಣನ್ನು ಅಗೆಯಿರಿ ಎಂದು ಹೇಳಿದರು. ಮಣ್ಣು ತೆಗೆದಾಗ ನೀರು ಉಕ್ಕಿ ಬಂದಿತ್ತಂತೆ. ಆ ನೀರಿನಲ್ಲಿ ಶಿವಪೂಜೆ ಮಾಡಿ ಮುಂದೆ ನಾಯಕನಹಟ್ಟಿಗೆ ಪ್ರಯಾಣ ಬೆಳೆಸಿದರು. ಅಲ್ಲಿ ತೆಗೆದ ನೀರು, ಇವತ್ತಿಗೂ ಕೊಂಡ್ಲಹಳ್ಳಿಯಲ್ಲಿ ಪವಿತ್ರ ಜಲವಾಗಿದೆ. 'ಬಿಳಿ ನೀರಿನ ಚಿಲುಮೆ' ಎಂದು ಖ್ಯಾತಿ ಪಡೆದಿದೆ.

**೨. ದೇವಾಲಯದ ತುಂಬ ಬೆತ್ತ ಮತ್ತು ಜೋಳಿಗೆ ತುಂಬಿದ ಮಹಿಮೆ.**

ತಿಪ್ಪೇರುದ್ರ ಸ್ವಾಮಿಗಳು ನಾಯಕನಹಟ್ಟಿಗೆ ಪ್ರವೇಶ ಪಡೆದ ನಂತರ ಮೊದಲು ಬಂದಿದ್ದು ಮಾರೀ ಗುಡಿಗೆ. ಅಲ್ಲಿ ಬಂದು ತಮ್ಮ ಬೆತ್ತ, ಜೋಳಿಗೆಯನ್ನು ಇಟ್ಟು ಹೋದರು. ಬೆಳಗಾಗುವಷ್ಟರಲ್ಲಿ ಇಡೀ ದೇವಾಲಯವೆಲ್ಲಾ ಬೆತ್ತ ಜೋಳಿಗೆಯಿಂದ ತುಂಬಿ ಹೋಗಿತ್ತು. ದೇವಿ ಅಲ್ಲಿ ಕಾಲಿಡಲು ಸ್ಥಳವಿರಲಿಲ್ಲ. ದೇವಿ ಇದನ್ನು ಕಂಡು ಆಶ್ಚರ್ಯವಾದಳು. ಆಗ ದೇವಿ ಸ್ವಾಮಿಯನ್ನು ಕುರಿತು ಇಲ್ಲಿ ನಿನ್ನ ಪ್ರಭಾವ ಹೆಚ್ಚು ಮೆರೆಯಲಿ ನಾನು ಒಡ್ನಳ್ಳಿ ಎಂಬ ಗ್ರಾಮಕ್ಕೆ ಹೋಗುವುದಾಗಿ ಹೇಳಿ ಒರಟು ಹೋದಳು. ಅದೇ ದೇವಾಲಯದಲ್ಲಿ ತಿಪ್ಪೇರುದ್ರಸ್ವಾಮಿ ನೆಲೆನಿಂತರು.

**೩. ಕೆರೆ ಕಟ್ಟಿಸಿದ್ದು.**

ಹಟ್ಟಿ ಮಲ್ಲಪ್ಪ ನಾಯಕನು ತನ್ನ ಕಾಲದಲ್ಲಿ ಕೆರೆ ನಿರ್ಮಾಣ ಮಾಡಿ, ನೀರನ್ನು ಸಂಗ್ರಹಿಸಬೇಕು ಜನರಿಗೆ ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಬೇಕು ಎಂಬ ಮಹಾದಾಸೆಯಿಂದ ಹಟ್ಟಿಮಲ್ಲಪ್ಪ ನಾಯಕ ದೊಡ್ಡ ಯೋಜನೆ ಹಾಕಿಕೊಂಡಾಗ ಆನೆಗೊಂದಿ ಸಂಸ್ಥಾನದಲ್ಲಿ ಯುದ್ಧವಾಗಿದ್ದ ಕಾರಣ ಇವರ ರಾಜ್ಯದ ಬೊಕ್ಕಸ ಬರಿದಾಗಿತ್ತು. ಕೆರೆಯ ಕೆಲಸ ಅರ್ಧಕ್ಕೆ ನಿಲ್ಲಿಸಿದ್ದರು. ಸ್ವಾಮಿಗಳು ವಾಯು ವಿಹಾರಕ್ಕೆ ಬಂದಾಗ ಮಲ್ಲಪ್ಪ ನಾಯಕನನ್ನು ಕರೆದು ಕೇಳಿದರು. ಯಾಕೆ ಕೆಲಸ ಅರ್ಧಕ್ಕೆ ನಿಲ್ಲಿಸಿದ್ದೀರಾ ಎಂದು ಕೇಳಿದಾಗ ಬೊಕ್ಕಸ ಬರಿದಾಗಿದೆ ಎಂದು ಮಲ್ಲಪ್ಪ ನಾಯಕ ಹೇಳಿದರು. ತಿಪ್ಪೇಸ್ವಾಮಿ ನೀವು ಕೆರೆಕಟ್ಟುವ ಏರ್ಪಾಡು ಮಾಡಿ ಹಣದ ವ್ಯವಸ್ಥೆ ಮಾಡುತ್ತೇನೆ ಎಂದು ಹೇಳಿದರು. ಮಲ್ಲಪ್ಪ ನಾಯಕ ಕೆರೆಯ ಕೆಲಸ ಮುಂದುವರಿಸಿದ ತಿಪ್ಪೇಸ್ವಾಮಿಗಳು ಸಂಜೆಗೆ ಬಂದು ಜನರಿಗೆ ಮರಳು ಗುಂಪು ಮಾಡಲು ಹೇಳುವರು. ಯಾರು ಯಾರು ಎಷ್ಟೆಷ್ಟು ಕೆಲಸ ಮಾಡುತ್ತಾರೆ ಅಷ್ಟು ಹಣ ಆ ಮರುಳ ಗುಪ್ಪೆಯಲ್ಲಿ ದೊರಕುತ್ತದೆ. ಮರಳ ಗುಪ್ಪೆಗೆ ತಿಪ್ಪೇಸ್ವಾಮಿ ಬೆತ್ತದಿಂದ ಮುಟ್ಟುತ್ತಿದ್ದರು. ಮಾಡಿದಷ್ಟು ನೀಡು ಭಿಕ್ಷೆ ಎಂದು ಹೇಳುತ್ತಿದ್ದರು. ಗರ್ಭಿಣಿ ಹೆಣ್ಣು ಮಕ್ಕಳಿಗೆ ಎರಡು ಪಟ್ಟು ಹಣ ಸಿಗುತ್ತಿತ್ತು. ಶ್ರಮಕ್ಕೆ ತಕ್ಕ ಫಲ ಸಿಗುತ್ತಿತ್ತು. ಹೊಟ್ಟೆಯಲ್ಲಿರುವ ಮಗುವು ಕೂಡ ಕೆಲಸಮಾಡಿದೆ ಎಂದು ಸ್ವಾಮಿಗಳು ಸ್ಪಷ್ಟ ಉತ್ತರ ಹೇಳುತ್ತಿದ್ದರು. ಸೋಮಾರಿಗಳಿಗೆ ಏನೂ ಸಿಗುತ್ತಿರಲಿಲ್ಲ.

**೪. ನಿಡುಗಲ್ಲಿನಲ್ಲಿ ಪವಾಡ ಮೆರೆದದ್ದು**

ನಿಡುಗಲ್ಲು ಸಂಸ್ಥಾನದ ದಳವಾಯಿ ಕಾಯಕವನ್ನು ಹಂಚುತ್ತಾ ಇರುತ್ತಾರೆ. ತಿಪ್ಪೇಸ್ವಾಮಿಗಳು ಸ್ಥಳಕ್ಕೆ ಬಂದು ನನಗೂ ಕೆಲಸವನ್ನು ಕೊಡಿ ಮಾಡಲು ಸಿದ್ಧನಿದ್ದೇನೆ ಎಂದು ಸ್ವಾಮಿಗಳು ಹೇಳಿದರು. ಸಾಧು,

ಸಂತರ ವೇಷಧಾರಿಯಾಗಿದ್ದ ಇವರಿಗೆ ಕೆಲಸ ಕೊಡಲು ನಿರಾಕರಿಸಿದರು. ನೀವು ಋಷಿಗಳ ತರಹ ಇದ್ದೀರಾ ನಿಮಗೆ ಯಾರು ಬೇಕಾದರೂ ಭಿಕ್ಷೆ ಹಾಕುತ್ತಾರೆ. ನಿಮಗೆ ಕೆಲಸ ಹಂಚುವ ಅವಶ್ಯಕತೆಯಿಲ್ಲ ಎಂದರು. ತಿಪ್ಪೇಸ್ವಾಮಿ ಇಲ್ಲಪ್ಪ ಭಿಕ್ಷೆ ಎನ್ನುವಂತಹದ್ದು ಯಾರು ಅಂಗವಿಕಲರಾಗಿರುತ್ತಾರೋ ಅಥವಾ ಅಸಹಾಯಕರಾಗಿರುತ್ತಾರೋ ಅಂತಹವರಿಗೆ ಭಿಕ್ಷೆಯನ್ನು ನೀಡಬೇಕು. ಕಾಯಕದ ಮೂಲಕವೇ ಹೊಟ್ಟೆಯನ್ನು ತುಂಬಿಸಿಕೊಳ್ಳಬೇಕು. ಜಂಗಮ ಆದರೇನು, ಜನಾರ್ಧನ ಆದರೇನು ಎಂದು ತಿಪ್ಪೇಸ್ವಾಮಿ ದಳವಾಯಿಗಳಿಗೆ ಹೇಳಿದರು.

ತಿಪ್ಪೇಸ್ವಾಮಿ ಮೂರು ದಿನ ಮಾಡುವ ಕೆಲಸವನ್ನು ಕೆಲವೇ ಸಮಯದಲ್ಲಿ ಮಾಡಿ ಮುಗಿಸಿ ಬಿಡುತ್ತಾನೆ. ಇದನ್ನು ಕಂಡ ದಳವಾಯಿಗೆ ಆಶ್ಚರ್ಯವಾಗುತ್ತದೆ. ಸ್ವಾಮಿಗಳಿಗೆ ಕಾಲುವೆಯ ಕೆಲಸ ಪೂರ್ತಿ ಮಾಡಿ ಕೊಡುವಂತೆ ಕೇಳುತ್ತಾರೆ. ಆದರೆ ಸ್ವಾಮಿಗಳು ಅವರ ಮಾತನ್ನು ನಿರಾಕರಿಸುತ್ತಾರೆ. ದಳವಾಯಿಗಳು ಚಾಟಿ ಏಟಿನಿಂದ ಹೊಡೆಸುತ್ತಾನೆ. ಹೊಡೆಯುವ ಸಂದರ್ಭದಲ್ಲಿ ಕೆಲಸಗಾರರು ರಾಜ ಬಂದ ಎಂದು ಹೇಳಿದಾಗ ಜನಗಳು ಸ್ವಾಮಿಗಳೇ ತೋಡಿದ ಗುಂಡಿಯಲ್ಲಿ ಅವರನ್ನು ಹಾಕಿ ಮಣ್ಣು ಮುಚ್ಚುತ್ತಾರೆ. ಹೀಗೆ ರಾಜ ಬರುತ್ತಾನೆ ಎಂದು ಚಾವಡಿಯ ಹತ್ತಿರ ಹೋದರೆ ಅಲ್ಲಿ ಸ್ವಾಮಿಗಳು ಚಾವಡಿಯ ಹತ್ತಿರ ಕುಳಿತಿರುವುದನ್ನು ಕಂಡು ದಳವಾಯಿಗೆ ಆಶ್ಚರ್ಯವಾಗುತ್ತದೆ. ದಳವಾಯಿಗಳು ಸ್ವಾಮಿಯ ಹತ್ತಿರ ಹೋಗಿ ನಾವು ತಪ್ಪು ಮಾಡಿ ಬಿಟ್ಟೆವು ನಮ್ಮನ್ನು ಕ್ಷಮಿಸು ಎಂದಾಗ ಸ್ವಾಮಿಗಳು ಶಾಪ ಹಾಕುತ್ತಾರೆ. ಸ್ವಾಮಿಗಳು ಶಾಪ ಕೊಟ್ಟಂತಹ ಜಾಗ ನಿಡುಗಲ್ಲಿನಲ್ಲಿದೆ.

**೫. ಕೆರೆ ಮತ್ತು ಪುರವನ್ನು ಕಟ್ಟಿಸಿದ್ದು.**

**ಕೆರೆಗಳು**

೧. ಭೀಮನ ಕೆರೆ　　೨. ನಾಯಕನ ಕೆರೆ

೩. ರಾಮಸಾಗರ ಕೆರೆ　　೪. ಚಿಕ್ಕಕೆರೆ

೫. ಹಿರೇಕೆರೆ　　೬. ಹೊಸ ಕೆರೆ

೭. ಹೊರವಿನ ಕೆರೆ

**ಏಳು ಪುರಗಳು**

೧. ಕಾಶಿಪುರ　　೨. ಕುದಪುರ

೩. ಮಲ್ಲಾಪುರ　　೪. ಜಟಾಪುರ

೫. ಮಹಾದೇವಪುರ　　೬. ಗೌರಿಪುರ

೭. ಬಸಾಪುರ

**೪.೫.೪. ಇತರೆ ಪವಾಡಗಳು**

**೧. ಬಸ್ಮದ ಉಂಡೆಯನ್ನು ಕೊಟ್ಟು ಕರುಣಿಸಿದ್ದು.**

ಗುಡ್ಡಚ್ಚಿಹೊಳೆ ಎಂಬ ಊರಿನಲ್ಲಿದ್ದ ಪಗಡೆಯ ಚನ್ನಯ್ಯನೆಂಬ ಮುಗ್ಧ ಭಕ್ತನು ಶಿವಮತ ಕಲ್ಪ

ವೃಕ್ಷನಾದ ಗುರುಬಸವನ ಹತ್ತಿರ ಬಂದು ಭಕ್ತಿಯಿಂದ ನಮಿಸಲು ಗುರುವು ನಗುಮುಖದಿಂದ ಬಂದು ಭಸ್ಮದ ಉಂಡೆಯನ್ನು ಕೊಟ್ಟನು. ಭಕ್ತನು ಅದನ್ನು ಪ್ರೀತಿಯಿಂದ ಸ್ವೀಕರಿ ಆ ಉಂಡೆಯನ್ನು ನೋಡತಿರಲು, ಅದು ಎರಡಾಗಿ ಕಂಡಿತು. ಅವುಗಳನ್ನು ಒಳ್ಳೆಯ ಭಕ್ತಿಯಿಂದ ಪೂಜಿಸಿ ಅದರ ಪ್ರಭಾವದಿಂದ ಆ ಭಕ್ತನ ಮನೆಯಲ್ಲಿ ಧನ, ದಾನ್ಯ, ಗೋಸಂಪತ್ತು ಮೊದಲಿಗಿಂತಲೂ ನೂರ್ಮಡಿಯಾಯಿತು. ಸಂತಾನ ವೃದ್ಧಿಯಾಗಿ ಸುಖದಿಂದ ಇದ್ದನು.

**೨. ಧಾನ್ಯವನ್ನು ಅಕ್ಷಯ ಮಾಡಿದ್ದು.**

ತಿಪ್ಪೇರುದ್ರ ಸ್ವಾಮಿಗಳು ರಾಯದುರ್ಗದ ಕಡೆಯಿಂದ ಬಂದು ಫಣಿಯಪ್ಪನ ಮನೆಯಲ್ಲಿ ಉಳಿದುಕೊಳ್ಳುತ್ತಾರೆ. ಸ್ವಾಮಿಗಳಿಂದ ಇಷ್ಟಾರ್ಥ ಸಿದ್ಧಿಯಾಗುತ್ತದೆಂದು ಜನ ತಂಡೋಪ ತಂಡವಾಗಿ ಬರತೊಡಗಿದರು. ಹೀಗೆ ಬಂದಂತಹ ಬಕ್ತರಿಗೆ ಊಟದ ವ್ಯವಸ್ಥೆ ಮಾಡುವ ಜವಾಬ್ದಾರಿ ಫಣಿಯಪ್ಪನದಾಗಿತ್ತು. ಆ ಸಂದರ್ಭದಲ್ಲಿ ಬರಗಾಲದ ಬವಣೆಯಿಂದ ಮನೆಯಲ್ಲಿದ್ದ ದವಸ ಧಾನ್ಯಗಳೆಲ್ಲ ಖಾಲಿಯಾಗಿದ್ದವು. ಫಣಿಯಪ್ಪ ಬಂದ ಭಕ್ತರಿಗೆ ಊಟದ ವ್ಯವಸ್ಥೆ ಹೇಗೆ ಮಾಡುವುದು ಎಂದು ಸ್ವಾಮಿಗಳನ್ನು ಕೇಳಿದಾಗ ಅವರ ಮನೆಯಲ್ಲಿದ್ದಂತಹ ವಾಡೇವಿಗೆ ಮಂತ್ರ ಪಠನೆ ಮಾಡಿ ವಾಡೇವನ್ನು ಮುಚ್ಚಿದರು. ವಾಡೇವಿಗೆ ಮಂತ್ರ ಪಠನೆಯಿಂದ ಅಕ್ಷಯ ನಿಧಿಯನ್ನು ಕರುಣಿಸಿದರು. ಅಂದಿನಿಂದ ಫಣಿಯಪ್ಪನ ಮನೆಯಲ್ಲಿ ಧಾನ್ಯದ ಹೊಳೆ ಹರಿಯುತ್ತದೆ. ಬೇಡಿ ಬಂದ ಭಕ್ತರಿಗೆಲ್ಲ ಧಾನ್ಯವನ್ನು ನೀಡುತ್ತಿದ್ದರು. ಎಷ್ಟು ತೋಡಿದರು ವಾಡೇವು ಬರಿದಾಗಲಿಲ್ಲ. ತೆಗೆದಷ್ಟು ಧಾನ್ಯಗಳು ಬರುತ್ತಿದ್ದವು. ಇನ್ನು ಎಷ್ಟು ಧಾನ್ಯ ಇರಬಹುದೆಂದು ಪರೀಕ್ಷಿಸಲು ಮಾಳಮ್ಮ ವಾಡೇವನ್ನು ಎತ್ತಿ ನೋಡಿದಾಗ ಅದರಲ್ಲಿದ್ದ ಅಕ್ಷಯ ಶಕ್ತಿ ಹೊರಟು ಹೊಗೆ ಬರಲು ಶುರುವಾಯಿತು. ಧಾನ್ಯವೆಲ್ಲ ನಾಶವಾಯಿತು. ಗಂಗಿಮಾಳವ್ವ ತಪ್ಪಿನಿಂದಾಗಿ ಪರಿತಪಿಸಿದಳು. ಫಣಿಯಪ್ಪನ ಮನೆಯಲ್ಲಿ ಈಗಲೂ ಸಹಿತ ವಾಡೇವುಗಳಿವೆ. ಆದರೆ ಅವು ತಮ್ಮ ಮೂಲ ಸ್ವರೂಪವನ್ನು ಕಳೆದುಕೊಂಡಿವೆ.

**೩. ಅಪ್ಪಿಕೊಂಡ ಮೋಟುಮರ ಚಿಗಿಯುವುದು.**

ಕೋಲಶಾಂತಯ್ಯ ಮಾಡಿದಂತ ಪವಾಡಗಳಲ್ಲಿ ಒಣಗಿದ ಮರವು ಚಿಗುರುವಂತೆ ಮಾಡಿರುವುದು ಕಂಡುಬರುತ್ತದೆ. ಅಂಥ ಒಂದು ಶಕ್ತಿ ಇವರಲ್ಲಿ ಅಡಕವಾಗಿತ್ತು.

**೪. ಕಲ್ಲು ಊಟದ ಫೇಣಿಯಾಗುತ್ತದೆ.**

ಕಲ್ಲನ್ನು ಊಟದ ಫೇಣಿಯಾಗಿ ಮಾಡುವಂತ ಅದ್ಭುತ ಶಕ್ತಿಯನ್ನು ಹೊಂದಿದ್ದರು ಎಂಬುದು ಅವರ ಪವಾಡಗಳ ಮಹಿಮೆಯಿಂದ ತಿಳಿದುಬರುತ್ತದೆ.

**೫. ಬೆಂಕಿ ಮಂಜುಗಡ್ಡೆಯಾಗುವುದು.**

ಇವರ ಅಪಾರವಾದ ಮಹಿಮೆಯಿಂದ ಉರಿಯುವ ಬೆಂಕಿಯನ್ನು ನಂದಿಸಿ ಮಂಜುಗಡ್ಡೆಯನ್ನಾಗಿ ಪರಿವರ್ತಿಸುವಂತ ಶಕ್ತಿ ಇವರ ಪವಾಡಗಳಲ್ಲಿ ಗೋಚರಿಸುತ್ತದೆ.

**೬. ಕೊಂಡನಹಳ್ಳಿಯಲ್ಲಿ ಮೂಢನಂಬಿಕೆ ಹೋಗಲಾಡಿಸಿದ್ದು.**

ಗೋಣಿಬಸಪ್ಪ ಹೂವಿನ ಹಡಗಲಿಯ ಮಾರ್ಗವಾಗಿ 'ಕೊಂಡ' ಎಂಬ ಊರಿಗೆ ಹೋದನು. ಅಲ್ಲಿಯ ಜನರು ಹಲವಾರು ರೀತಿಯ ರೋಗ-ರುಜಿನೆಗಳಿಂದ ಬಳಲುತ್ತಿದ್ದರು. ಮೂಢನಂಬಿಕೆಗಳಿಂದ, ಬದುಕಿದ್ದ ಜನತೆಯನ್ನು ಗಮನಿಸಿದ ಗೋಣಿಬಸಪ್ಪ ಇವರ ಸ್ಥಿತಿ-ಗತಿಗಳನ್ನು ಅರಿತು ಕಷ್ಟಗಳನ್ನು ಪರಿಹರಿಸಬೇಕೆಂದು ಕೊಂಡು ಅಂದು 'ದುರ್ಗಿ' ಗುಡಿಯಲ್ಲಿ ಉಳಿದುಕೊಂಡರು. ಆಗ ಊರಿನ ಜನರೆಲ್ಲ ಜಂಗಮನ ಹತ್ತಿರ ಬಂದರು. ಗೋಣಿಬಸಪ್ಪನ ಮುಖದಲ್ಲಿ ತೇಜೋಮಯವಾದ ರೂಪದಿಂದ ಜನರ ರೋಗ-ರುಜಿನಿಗಳು ವಾಸಿಯಾದವು. ಅವರ ಬಳಿಯಿದ್ದ ವಿಭೂತಿಯನ್ನು ಪುಡಿ ಮಾಡಿ ಇಡೀ ಊರಿನ ಸುತ್ತಮುತ್ತೆಲ್ಲ ಚಲ್ಲಿದರು. ಊರಿಗೆ ಅಂಟಿದ್ದ ದಾರಿದ್ರವೆಲ್ಲ ದೂರವಾಯಿತು. ಜನ ಸಂತೋಷದಿಂದ ಕುಣಿದಾಡಿದರು. ಬಸವನನ್ನು ಜನರು ಕೊಂಡಾಡಿದ್ದಕ್ಕಾಗಿ ಆ ಊರಿಗೆ 'ಕೊಂಡ' ಎಂಬ ಹೆಸರು ಬಂದಿದೆ ಎಂಬ ಪ್ರತೀತಿಯಿದೆ.

**೭. ಬೆಂಕಿಯಿಂದ ಪಾರಾದದ್ದು.**

ಬಸವನನ್ನು ಹೇಗಾದರೂ ಮಾಡಿ ಕೊಲ್ಲಬೇಕೆಂದು ಶಿವನಯ್ಯ ಯೋಚಿಸಿ ಮಧ್ಯರಾತ್ರಿಯಲ್ಲಿ ಬಸವನು ಮಲಗಿರುವ ಜಾಗಕ್ಕೆ ಬೆಂಕಿಹಚ್ಚಿ ಬಸವನನ್ನು ಕೊಲ್ಲಬೇಕೆಂದು ಯೋಚಿಸಿ ಅಂದೇ ರಾತ್ರಿ ಕೂಲಹಳ್ಳಿಗೆ ಬಂದನು. ಶಿವನಯ್ಯನು ದಡಗಾರನ ಹಳ್ಳಿಯಿಂದ ಒಂದನೂರು ಮಣ ಮೆಣಸಿನ ಕಾಯಿಯನ್ನು ತರಿಸಿದನು. ಅಲ್ಲದೆ ಕೊಟ್ಟೂರಿನ ಸಮೀಪವಿರುವ ಕೋಡಿಹಳ್ಳಿಯಿಂಂದ ಪುಂಡಿ ಕಟ್ಟಿಗೆಗಳನ್ನು ಕೂಲಹಳ್ಳಿಗೆ ತರಿಸಿದನು. ಇದೆಲ್ಲವನ್ನು ತಿಳಿದ ಬಸವ, ಪೂಜಾರಿಯನ್ನು ಕರೆದು ನೀನು ಕೊಟ್ಟಿಗೆಯ ಹೆಬ್ಬಾಗಿಲಲ್ಲಿ ಮಲಗಿಕೋ, ನಾನು ಕೊಟ್ಟಿಗೆಯಲ್ಲಿ ಮಲಗುತ್ತೇನೆ, ಯಾರು ಬಂದು ಕೇಳಿದರು ಹೇಳಬೇಡ ಅದಕ್ಕೆ ಪೂಜಾರಿ ಒಪ್ಪಿಗೆ ಸೂಚಿಸಿದನು. ಶಿವನಯ್ಯ ರಾತ್ರಿ ವೇಳೆಯಲ್ಲಿ ಬಂದು ಹುಡುಕಿದನು. ಬಸವ ಕಾಣಿಸಲಿಲ್ಲ. ಆಗ ಪೂಜಾರಿಯನ್ನು ಕೇಳಲು ಪೂಜಾರಿ ಹೇಳದೆ ಹೋದಾಗ ಆತನನ್ನು ಚೆನ್ನಾಗಿ ಹೊಡೆದರು. ಅವರ ಹಿಂಸೆಯನ್ನು ತಾಳಲಾರದೆ ಕೊಟ್ಟಿಗೆಯಲ್ಲಿ ಮಲಗಿರುವನು ಎಂದು ಹೇಳಿದನು. "ಶಿವನಯ್ಯ ಮೆಣಸಿನಕಾಯಿ ಮತ್ತು ಪುಂಡಿ ಕಟ್ಟಿಗೆಯಿಂದ ಕೊಟ್ಟಿಗೆಗೆ ಬೆಂಕಿ ಇಟ್ಟನು. ಇದನ್ನು ಕಂಡು ಶಿವನಯ್ಯನಿಗೆ ತುಂಬಾ ಸಂತೋಷವಾಯಿತು. ಈ ಸಾರಿ ಬಸವ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ ಸಾಯುತ್ತಾನೆ ಎಂದು ಯೋಚಿಸಿ ವಾಪಸ್ಸು ಹೋದನು. ಬಸವನು ಸ್ವಲ್ಪ ಸಮಯದ ಬಳಿಕ ಎದ್ದು ನೋಡಿದ, ಬೆಂಕಿ ಹತ್ತಿ ಉರಿಯುತ್ತಿತ್ತು. ಆಗ ಬೆಟ್ಟದ ಮಲ್ಲಯ್ಯನನ್ನು ಪ್ರಾರ್ಥಿಸಿದನು. ಬೆಂಕಿ ನಂದಿ ಹೋಯಿತು. ಸುಡಲು "ಮೆಣಸಿನಕಾಯಿಯನ್ನು ಕೊಟ್ಟವರ ವಂಶದಲ್ಲಿ ಮೆಣಸಿನಕಾಯಿ ಬೆಳೆಯದಿರಲಿ, ಸುಡಲು ಪುಂಡಿಕಟ್ಟಿಗೆ ಕೊಟ್ಟವರ ಆ ಊರಿಗೆ ಇದೆ ಬೆಂಕಿ ಹೋಗಿ ಊರನ್ನು ಸುಡಲಿ ಎಂದು ಶಾಪ ಕೊಟ್ಟನು. ಕೋಡಿಹಳ್ಳಿಗೆ ಬೆಂಕಿ ಬಿದ್ದು ಸುಟ್ಟು ಹೋಯಿತು".[೨೨] ಅಂದಿನಿಂದ ಅದಕ್ಕೆ ಸುಟ್ಟಕೋಡಿಹಳ್ಳಿ ಎಂದು ಹೆಸರಾಯಿತು. ಯಾರು ತಪ್ಪನ್ನು ಮಾಡುತ್ತಾರೋ ಅವರು ಶಿಕ್ಷೆ ಅನುಭವಿಸಬೇಕು ಎಂಬುದು ತಪ್ಪನ್ನು ಮಾಡದಿರುವಂತೆ ಎಚ್ಚರಿಕೆ ನೀಡುವುದು ಕೂಡ ಕಂಡುಬರುತ್ತದೆ.

**೮. ಮೊರವಿ ಅಂಗಿಯನ್ನು ತೊಟ್ಟು ಮೂರ್ಛೆ ಹೋದದ್ದು.**

ಕೂಲಹಳ್ಳಿಗೆ ರಾಜನಾಗಬೇಕು ಎಂಬ ಮಹಾದಾಸೆಯಿಂದ ಶಿವನಯ್ಯ ಹಲವಾರು ಯೋಜನೆ ಹಾಕಿಕೊಂಡು ಬಸವನನ್ನು ನಾಶಮಾಡಲು ಮುಂದಾಗುತ್ತಾನೆ. ಸೈನಿಕರ ಸಹಾಯದಿಂದ ಗಾಳಿಪೂಜೆ ಎಂಬ

ಊರಲ್ಲಿರುವ ಮೂರು ಜನ ಸಿದ್ಧರು ಸಕಲ ವಿದ್ಯೆಗಳನ್ನು ಬಲ್ಲವರಾಗಿದ್ದರು. ಸಿದ್ಧರ ಸಹಾಯಕವನ್ನು ಪಡೆದು ಬಸವನನ್ನು ನಾಶ ಮಾಡಲು ಮುಂದಾಗುತ್ತಾನೆ. ಬಸವನನ್ನು ಕೊಂದರೆ ೩೫೧ ಎಕರೆ ಭೂಮಿಯಲ್ಲಿ ಅರ್ಧಭಾಗವನ್ನು ಕೊಡುತ್ತೇನೆ ಎಂದು ಆಸೆ ತೋರಿಸುತ್ತಾನೆ. ಹೇಗಾದರೂ ಮಾಡಿ ಬಸವನ ಸಂಹಾರ ಮಾಡಬೇಕೆಂದು ಹಲವಾರು ತಂತ್ರಗಳನ್ನು ಬಳಸುತ್ತಾನೆ. ಸಿದ್ಧರ ಸಹಾಯದಿಂದ ಅಂಗಿಯನ್ನು ತರಿಸಿ ಅದಕ್ಕೆ ಮಾಟವನ್ನು ಮಾಡುತ್ತಾನೆ. ಅಂಗಿಯನ್ನು ನೆಲಕ್ಕೆ ಮುಟ್ಟಿಸದಂತೆ ತಂದು ಮರಕ್ಕೆ ನೇತುಹಾಕುತ್ತಾರೆ. ಇದೆಲ್ಲವನ್ನು ಸೂಕ್ಷ್ಮವಾಗಿ ಗಮನಿಸಿದ ಬಸವ ನಗುತ್ತಾನೆ. ಏಕೆ ಎಂದು ತಾಯಿ ಕೇಳಿದಾಗ ಶ್ರಾವಣ ಮಾಸದ ಕಡೆಯ ವಾರ ನನಗಾಗಿ ವಿಶೇಷ ಉಡುಗೋರೆ ಬರುತ್ತದೆ ಎಂದು ಹೇಳಿದ. ಮೂರು ಹರಳುಗಳನ್ನು ಮಂತ್ರಿಸಿ ಹಸಿವೆಯಾದಾಗ, ದಾಹವಾದಾಗ ಒಂದೊಂದನ್ನು ಒಗೆದು ಒಂದು ಕೋಲಿಗೆ ಈ ಅಂಗಿಯನ್ನು ತೂಗು ಹಾಕಿಕೊಂಡು ನಿಮ್ಮ ಊರಿಗೆ ಹೋಗಿ ಎಂದು ಸಿದ್ಧರು ಹೇಳಿ ಕಳುಹಿಸಿದರು. ಶಿವನಯ್ಯ ಕೂಲಹಳ್ಳಿಯಲ್ಲಿರುವ ಬಸವನಿಗೆ ಹೋಗಿ ನಮ್ಮ ತಂದೆ ಜಂಗಮರಿಗೆ ವಸ್ತ್ರದಾನ ಮಾಡುತ್ತೇನೆ ಎಂದು ಅರಿಕೆ ಮಾಡಿಕೊಂಡಿದ್ದನಂತೆ. ಆದ್ದರಿಂದ ಹರಕೆಯನ್ನು ತೀರಿಸದೆ ಕಾಲವಾದರು. ಅದರಂತೆ ನನ್ನ ತಂದೆಯ ಆಸೆಯನ್ನು, ಕೊಟ್ಟ ಮಾತನ್ನು ಉಳಿಸಿಕೊಳ್ಳುವುದಕ್ಕಾಗಿ ನಿನಗೆ ಈ ಅಂಗಿಯನ್ನು ಕಾಣಿಕೆಯಾಗಿ ಕೊಡುತ್ತೇನೆ ಸ್ವೀಕರಿಸಬೇಕು ಎಂದು ಬೇಡಿಕೊಂಡ. ಬಸವ ಈತನ ಕುಟಿಲತನವನ್ನು ಅರಿತು ನಗುತ್ತ ಅಂಗಿಯನ್ನು ಕೊಡಿರಿ ಎಂದು ಹೇಳಿದನು. ಬಸವನು ಅಂಗಿಯನ್ನು ಧರಿಸಿದ ತಕ್ಷಣ ಮೈಮೇಲೆ ಉರಿ, ಚಳಿ, ಬೆಂಕಿ, ಸಂಕಟದಿಂದ ಒದ್ದಾಡುತ್ತಾ ಸ್ವಲ್ಪ ಸಮಯದಲ್ಲಿ ಕೆಳಗೆ ಬಿದ್ದು ಎಚ್ಚರ ತಪ್ಪಿದನು. ಬಾಲಬಸವನು ಬಂದು ಬಣಕಾರರ ಅಪ್ಪಣೆ ಪಡೆದು ಹಾವಾಗಿ ಹೋಗಿ ಬಸವನ ಮೈಯನ್ನು ಆವರಿಸಿ ವಿಷವನ್ನು ತೆಗೆದ ತಕ್ಷಣ ಬಸವ ಎದ್ದು ಕುಳಿತನು. ಹಾವು ವಿಷದಿಂದ ಪ್ರಾಣ ಬಿಟ್ಟಿತು. ಆಗ ದಿವ್ಯದೃಷ್ಟಿಯಿಂದ ಹಾವು ಬದುಕಿತು. ತನ್ನಲ್ಲಿರುವ ವಿಷಯವನ್ನು ಮಜ್ಜನ ಬಾವಿಯಲ್ಲಿ ಕಕ್ಕಿತು. ಬಾಲಬಸವ ತನ್ನ ನಿಜರೂಪ ಧರಿಸಿ ಬಸವನ ಪಾದಗಳಿಗೆ ನಮಸ್ಕರಿಸಿದನು. ಬಾಲಬಸವನ ತ್ಯಾಗ, ಭಕ್ತಿಗೂ ಮೆಚ್ಚಿ ನಿನಗೆ ಏನು ವರ ಬೇಕು ಕೇಳು ಎಂದಾಗ ಬಾಲಬಸವ ನಿಮ್ಮ ಸೇವೆ ಮಾಡಲು ಅವಕಾಶ ಮಾಡಿಕೊಡಿ ನಿಮ್ಮ ಭಕ್ತನಾಗಿ ಕೊನೆಯವರೆಗೆ ಇರಬೇಕು. ಮುಂದಿನ ಆಗು ಹೋಗುಗಳನ್ನು ತಿಳಿಸುವಂತಹ ಶಕ್ತಿಯನ್ನು ಕರುಣಿಸು ಎಂದಾಗ, ಬಸವನು ತನ್ನ ಕರ್ಣ ಕುಂಡಲಗಳನ್ನು ಬಾಲಬಸವರಿಗೆ ಕೊಟ್ಟು, ಮಧ್ಯಾಹ್ನದವರೆಗೆ ನೀನು ಹೇಳುವ ಮಾತು ಸತ್ಯವಾಗಿರುತ್ತದೆ. ನಂತರ ಅದು ನಿನಗೆ ತಿಳಿಯದಾಗಲಿ ಎಂದು ಹರಿಸಿದರು. ಶಿವನಯ್ಯ ಮಾಟದ ಅಂಗಿಯಿಂದ ಸತ್ತಿರುವನೆಂದು ತಿಳಿದು ಸಂತೋಷದಿಂದ ಕೂಲಹಳ್ಳಿಗೆ ಬಂದಾಗ ಅಲ್ಲಿ ಬಸವ ಕುಳಿತಿರುವುದನ್ನು ಕಂಡು ಆಶ್ಚರ್ಯವಾಯಿತು. ಈತ ಮಹಾ ಮಾಯಾವಿ ಎಂದು ತಿಳಿದನು.

**೯. ಬರಡು ಮರ ಕಾಯಿಗಳನ್ನು ಬಿಟ್ಟಿದ್ದು.**

ಅಂಬಿಗೆ ದೇಸಾಯಿಯ ಅವರ ತೆಂಗಿನ ತೋಟದಲ್ಲಿ ಕಾವಲುಗಾರರು ತೋಟವನ್ನು ನೋಡಿಕೊಳ್ಳುತ್ತಿದ್ದರು. ಬಸವನು ದಾಹವನ್ನು ನೀಗಿಸಿಕೊಳ್ಳಲು ಒಂದು ಎಳೆನೀರನ್ನು ಕೇಳಿದನು. ಅದಕ್ಕೆ ಸೇವಕರು ರಾಜಾಜ್ಞೆಯಾಗಿದೆ. ರಾಜನ ಅಪ್ಪಣೆಯಿಲ್ಲದೆ ಕೊಡಲು ಸಾಧ್ಯವಿಲ್ಲ. ಬೇಕಾದರೆ ಅಲ್ಲಿರುವ

ಬರಡು ಮರದಲ್ಲಿ ನಿಮ್ಮ ಶಕ್ತಿಯಿದ್ದರೆ ಕಾಯಿಯನ್ನು ಬರಿಸಿ ಎಂದರು. ಆಗ ಬಸವ ಬರಡು ಮರದ ಹತ್ತಿರ ಹೋದಾಗ ಅದು ಚಿಗಿದು ಹೂ ಕಾಯಿಯನ್ನು ಬಿಟ್ಟಿತು. ಬಸವ ಕುಳಿತ ಜಾಗಕ್ಕೆ ಗಿಡ ಬಾಗಿತು. ಅದರಿಂದ ತಮ್ಮ ದಾಹವನ್ನು ನೀಗಿಸಿಕೊಂಡನು. ಇಲ್ಲಿ ನಡೆದ ಎಲ್ಲಾ ವಿಷಯಗಳನ್ನು ರಾಜನಿಗೆ ಹೇಳಿದರು.ರಾಜ ಬಂದು ನೋಡಿ ಬಸವರಿಗೆ ನಮಸ್ಕರಿಸಿ ಊರಿಗೆ ವಾದ್ಯಗಳ ಸಮೇತ ಕರೆತಂದರು.

ರಾಜನ ಭಕ್ತಿಗೆ ಮೆಚ್ಚಿದ ಬಸವನು ನಿಮಗೆ ಏನು ವರಬೇಕು ಕೇಳು ಎಂದಾಗ ಸ್ವಾಮಿ ನನಗೆ ಬೆನ್ನು ಬೇತಾಳ ರೋಗದಿಂದ ಬಳಲುತ್ತಿದ್ದೇನೆ. ತಮ್ಮ ಕರುಣೆಯಿಂದ ವಾಸಿಯಾದರೆ ಸಾಕು ಸ್ವಾಮಿ ಎಂದಾಗ ಅವರ ದೃಷ್ಟಿಯಿಂದ ರಾಜನ ಬೆನ್ನು ಬೇತಾಳ ರೋಗ ನಿವಾರಣೆಯಾಗುತ್ತದೆ. ರಾಜ ಸಂತೋಷದಿಂದ ಕುಣಿದಾಡಿದ. ಅಂಬಿಗೆಯಲ್ಲಿ ದೇವಸ್ಥಾನ ನಿರ್ಮಿಸಿದ. ಜೊತೆಗೆ ಗುಮ್ಮಗೋಳದಲ್ಲಿ ದೇವಸ್ಥಾನ ನಿರ್ಮಿಸಿ ೧೦೧ ಎಕರೆ ಭೂಮಿಯು ದೇವಸ್ಥಾನಕ್ಕೆ ಅರ್ಪಿಸಿದನು.

**೧೦. ಫಣಿಯಪ್ಪನಿಗೆ ಶಾಪ ಹಾಕಿದ್ದು.**

ಫಣಿಯಪ್ಪನಿಗೆ ಸ್ವಾಮಿಗಳು ಜೀವ ಸಮಾಧಿಯಾಗುತ್ತೇನೆ ಎಂದರು. ಫಣಿಯಪ್ಪ ಮತ್ತು ಮಾಳಮ್ಮ ದಂಪತಿಗಳು ಸ್ವಾಮಿಗಳ ಅಗಲುವಿಕೆಯಿಂದ ತುಂಬಾ ದುಃಖ ಪಡುತ್ತಾರೆ. ಸ್ವಾಮಿ ನೀವು ಇಷ್ಟು ದಿನಗಳ ಕಾಲ ನಮ್ಮ ಜೊತೆಗಿದ್ದು ನಮ್ಮ ಬದುಕಿಗೆ ದಾರಿ ದೀಪವಾಗಿದ್ದೀರಿ. ಈಗ ನಮ್ಮನ್ನು ಯಾರು ರಕ್ಷಿಸುತ್ತಾರೆ ಎಂದು ದುಃಖಪಡುತ್ತಾರೆ. ಫಣಿಯಪ್ಪನಿಗೆ ಸ್ವಾಮಿಗಳು ಸಂಜೆ ಸ್ನಾನ ಮಾಡುವಾಗ ಬೆನ್ನು ಉಜ್ಜು ಸ್ವಾಮಿಗಳ ಬೆನ್ನಿನಿಂದ ತೆಂಗಿನಕಾಯಿ ಗಾತ್ರದಷ್ಟು ಮಣ್ಣು ಬರುತ್ತದೆ. ಫಣಿಯಪ್ಪನಿಗೆ ಆಶ್ಚರ್ಯವಾಗುತ್ತದೆ. ಸ್ವಾಮಿ ಇದೇನು ನಿಮ್ಮ ಮೈಯಲ್ಲಿ ಇಷ್ಟು ಮಣ್ಣು ಎಂದಾಗ ಅದನ್ನು ಲಿಂಗಮಾಡಿ ಕೊಟ್ಟು 'ಇದು ನನ್ನ ಪ್ರತಿರೂಪ' ಮಹಾಂತೇಶ್ವರ ಲಿಂಗ, ಶೈತಿಕ ಲಿಂಗ ಎಂದು ಕರೆಯುತ್ತಾರೆ. ಇಷ್ಟು ದಿನಗಳು ಹೇಗೆ ನನಗೆ ನಡೆದುಕೊಳ್ಳುತ್ತಿದ್ದೇಯೋ ಹಾಗೆಯೇ ಈ ಲಿಂಗಕ್ಕೆ ನೀನು ಇನ್ನು ಮುಂದೆ ನಿಷ್ಠೆಯಿಂದ ನಡೆದುಕೋ ಎಂದು ಹೇಳಿ ಸ್ವಾಮಿಗಳು ಬಂದು ಜೀವಸಮಾಧಿಯಾಗುತ್ತಾರೆ.

ಸ್ವಾಮಿಗಳು ಫಣಿಯಪ್ಪನಿಗೆ ಮೂರು ದಿನಗಳವರೆಗೆ ಯಾರು ಸಮಾಧಿಯನ್ನು ತೆರೆಯಬಾರದು ಎಂದು ಹೇಳಿದ್ದರು. ಆದರೆ ಫಣಿಯಪ್ಪ ಸ್ವಾಮಿಯನ್ನು ಬಿಟ್ಟು ಇರಲು ಸಾಧ್ಯವಾಗುವುದಿಲ್ಲ. ಅವರನ್ನು ನೋಡಬೇಕೆಂದು ಸಮಾಧಿಯ ಬಾಗಿಲು ತೆರೆಯುತ್ತಾರೆ. ಸ್ವಾಮಿ ಫಣಿಯಪ್ಪನಿಗೆ ಶಾಪ ಹಾಕುತ್ತಾರೆ. ನಿನ್ನ ವಂಶ ನಿರ್ವಂಶವಾಗಲಿ ಎಂದು ಹೇಳಿ ಮತ್ತೆ ಫಣಿಯಪ್ಪನ ನೋವು ಸಂಕಟವನ್ನು ಕಂಡು ನಿನ್ನ ವಂಶ ಪೂರ್ತಿ ವೃದ್ಧಿಸುವುದು ಬೇಡ ನಾಶವಾಗುವುದು ಬೇಡ, ವಂಶಕ್ಕೆ ಒಬ್ಬ ಪುತ್ರ ಸಾಕು ಎಂದು ತಮ್ಮ ಶಾಪವನ್ನು ಉಪ ಶಮನಗೊಳಿಸಿದರು.

ಫಣಿಯಪ್ಪನು ಆರೋಗ್ಯ ಸರಿಯಿಲ್ಲದೆ ಬಳಲುವಾಗ ಸಮಾಧಿ ದೀಪ ಆರಿ ಹೋಗುವ ಸ್ಥಿಯಲ್ಲಿರುತ್ತದೆ. ಆಗ ಬೇಡರ ಹುಡುಗನಿಗೆ ಹೇಳಿ ಕಳುಹಿಸುತ್ತಾನೆ. ಬೇಡರ ಹುಡುಗ ನಂದಿ ಹೋಗುವ ದೀಪಕ್ಕೆ ಎಣ್ಣೆ ಹಾಕಿ ಬರುತ್ತಾನೆ. ಬೇಡರ ಹುಡುಗನಿಗೆ ಸ್ವಾಮಿ ಸಮಾಧಿಯ ಪೂಜೆ ನಿನ್ನ ವಂಶಕ್ಕೆ ಮೀಸಲಾಗಲಿ ಎಂದು

ನುಡಿದರಂತೆ. ಅದೇ ರೀತಿ ಇಂದಿಗೂ ಹೊರಮಠದಲ್ಲಿ ಬೇಡ ಜನಾಂಗದವರೆ ಸಮಾಧಿಯ ಪೂಜೆ ಮಾಡುತ್ತಾರೆ.

**೪.೬. ಪವಾಡಗಳ ಆಶಯ.**

ಧಾರ್ಮಿಕ ಮಹಾಪುರುಷರೆಲ್ಲರು ಸಾಮಾನ್ಯರಂತೆಯೇ ಬದುಕಿ ಉನ್ನತ ಧ್ಯೇಯಾದರ್ಶಗಳಿಂದ ಒಡಗೂಡಿದ ಬಾಳನ್ನು ಬಾಳಿದವರು. ಇಂಥ ಮಹಾನುಭಾವರ ವಿಲಕ್ಷಣ ವ್ಯಕ್ತಿತ್ವಕ್ಕೆ ಒಳಗಾಗಿ ಸಾಮಾನ್ಯ ಜನತೆ ಮೊದಲಿನಿಂದಲೂ ಅವರನ್ನು ತಮ್ಮಂತೆ ಮಾನವರೆಂಬುದನ್ನೇ ಮರೆತು ಅವತಾರಿ ಪುರುಷರು, ದೈವೀಪುರುಷರು ಎಂದು ಬಗೆದು ಅವರ ಕೃತಿಗಳಿಗೆ ಪವಾಡದ ರೂಪ ಕೊಟ್ಟರು. ಮಹಾಪುರುಷರು ಕಾಲವಾದ ನಂತರ ಅವರ ಲೀಲೆಯನ್ನು ಜನ ಪವಾಡ, ಕಥೆಗಳ ರೂಪದಲ್ಲಿ ಕಟ್ಟಿದರು. ಭಾರತೀಯ ಯೋಗಶಾಸ್ತ್ರಜ್ಞರು ಹಠಯೋಗದಂತಹ ಸಾಧನೆಯಿಂದ ಹಂತ ಹಂತವಾಗಿ ಅಷ್ಟೈಶ್ವರ್ಯಗಳನ್ನು ಪವಾಡಗಳಂತಹ ಸಿದ್ಧಿಗಳನ್ನು ಪಡೆದುಕೊಳ್ಳಬಹುದು. ಹಠಯೋಗ ಸಾಧನೆಯಿಂದ ಸಿದ್ಧಿಸಿಕೊಂಡ ಪವಾಡಗಳನ್ನು ದೈವೀಸಂಭೂತರೆನಿಸಿದ ದೇವರ ಪ್ರೀತಿಗೆ ಪಾತ್ರರಾದವರು ಪ್ರಯೋಗಿಸುವಂಥವುಗಳು.

ಜನತೆಯ ಒಲವು, ನಿಲುವುಗಳನ್ನು ನಂಬಿಕೆಗಳನ್ನು ಒಂದು ನೆಲೆಯಲ್ಲಿ ಪ್ರತಿನಿಧಿಸುತ್ತವೆ. ಮಹಾತ್ಮರೆಲ್ಲರೂ ವಾಸ್ತವ ಬದುಕಿನಲ್ಲಿ ಉಸಿರಾಡಿದ ಮನುಷ್ಯಜೀವಿಗಳೇ. ಆತ್ಮ ಸಂಸ್ಕಾರಗೊಂಡು ಬದುಕಿನಲ್ಲಿ ಸತ್‌ಶ್ರದ್ಧೆ, ಸತ್‌ಸಂಕಲ್ಪ, ಭಿನ್ನವಿಲ್ಲದ ನಡೆ-ನುಡಿ, ಆದರ್ಶಪೂರ್ಣವಾದ ಯತ್ನ ಹಾಗೂ ಮಾನವ ಜನಾಂಗದ ಏಳಿಗೆಯ ಚಿಂತನೆ ಇವೇ ಮೊದಲಾದವುಗಳನ್ನು ಅಳವಡಿಸಿಕೊಂಡು ಬಾಳಿದಾಗ ಲೋಕದ ಕಣ್ಣಿಗೆ ಅಂತಹ ವ್ಯಕ್ತಿ ಭಿನ್ನವಾಗಿ ಕಾಣಬರುತ್ತಾನೆ. ಅವರು ಮನಸ್ಸು ಮಾಡಿದರೆ ಎಂತಹ ಅಸಾಧ್ಯವೆನ್ನಿಸಿದ ಕಾರ್ಯಗಳೂ ಕೂಡ ಸಾಧ್ಯವಾಗುವವು. ಲೋಕದ ಮಾನವರ ಸಾಲಿನಲ್ಲಿ ಅವರನ್ನು ಅಳೆಯಲಾಗದು ಎಂಬುದು ಭಕ್ತಜನರ ಹೃದಯಪೂರ್ವಕ ನಂಬಿಕೆ. ಅವರು ಸಂಸಾರಿಗಳಲ್ಲ. ಆದರೆ ಮದ್ಗಾನಸ್ವಾಮಿ ಮತ್ತು ಗೋಣಿಬಸಪ್ಪ ಸಂಸಾರದ ಜೊತೆಗೆ ಮಹತ್ವವನ್ನು ಪಡೆದವರು. ಕಾಮಿಗಳಲ್ಲ, ಕ್ರೋಧಿಗಳಲ್ಲ, ದೇವರಸಮಾನರು ದೇವರೊಡನೆ ವ್ಯವಹರಿಸುವಂತವರು. ಸರ್ವಾಂತರ್ಯಾಮಿಗಳು. ಪವಾಡ ಪುರುಷರು ಎಂದು ಸಾಮಾನ್ಯ ಜನತೆಗೆ ತಿಳಿಯಪಡಿಸಲು ಅವರ ಚರಿತ್ರೆಯಲ್ಲಿ ಪೌರಾಣಿಕ ವಾತಾವರಣ ನಿರ್ಮಿಸಿದ್ದಾರೆ.

ಧಾರ್ಮಿಕ ಮಹಾಪುರುಷರ ಆದರ್ಶಮಯ ಜೀವನ, ಎತ್ತಿಹಿಡಿದ ಮೌಲ್ಯಗಳು, ಧ್ಯೇಯ-ಧೋರಣೆಗಳು ಜನತೆಯ ಹೃದಯ ಮಂದಿರದಲ್ಲಿ ದೈವೀಭಾವನೆಯನ್ನು ಹುಟ್ಟಿಸುವವು. ಸಾಮಾಜಿಕ ಹಾಗೂ ಧಾರ್ಮಿಕ ಪರಿಸರವನ್ನು ನಿರ್ಮಿಸಿ ಶ್ರೀ ಸಾಮಾನ್ಯರಲ್ಲಿ ಜಡ್ಡುಗಟ್ಟಿದ ಅಜ್ಞಾನವನ್ನು ಹೋಗಲಾಡಿಸುವುದಾಗಿದೆ. ಉದಾತ್ತವಾದ ಶರಣ ಸಂಸ್ಕೃತಿಯನ್ನು ಕಾಯಕ ಹಾಗೂ ದಾಸೋಹದ ಮೂಲಕ ವ್ಯಷ್ಟಿ-ಸಮಷ್ಟಿಗಳೆರಡರ ಹಿತವನ್ನು ಸಮನ್ವಯಗೊಳಿಸುತ್ತಾರೆ. ಸರ್ವ ಸಮಾನತೆ, ಅಸ್ಪೃಶ್ಯತೆ ನಿವಾರಣೆಗಾಗಿ, ವರ್ಣಭೇದವನ್ನು ಪ್ರತಿಭಟಿಸುತ್ತಾರೆ.

ಜಾತಿ-ಮತ, ಉಚ್ಚ-ನೀಚ ಈ ಭೇದ-ಭಾವಗಳ ಸಂಕುಚಿತ ಮನೋಭಾವದಿಂದ ಮುಕ್ತರಾಗಿ, ಮೋಸ, ವಂಚನೆ, ಢಾಂಬಿಕತೆ ಮತ್ತು ಮೂಢನಂಬಿಕೆಗಳ ನಿವಾರಣೆಗಾಗಿ, ಸತ್ಯ, ಧರ್ಮ, ದಯೆ, ಸರ್ವರ ಸೊತ್ತಾಗಿ ದುಡಿದು ತಿನ್ನುವುದು, ನ್ಯಾಯ ಮಾರ್ಗದಿಂದ ಎಷ್ಟು ಬೇಕೋ ಅಷ್ಟನ್ನು ಗಳಿಸುವುದು ಕಾಯಕ ಧರ್ಮವಾಗಿ ಬಾಳಿದರು.

ಪವಾಡಗಳ ಮುಖೇನ ಶ್ರೀಸಾಮಾನ್ಯರ ಬದುಕನ್ನು ಹಸನುಗೊಳಿಸಲು ದುಃಖಿತರ, ಸಂಕಟಕ್ಕೆ ಒಳಗಾದವರ, ರೋಗರುಜಿನಿ ವಾಸಿ ಮಾಡುವುದು, ಅನಿಷ್ಟ ಆಚರಣೆಗಳಿಂದ ಮುಕ್ತಗೊಳಿಸುವುದು, ಬರಗಾಲ, ಕ್ಷಾಮಗಳನ್ನು ದೂರಮಾಡುವುದು, ಕಣ್ಣಿಲ್ಲದವರಿಗೆ ಕಣ್ಣುಗಳನ್ನು, ಮಾತನಾಡಲಾಗದ ಮೂಗರಿಗೆ ಮಾತನಾಡುವ ಶಕ್ತಿಯನ್ನು ನೀಡಿದರು. ಅಂಗವಿಕಲರಿಗೆ ಕೈ-ಕಾಲುಗಳನ್ನು ಅನುಗ್ರಹಿಸಿ ಅಂಗವಿಕಲರ ಬಾಳನ್ನು ಹಸನುಗೊಳಿಸಿದರು. ಮಕ್ಕಳಿಲ್ಲದವರಿಗೆ ಮಕ್ಕಳ ಫಲವನ್ನು ನೀಡುವುದು, ರೋಗಿಗಳಿಗೆ ಮದ್ದನ್ನು ನೀಡುವುದು, ದುಷ್ಟರನ್ನು ನಿಗ್ರಹಿಸುವುದು, ಕೆರೆಕಟ್ಟೆಗಳನ್ನು ಕಟ್ಟಿಸುವುದು ಹೀಗೆ ಸಾಮಾಜಿಕ ಹಿತವನ್ನು ಕಾಯುವ ಸಲುವಾಗಿ ಮಾಡಿದ ಜನೋಪಯೋಗಿ ಕಾರ್ಯಗಳಿಂದ ಜನರ ಮನಸ್ಸಿನಲ್ಲಿ ಸ್ಮರಣೀಯವಾಗಿ ಉಳಿದರು. ಜನ ಇವರನ್ನು ದೈವತ್ವದ ಸ್ಥಾನಕ್ಕೆ ಏರಿಸಿ ಆರಾಧಿಸತೊಡಗಿದರು.

ತಿಪ್ಪೇರುದ್ರಸ್ವಾಮಿ ಮಾಳಮ್ಮನಿಗೆ ಕಣ್ಣು ತೆರೆಸುವಂತಹದ್ದು. ಎಮ್ಮೆಯನ್ನು ಸಾಯಿಸಿ ಪುನಃ ಬದುಕಿಸುವಂತಹದ್ದು. ನಿಡುಗಲ್ಲು ದೊರೆ ಕಾಲುವೆಯಲ್ಲಿ ಹಾಕಿ ಮುಚ್ಚಿ ಹೋಗಿದ್ದಾಗ ಸ್ವಾಮಿ ಅಲ್ಲಿ ಪ್ರತ್ಯಕ್ಷನಾಗಿ ದರ್ಶನಕೊಟ್ಟು ನಿಡಗಲ್ಲು ದೊರೆ ಕ್ಷಮೆಯಾಚಿಸುವಂತೆ ಮಾಡಿದ್ದು. ಕೊಟ್ಟೂರು ಬಸವೇಶ್ವರ ಗೋವಿಂದ ಎಂಬ ಬ್ರಾಹ್ಮಣ ಧನದ ಆಸೆಯಿಂದ ೨೦೦ ವರಹ ಹಣವನ್ನು ವಾಪಸ್ಸು ನೀಡದೆ ವಂಚಿಸಿದ್ದರಿಂದ ಪ್ರಾಯಶ್ಚಿತ ಉಂಟಾಗುವಂತೆ ಮಾಡಿ ಕಣ್ಣನ್ನು ತೆರೆಸಿದ್ದು. ಗೋಣಿಬಸವೇಶ್ವರ ಶಿವನಯ್ಯನ ಗರ್ವವನ್ನು ಮುರಿದು ಕ್ಷಮೆಯಾಚಿಸುವಂತೆ ಮಾಡಿ ಅಂಧಕಾರದ ಕಣ್ಣನ್ನು ತೆರೆಸುವ ನೆಲೆಯಲ್ಲಿ ಕಾರ್ಯಪ್ರವೃತ್ತರಾದವರು.

ಸಮಾಜದಲ್ಲಿ ಜಾತಿ, ಮತ, ಧರ್ಮ, ಪಂಥಗಳ ಹೆಸರಿನಲ್ಲಿ ಸಂಘರ್ಷಗಳು ನಡೆಯುತ್ತಿದ್ದವು. ಇವುಗಳಿಂದಾಗಿ ಸಾಮಾಜಿಕ, ಧಾರ್ಮಿಕ ವಾತಾವರಣ, ಕಲುಷಿತಗೊಂಡು ಶ್ರೀಸಾಮಾನ್ಯರ ಬದುಕು ದುಃಸ್ಥಿರವಾಯಿತು. ಇಂತಹ ಧರ್ಮಾಂದತೆ, ಮತಾಂಧತೆ, ಅಸಮಾನತೆ, ಅನೈತಿಕತೆ ತುಂಬಿರುವಂತಹ ಸಮಾಜವನ್ನು ತಿಳಿಗೊಳಿಸುವುದು, ಅನಿವಾರ್ಯವಾಗಿದ್ದ ಸಂದರ್ಭದಲ್ಲಿ ನಾಡಿನಾದ್ಯಂತ ಅವತರಿಸಿದ ಅನೇಕ ಸಾಧು-ಸಂತರು ಜನರನ್ನು ಪವಾಡಗಳ ಮೂಲಕ ಅದ್ಭುತ ಶಕ್ತಿಯನ್ನು ಮೆರೆದು ಸ್ವಚ್ಛ ಸಮಾಜ ನಿರ್ಮಾಣ ಮಾಡುವ ನಿಟ್ಟಿನಲ್ಲಿ ಶ್ರಮಿಸಿದಂತಹವರು. ಯಾರು ಶ್ರೇಷ್ಠರಲ್ಲ ಯಾರೂ ಕನಿಷ್ಠರಲ್ಲ ಎಲ್ಲರೂ ಕಾಯಕದ ಮೂಲಕ ಬದುಕನ್ನು ಹಸನುಗೊಳಿಸಬೇಕು. ನಿಮ್ಮಲ್ಲಿರುವ ದಾರಿದ್ರ್ಯಕ್ಕೆ ಕಾರಣ ನಿಮ್ಮ ಸೋಮಾರಿತನ ಮೂಢನಂಬಿಕೆ, ಅಂಧಾಕಾರ, ಅಜ್ಞಾನಗಳೇ ಕಾರಣ. ಮೋಸ-ವಂಚನೆಯಿಂದ ದೂರವಿರಿ. ಇವುಗಳಿಂದ ಹೊರಬಂದಾಗ ನಿಮ್ಮ ಕಷ್ಟಗಳು ಪರಿಹಾರವಾಗುತ್ತವೆ. ಒಳ್ಳೆಯ ನೀತಿ-ನಡೆ-ನುಡಿಗಳಿಂದ ಸನ್ಮಾರ್ಗದಿಂದ ನಡೆಯಿರಿ ಪೂಜೆ-ಪುನಸ್ಕಾರಗಳಿಗಿಂತ ಹಸಿದವನಿಗೆ ಅನ್ನ ಮುಖ್ಯ ಎನ್ನುವ ಸಂದೇಶಗಳನ್ನು ಜನತೆಗೆ ನೀಡಿದರು. ಜನರ ಸಂಕಟಗಳನ್ನು ನಿವಾರಿಸಲು ಶ್ರಮಿಸಿದವರು.

ಧಾರ್ಮಿಕ ಮಹಾಪುರುಷರ ಜೀವನ ವೃತ್ತಾಂತವೇ ಆ ಧರ್ಮದ ಅನುಯಾಯಿಗಳ ಸಾಮಾನ್ಯ ಜನತೆಗೆ ದಾರಿದೀಪ. ಆ ಬೆಳಕಿನಲ್ಲಿ ಅವರು ತಮ್ಮ ಬಾಳನ್ನು ಬೆಳಗಿಸಿಕೊಳ್ಳುವರು. ಧಾರ್ಮಿಕ ಮಹಾಪುರುಷರೇ ಆಯಾ ಧರ್ಮದ ಸಾಂಸ್ಕೃತಿಕ ಪ್ರತಿನಿಧಿಗಳು, ಧಾರ್ಮಿಕ ತತ್ವಗಳು, ಜೀವನ ಮೌಲ್ಯಗಳು, ಧ್ಯೇಯಾದರ್ಶನಗಳನ್ನು ಪವಾಡಗಳ ಮೂಲಕ ಜನತೆಗೆ ಬಿಂಬಿಸಲು ಶ್ರಮಿಸಿದರು.

**೪.೭. ಪವಾಡಗಳು ಮತ್ತು ನಂಬಿಕೆಯ ಜೊತೆಗಿರುವ ಸಂಬಂಧ.**

ನಂಬಿಕೆಗಳೆಲ್ಲ ಜ್ಞಾನದ ತವರೆನ್ನಲಾಗದ್ದಿದ್ದರೂ ಎಲ್ಲ ಜ್ಞಾನಕ್ಕೆ ನಂಬಿಕೆಗಳೇ ತಳಹದಿಯೆಂದು ನಿಸ್ಸಂದೇಹವಾಗಿ ಹೇಳಬಹುದು. ಮನುಷ್ಯ ನಂಬಿಕೆಗಳ ಜೊತೆಗೆ ಜನ್ಮತಾಳುತ್ತಾನೆ. ತೊಟ್ಟಿಲಿನಿಂದ ದುವ್ವೆಯವರೆಗೆ ಅವೇ ಅವನಿಗೆ ಪುಷ್ಟಿ ನೀಡುತ್ತವೆ. ಅವು ಆಹಾರ ಧಾನ್ಯಗಳಿಗಿಂತ ಹೆಚ್ಚು ಪುಷ್ಟಿದಾಯಕ, ಟಾನಿಕ್ಕುಗಳಿಗಿಂತಲೂ ಹೆಚ್ಚು ಶಕ್ತಿದಾಯಕ, ಉಸಿರಿಗಿಂತಲೂ ಚೈತನ್ಯದಾಯಕ. ಒಂದಲ್ಲ ಒಂದು ವಿಧದ ನಂಬಿಕೆಗಳಿಲ್ಲದೆ ಮನುಷ್ಯ ಭೂಮಿಯ ಮೇಲೆ ಬದುಕಲಾರ ಎಂದು ಘೋಷಿಸುತ್ತಾನೆ. ಆಳುವ ವರ್ಗಗಳ ಅಧಿಕಾರವನ್ನು ಧಮನಗೊಳಿಸಿ ಜನಸಾಮಾನ್ಯರ ಹಿತವನ್ನು ರಕ್ಷಿಸುವ ಸಲುವಾಗಿ ವ್ಯವಸ್ಥೆಯನ್ನು ಸರಿಪಡಿಸಲು ನಂಬಿಕೆಗಳು ಮುಖ್ಯವಾಗುತ್ತವೆ. ವ್ಯಕ್ತಿ ಸಮುದಾಯದ ನಡವಳಿಕೆಗಳೆಲ್ಲ ಆಯಾ ಕಾಲದ ಒಟ್ಟಾರೆ ಜನಪದ ಜೀವನವನ್ನು ರೂಪಿಸುತ್ತವೆ. ಬದುಕಿನ ರೀತಿ-ನೀತಿಗಳನ್ನು ತಿಳಿಸುವಲ್ಲಿ ನಂಬಿಕೆಗಳು ಅವಶ್ಯಕವಾಗಿವೆ.

ಆದಿಮಾನವನ ನಂಬುಗೆಗಳು ಕಾಲದಿಂದ ಕಾಲಕ್ಕೆ ಸಾಗಿ ಬರುವಾಗ ಹಲವು ರೂಪಾಂತರಗಳನ್ನು ಹೊಂದುವುದು ಸಹಜ. ರೂಪಾಂತರ ಹೊಂದಿದರೂ ಅವು ಕೆಲಮಟ್ಟಿಗೆ ತಮ್ಮ ಮೂಲ ಗುಣಗಳನ್ನು ಹಾಗೆಯೇ ಉಳಿಸಿಕೊಂಡು ಬಂದುದನ್ನು ಕಾಣುತ್ತೇವೆ. ಪವಾಡಗಳು ನಂಬಿಕೆಯನ್ನು ಒಳಗೊಂಡಿವೆ. ಸಮುದಾಯ ನಂಬಿಕೆಗಳನ್ನು ಅವಲಂಬಿಸಿಕೊಂಡು ಬೆಳೆದು ಬಂದಿವೆ. ನಂಬಿಕೆಗಳ ಪ್ರತೀಕವಾಗಿ ಅದ್ಭುತ ಸಂಗತಿಗಳನ್ನು ಪವಾಡ ಕಥೆಗಳಂತೆ ಉತ್ಪ್ರೇಕ್ಷೆ ಮಾಡಿ ಹೇಳಿದ್ದಾರೆ. ಇದು ಎಲ್ಲಾ ಕಾಲಕ್ಕೂ ಅನ್ವಯ ವಾಗುವಂತಹದ್ದು. ಶರಣರ ಬದುಕನ್ನು ಕುರಿತು ಕಾವ್ಯ ಬರೆಯುವಾಗ ಕವಿಗಳು ಜನಸಾಮಾನ್ಯರಲ್ಲಿ ಬಳಕೆಯಲ್ಲಿರುವಂತಹ ಐತಿಹ್ಯಗಳಿಗೆ ಹೊಸ ರೂಪಕೊಟ್ಟವರು. ಈಗ ಅದು ಜನಸಾಮಾನ್ಯರ ಬಳಕೆಯಲ್ಲಿ ಅದ್ಭುತವಾಗಿ ಪರಿವರ್ತನೆಯಾಗಿದೆ. ಜನರನ್ನು ಭಕ್ತಿಮಾರ್ಗದಲ್ಲಿ ನಡೆಸಲು ಪವಾಡಗಳು ನೆರವಾದವು.

ಜನಪದ ಕವಿಗೆ ಪವಾಡಗಳೇ ಒಂದು ಮುಖ್ಯಸಾಧನವಾಗುತ್ತವೆ. ಪವಾಡಗಳನ್ನು ಅವಲೋಕಿಸಿದಾಗ ಅವು ಮಾನವೀಯ ಕಳಕಳಿವುಳ್ಳವುಗಳಾಗಿವೆ. ಕಾಯಕದ ಕಡೆ ಗಮನ ಹರಿಸಿದವರು, ಗಿರಿಜನ ಉದ್ಧಾರಕ್ಕೆ ಶ್ರಮಿಸಿದವರು. ನಾಸ್ತಿಕರನ್ನಾಗಿ ಮಾಡಲು ಶ್ರಮಿಸಿದವರು. ಇವರು ಮಾಡಿದ ಸಮಾಜ ಸುಧಾರಣೆ ಧರ್ಮದ ಉದ್ಧಾರಕ್ಕಾಗಿ, ಒಬ್ಬ ವ್ಯಕ್ತಿ ಶ್ರೇಷ್ಠ ಎನಿಸಿಕೊಳ್ಳುವುದು ಅಥವಾ ಮಹಾತ್ಮನಾಗುವುದು ಪವಾಡಗಳಿಂದಲ್ಲ, ಆತನು ಮಾಡುವ ಸೇವೆಯಿಂದ. ಪುರಾಣ ಪ್ರಸಿದ್ಧರಾದ ಐತಿಹಾಸಿಕ ವ್ಯಕ್ತಿಯನ್ನು ಪುರಾಣ ವ್ಯಕ್ತಿಯಾಗಿ ಮಾಡುವಾಗ ಪವಾಡಗಳು ಅದರ ಅಂಗಗಳಾಗುತ್ತವೆ. ಪವಾಡಗಳನ್ನು ಅನಿವಾರ್ಯ ಸಂದರ್ಭಗಳಲ್ಲಿ ಮಾಡಿ ತೋರಿಸಿದ್ದಾರೆ.

ಶರಣರ ಬದುಕು ಅಲೌಕಿಕವೂ, ಅಸಾಮಾನ್ಯವೂ ಆಗಿರುವುದರಿಂದ ನಮಗೆ ಅವರ ಬದುಕು ಪವಾಡಮಯವಾಗಿದೆ ಎಂದೆನಿಸುತ್ತದೆ. "ಪವಾಡಗಳೆಲ್ಲ ಸತ್ಯದ ಮುಖಕ್ಕೆ ಮುಚ್ಚಿದ ಸುವರ್ಣದ ಮುಚ್ಚಳಗಳಂತಿವೆ. ಆ ಮುಚ್ಚಳ ಓರೆ ಮಾಡಿದಾಗ ಸತ್ಯದ ಸಾಕ್ಷಾತ್ಕಾರವಾಗುವಂತೆ ಪವಾಡಗಳಲ್ಲಿನ ಅದ್ಭುತ ಅಂಶಗಳನ್ನು ಆಚೆ ಸರಿಸಿದಾಗ ಸತ್ಯ ಗೋಚರವಾಗುತ್ತದೆ."[೨೩] ಧಾರ್ಮಿಕ ಶರಣರ ಜೀವನವೇ ಧರ್ಮ ಮಾರ್ಗದಲ್ಲಿ ನಡೆಯುವಂತೆ ಜನಸಾಮಾನ್ಯರಿಗೆ ಸಲಹೆಗಳನ್ನು ನೀಡುವುದು. ಧಾರ್ಮಿಕ ಮಹಾಪುರುಷರು ಆದರ್ಶಮಯವಾದ ಬದುಕನ್ನು ನಡೆಸುವುದು ತತ್ವ, ಆದರ್ಶಗಳೇ ಜನರಿಗೆ ದಾರಿ ದೀಪವಾಗಿವೆ. ಹೀಗೆ ಜನತೆಯಲ್ಲಿ ದೈವೀಭಾವನೆಯನ್ನು ಮೂಡಿಸಲು ಅದ್ಭುತ ಶಕ್ತಿಯ ಪ್ರದರ್ಶನ ಮಾಡಿದವರು. ಜನಸಾಮಾನ್ಯರಲ್ಲಿ ದೈವೀಸ್ಥಾನವನ್ನು ಅಲಂಕರಿಸಿದರು. ಪವಾಡಗಳು ಧಾರ್ಮಿಕ ಶರಣರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿವೆ.

ಜನಸಾಮಾನ್ಯರು ಪವಾಡಗಳನ್ನು ನಂಬಿರುವುದರಿಂದ ಅವು ಸಮುದಾಯದ ಆಚರಣೆಯಲ್ಲಿ ಸೇರಿಹೋಗಿವೆ. ನಂಬಿಕೆಯನ್ನು ಅವಲಂಬಿಸಿ ಪವಾಡ ಕಥೆಗಳನ್ನು ಕಟ್ಟಿದ್ದಾರೆ. ಜನರ ನಂಬಿಕೆಯೇ ಭಕ್ತಿಯಾಗಿ ಬೆರೆತು ಹೋಗಿರುವುದನ್ನು ಕಾಣಬಹುದು. ನಂಬಿಕೆಗಳ ಜೊತೆಗೆ ಪವಾಡ ಕಥೆಗಳಿಗೆ ಸಾಂಸ್ಕೃತಿಕವಾದ ಮೌಲ್ಯವಿದೆ. ನಂಬಿಕೆಯೇ ಮಾನವನ ಬದುಕಿನ ಮೂಲಭೂತ ಆಧಾರತತ್ವ ಭೂಮಿಯ ಮೇಲೆ ಮನುಷ್ಯ ಒಂದಲ್ಲ ಒಂದು ರೀತಿಯಲ್ಲಿ ನಂಬಿಕೆಯನ್ನಾಶ್ರಯಿಸಿ ಬದುಕುತ್ತಾನೆ. ನಂಬಿಕೆ ಎನ್ನುವ ತತ್ವ ಅವನಲ್ಲಿ ಸ್ವಾಭಾವಿಕವಾಗಿ ಮತ್ತು ಆಂತರಿಕವಾಗಿ ಇರುವಂತಹದ್ದು. ನಂಬಿಕೆ ಮಾನವನಲ್ಲಿ ಧೈರ್ಯ ತುಂಬಿ ಜೀವನದ ಕಷ್ಟ-ಸಂಕಷ್ಟಗಳನ್ನು ಎದುರಿಸಲು ಸಹಾಯ ಮಾಡುತ್ತದೆ. ನಿರಾಶಾಜೀವಿಗೆ ಭವಿಷ್ಯತ್ತಿನ ಆಶಾಕಿರಣವು ಹಣತೆಯಾಗುತ್ತದೆ. ನಂಬಿಕೆಯನ್ನು ಆಶ್ರಯಿಸಿ ಪವಾಡಗಳು ಹೊಸ ರೂಪವನ್ನು ಪಡೆದಿವೆ. ಇವು ಜೀವನದ ದಿಕ್ಕನ್ನೆ ಬದಲಿಸುತ್ತವೆ. ಪವಾಡಗಳು ಮತ್ತು ನಂಬಿಕೆಗಳು ಜನಸಾಮಾನ್ಯರ ಬದುಕಿನಲ್ಲಿ ಬೆರೆತು ಹೋಗಿವೆ. ಸಮುದಾಯ ಜೊತೆಗೆ ಮಹತ್ವದ ಪಾತ್ರವನ್ನು ವಹಿಸಿವೆ. ಪವಾಡಗಳು ಮತ್ತು ನಂಬಿಕೆಗಳು ಒಂದು ನಾಣ್ಯದ ಎರಡು ಮುಖದಂತೆ ಗೋಚರವಾಗುತ್ತವೆ. ನಂಬಿಕೆ ಮತ್ತು ಪವಾಡಗಳೆರಡು ಅವಿನಾಭಾವ ಸಂಬಂಧವನ್ನು ಹೊಂದಿವೆ.

**ಅಡಿ ಟಿಪ್ಪಣಿ**

೧. ಸಾಹಿತ್ಯಾನ್ವೇಷಣೆ., ವ್ಹಿ.ಜಿ.ಪೂಜಾರ, ಪುಟ.೨೨

೨. Encyclopedia, Britanica, Vol-12

೩. ವೀರಶೈವ ಪುರಾಣಗಳು, (ಗುಬ್ಬಿಮಲ್ಲಣಾರ್ಯಕವಿ ವಿಮರ್ಶಾ ಲೇಖನಗಳು)., ವಿದ್ಯಾಶಂಕರ, ಪುಟ.೩೫೮

೪. ವೀರಶೈವಾಮೃತ ಪುರಾಣ ವಿವೇಚನೆ, ಗುರುಪಾದ ಮರಿಗುದ್ದಿ (ಸಂ), ಪುಟ.೨.

೫. ಅದೇ ಪುಟ.೧೦೦

೬. ಅದೇ ಪುಟ.೧೧೫

೭. ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ೩, ಧರ್ಮ, ರಹಮತ್ ತರೀಕೆರೆ (ಪ್ರಧಾನ ಸಂಪಾದಕ) ಪುಟ,೨೦೭, ೨೦೦೦

೮. ವೀರಶೈವ ಪುರಾಣಗಳು., ಎಸ್.ವಿದ್ಯಾಶಂಕರ, ಪುಟ.೩೬೭, ೨೦೦೬.

೯. ಕೊಟ್ಟೂರು ಬಸವೇಶ್ವರ ಒಂದು ಸಾಂಸ್ಕೃತಿಕ ಅಧ್ಯಯನ., ಎಂ.ಶರಣಪ್ಪ, ಪುಟ.೪೧, ೧೯೯೬.

೧೦. ಕೊಟ್ಟೂರು ಬಸವೇಶ್ವರ ರಾಜೀವಂ (೭ ಸಂಧಿ)., ರುದ್ರಮುನಿ ಅಯ್ಯ,

೧೧. ಕೊಟ್ಟೂರು ಬಸವೇಶ್ವರ ಚಾರಿತ್ರ್ಯ., ಡಾ.ಆರ್.ಸಿ.ಹಿರೇಮಠ (ಸಂ)., ಪುಟ.೬೨

೧೨. ಅದೇ, ಪುಟ.೪೮

೧೩. ಅದೇ, ಪುಟ.೨೦.

೧೪. ಬಸವಲಿಂಗಕವಿಕೃತ, ಕೊಟ್ಟೂರು ಬಸವೇಶ್ವರ ಚಾರಿತ್ರ್ಯ., ಡಾ.ಆರ್.ಸಿ.ಹಿರೇಮಠ (ಸಂ)., ಪುಟ.೬೮.

೧೫. ಅದೇ ಪುಟ.೭೨

೧೬. ಗೋಣಿಬಸಪ್ಪ ಚರಿತ್ರೆ., ಜ್ಯೋತಿ ಹಾಲಪ್ಪ, ಪುಟ.೨೦, ಹರಪನಹಳ್ಳಿ.

೧೭. ಅದೇ, ಪುಟ.೨೨

೧೮. ಅದೇ, ಪುಟ.೨೬

೧೯. ಅದೇ, ಪುಟ.೨೮

೨೦. ಅದೇ, ಪುಟ.೫೩

೨೧. ಶ್ರೀ ಕೊಟ್ಟೂರು ಗುರುಬಸವ ಚಾರಿತ್ರ್ಯ, ಬಸವಲಿಂಗಕವಿಕೃತ, ಪುಟ.೭೮

೨೨. ಕೊಟ್ಟೂರು ಗುರುಬಸವರಾಜೀವಂ, ರುದ್ರಮುನಿಅಯ್ಯ (೩ನೇ ಸಂಧಿ)

೨೩. ವೀರಶೈವ ಸಾಹಿತ್ಯದಲ್ಲಿ ಪವಾಡ ಕಥೆಗಳು., ವ್ಹಿಜಿ ಪೂಜಾರ್, ಪುಟ.೧೪

## ಅಧ್ಯಾಯ - ಐದು

## ಪಂಚಗಣಾಧೀಶ್ವರರ ಆಚರಣೆಗಳು

೫.೧. ಧನುರ್ಮಾಸ ಪೂಜೆ

೫.೨. ಕಾರ್ತೀಕ ಮಾಸ

೫.೩. ಗುಗ್ಗರಿ ಹಬ್ಬ

೫.೪. ಕೊಬ್ಬರಿ ಸುಡುವ ಆಚರಣೆ

೫.೫. ತೆಪ್ಪೋತ್ಸವ

೫.೬. ಪಾಲ್ಗುಣಮಾಸ

೫.೭. ನಾಗಾರಾಧನೆ

೫.೮. ನಾಮಕರಣ

೫.೯. ಕಡಬಿನ ಕಾಳಗ

೫.೧೦. ನಿತ್ಯ ಆಚರಣೆ ಮತ್ತು ವಾರದ ಆಚರಣೆಗಳು

೫.೧೧. ವಾಹನೋತ್ಸವ

೫.೧೨. ಬಾಯಿಬೀಗ

೫.೧೩. ಓಕಳಿ ಆಟ

## ಅಧ್ಯಾಯ-ಐದು

# ಪಂಚಗಣಾಧೀಶ್ವರರ ಆಚರಣೆಗಳು

ಮಾನವ ಬದುಕಿನುದ್ದಕ್ಕೂ ಹಲವಾರು ಸಂಪ್ರದಾಯಗಳಿಗೆ ಬದ್ಧನಾಗಿ ಬದುಕುತ್ತಾನೆ. ಹಾಗೆಯೇ ಅನೇಕ ಸಂಪ್ರದಾಯಗಳ ಹಿನ್ನಲೆಯಲ್ಲಿ ಮಾನವನ ಬದುಕು ರೂಪುಗೊಂಡಿದೆ. ಭೂಮಿಯ ಮೇಲೆ ಮೂಡಿ ಬಂದ ಮಾನವನಿಗೆ ಅಪರಿಚಿತವಾದ ನಿಸರ್ಗ ಅವನಲ್ಲಿ ಭಯ ಭೀತಿಗಳನ್ನು ಮೂಡಿಸಿರುವುದು ಅಸ್ವಾಭಾವಿಕವೇನಲ್ಲ. ಭೋರಿಟ್ಟು ಮಳೆ ಹೊಡೆಯುವಾಗ, ನದಿ ನಾಲೆಗಳು ನಿರ್ಜನಿಗಳು ಉಕ್ಕಿ ಭೋರ್ಗರೆದು ಹರಿಯುವಾಗ ಗುಡುಗು ಸಿಡಿಲುಗಳು ಅಬ್ಬರದಿ ಆರ್ಭಟಿಸುವಾಗ ಕೋಲುಮಿಂಚು ಕಣ್ಣು ಕುಕ್ಕುವಾಗ, ಭೋಂಕನೆ ಬಿರುಗಾಳಿ ಬೀಸಿದಾಗ, ಹೆದರಿದೆ ಆದಿಮಾನವ ಓಡಿಯೋಗಿ ಗವಿಗಳಲ್ಲಿ, ಪೊದೆಗಳಲ್ಲಿ ವಾಸಿಸತೊಡಗಿದನು. ಜೊತೆಗೆ ನಿಸರ್ಗ ಶಕ್ತಿಗಳನ್ನೇ ದೇವರೆಂದು ಆರಾಧಿಸತೊಡಗಿದನು. ಭೂಮಿ, ಆಕಾಶ, ಚುಕ್ಕೆ, ಸೂರ್ಯ, ಚಂದ್ರ, ಮಳೆ, ಹೊಳೆ, ಹೊಗೆ ಪ್ರಕೃತಿಯ ಚರಾಚರ ಸ್ವರೂಪವೆಲ್ಲವೂ ದೇವರಾಗಿ ಕಂಡಿತು. ಪ್ರಕೃತಿ ಪೂಜೆಗೆ ಭಕ್ತಿ ಬೀಜವಾಯಿತು. ದೇವರಿಲ್ಲದೆ ನಾವಿಲ್ಲ, ಜಗವಿಲ್ಲ, ವಿಶ್ವವೇ ಶೂನ್ಯ ಎಂಬ ಭಾವನೆ ಅಂದಿನವರಲ್ಲಿ ಬೆಳೆಯಿತು. ತಮ್ಮನ್ನು ಕಾಯುವವನು ಕೊಲ್ಲುವವನು ದೇವರೆಂಬ ಅಚಲ ನಂಬಿಕೆ ಅವರಲ್ಲಿ ಹುಟ್ಟಿಕೊಂಡಿತು.

ದೇವರು, ಧರ್ಮ, ಸಂಪ್ರದಾಯ, ನಂಬಿಕೆಯ ತಳಹದಿಯ ಮೇಲೆ ಆಚರಣೆಗಳು ಹುಟ್ಟಿಕೊಂಡವು. ಇವು ಭಾವನಾತ್ಮಕ ಸಂಬಂಧಗಳನ್ನು ಗಟ್ಟಿಗೊಳಿಸುತ್ತಾ ಕೇಂದ್ರಿತ ನೆಲೆಗಳಲ್ಲಿ ಮನುಷ್ಯನನ್ನು ಕಟ್ಟಿಹಾಕುತ್ತವೆ. ಆಚರಣೆ, ನಂಬಿಕೆ, ಸಂಪ್ರದಾಯಗಳ, ತಳಹದಿಯ ಮೇಲೆ ರೂಪಿತವಾಗಿರುವಂತಹದು. ಆಚರಣೆಗಳು ಮಾನವನಿಗೆ ಕಷ್ಟ ನಷ್ಟ ಬಂದಾಗ ಅದಕ್ಕೆ ಪರಿಹಾರವನ್ನು ಸೂಚಿಸುವ ನೆಲೆಯ ಒಳಗೆ ದೇವರ ಹೆಸರಿನಲ್ಲಿ ಹರಕೆ ಕಟ್ಟುವುದನ್ನು ಕಾಣುತ್ತೇವೆ. ಆಚರಣೆಗಳು ದೈವ ಹಾಗೂ ಮಾನವನ ನಡುವಿನ ಸಂಬಂಧವನ್ನು ಮತ್ತಷ್ಟು ಗಟ್ಟಿಗೊಳಿಸಿವೆ. ಒಂದೊಂದು ಸಂಸ್ಕಾರದಲ್ಲೂ ಹಲವು ವಿಧಿ ಆಚರಣೆಗಳಿರುವುದನ್ನು ನಾವು ಗಮನಿಸಬಹುದು. ಧರ್ಮ, ಸಂಪ್ರದಾಯ, ನಂಬಿಕೆ, ಆಚರಣೆಗಳ ನಡುವಿನ ಸಂಬಂಧವನ್ನು ಹೀಗೆ ವಿವರಿಸಬಹುದು. ಯಾವುದೇ ಧರ್ಮ ಅನೇಕ ಸಂಪ್ರದಾಯಗಳಿಂದ ಕೂಡಿರುತ್ತದೆ. ಸಂಪ್ರದಾಯಗಳು ಆಚರಣೆಗಳ ರೂಪದಲ್ಲಿ ಕಂಡುಬರುತ್ತವೆ. 'ಆಚರಣೆಗಳು' ಅನೇಕ ವಿಧಿಗಳಿಂದ ಕೂಡಿರುತ್ತವೆ, ವಿಧಿಗಳು ನಂಬಿಕೆಗಳಿಂದ ಸುತ್ತುವರಿದಿರುತ್ತವೆ. ಈ ಎಲ್ಲದರ ಕ್ರಿಯಾತ್ಮಕ ಅಭಿವ್ಯಕ್ತಿಯೇ ನಡವಳಿಕೆ ಎನಿಸುತ್ತದೆ.

ಹೀಗೆ ಧರ್ಮ, ವಿಧಿ, ನಂಬಿಕೆ, ಸಂಪ್ರದಾಯಗಳೇ ಆಚರಣೆಗಳಾಗಿ ರೂಪುಗೊಳ್ಳಲು ಪ್ರಬಲವಾದ ಕಾರಣವಾಗಿವೆ. ಸಂಪ್ರದಾಯ ಅಂಗೀಕರಿಸಿದ ಧಾರ್ಮಿಕ ವಿಧಿ-ವಿಧಾನಗಳ ಮೊತ್ತವೇ ಆಚರಣೆ. ಸಾಧು ಸಂತರಿಗೆ ಹಣ್ಣು ಕಾಯಿ, ಲೋಬಾನದ ಹೊಗೆಯೇ ಬಲು ಇಷ್ಟವಾದರೆ, ಹೆಣ್ಣು ದೈವಗಳಿಗೆ ಬಲಿಪೂಜೆಯನ್ನು ಇಷ್ಟಾರ್ಥವಾಗಿ ಆಚರಿಸುತ್ತಾರೆ.

ಪ್ರತಿಯೊಂದು ಆಚರಣೆಯು ತನ್ನದೇ ಆದ ವಿಶಿಷ್ಟ ನೆಲೆಯ ಒಳಗೆ ರೂಪಿತವಾಗಿರುವಂತಹದ್ದು, ಆಚರಣೆಗಳು ಬಾಯಿಬೀಗ ಹಾಕುವುದು, ಮುಡಿ ಕೊಡುವುದು. ಬಲಿಯನ್ನು ಕೊಡುವುದು, ಹರಕೆ ಕೊಡುವುದು. ಇವೆಲ್ಲವು ನಂಬಿಕೆ ಆಧಾರದ ಮೇಲೆ ರೂಪುಗೊಂಡಂತಹವು. ವಿಶೇಷ ದಿನಗಳಲ್ಲಿ ನಡೆಯುವಂತಹ ಹಬ್ಬ ಜಾತ್ರೆ, ಉತ್ಸವಗಳಲ್ಲಿ ಆಚರಣೆಗಳು ಮಹತ್ವವನ್ನು ಪಡೆಯುತ್ತವೆ. ಆಚರಣೆಗಳು ಹುಣ್ಣಿಮೆಯ ರಾತ್ರಿಯಲ್ಲಿ ನಡೆಸಲ್ಪಡುತ್ತವೆ. ಆಚರಣೆಗಳಿಗೆ ಜಾತ್ರೆ, ಉತ್ಸವಗಳು ಪ್ರಶಸ್ತವಾದ ಕಾಲವಾಗಿರುತ್ತದೆ. ಸುಗ್ಗಿಯ ಕಾಲದಲ್ಲಿ ರೈತರು ವರ್ಷವೀಡಿ ದುಡಿದು ದಣಿದಂತಹ ಜನರಿಗೆ ಬಿಡುವಿನ  ವೇಳೆಯಲ್ಲಿ ಹಬ್ಬ, ಜಾತ್ರೆ, ಉತ್ಸವ, ಆಚರಣೆಗಳು ಮನಸ್ಸಿಗೆ ಸಂತೋಷವನ್ನು ಉಂಟುಮಾಡುತ್ತವೆ. ಬೆಳದಿಂಗಳು, ಸುಖ, ಸಮೃದ್ಧಿ, ಶಾಂತಿಯ ಸಂಕೇತವಾಗಿದೆ. ಮನಸ್ಸಿಗೆ ಮುದವನ್ನು ನೀಡುತ್ತವೆ.

ಮನುಷ್ಯ ಹುಟ್ಟಿನಿಂದ ಹಿಡಿದು ಸಾವಿನ ಅಂಚಿನವರೆಗೆ ಹಲವಾರು ಆಚರಣೆಗಳ ಸುಳಿಯಲ್ಲಿ ಸಿಲುಕಿರುವುದನ್ನು ಕಾಣಬಹುದು. ಮನುಷ್ಯ ನಂಬಿಕೆ, ಸಂಪ್ರದಾಯ ಆಚರಣೆಗಳಿಂದ ಹೊರತಾಗಿಲ್ಲ. ಪಂಚಗಣಾಧೀಶ್ವರರ ಕುರಿತು ಹಲವಾರು ವಿಶಿಷ್ಟ ಆಚರಣೆಗಳು ರೂಢಿಯಲ್ಲಿವೆ. ಪಂಚಗಣಾಧೀಶ್ವರರ ಅನೇಕ ಆಚರಣೆಗಳು, ಹರಕೆಗಳು, ಜಾತ್ರೆ, ಉತ್ಸವಗಳು, ಹಬ್ಬ ಹರಿದಿನಗಳು ಕಂಡು ಬರುತ್ತವೆ. ಹಾಗೂ ವಿಶೇಷವಾದ ಆಚರಣೆ ಲೋಕವನ್ನು ಹೊಂದಿವೆ. ಸಮಾಜದಲ್ಲಿ ಧಾರ್ಮಿಕ ನಂಬಿಗೆಯ ಪ್ರತೀಕವಾಗಿ ಪಂಚಗಣಾಧೀಶ್ವರರ ಆಚರಣೆಗಳು ಕಂಡು ಬರುತ್ತವೆ. ಇಂತಹ ಆಚರಣೆಯ ಮೂಲಕ ಜನರು ಇವರನ್ನು ದೈವತ್ವದ ಸ್ಥಾನಕ್ಕೆ ಏರಿಸಿ ಆರಾಧಿಸಿಕೊಂಡು ಬಂದಿರುವುದನ್ನು ಕಾಣಬಹುದು.

**೫.೧. ಧನುರ್ಮಾಸ ಪೂಜೆ**

ಪ್ರತಿವರ್ಷ ಡಿಸೆಂಬರ್ ೧೫ ರಿಂದ ಜನವರಿ ೧೫ ಉತ್ತರಾಯಣ ಪುಣ್ಯಕಾಲ ಧನುರ್ಮಾಸದಲ್ಲಿ ಎಲ್ಲ ಶೈವ-ವೈಷ್ಣವ ದೇವಸ್ಥಾನಗಳಲ್ಲಿಯೂ ಬ್ರಾಹ್ಮೀ ಮಹೋತ್ಸವದಲ್ಲಿಯೇ ದೇವರಿಗೆ ವಿಶೇಷ ಅಭಿಷೇಕ, ಪೂಜೆ, ಮಹಾಮಂಗಳಾರತಿ ಇತ್ಯಾದಿಗಳು ನಡೆಯುತ್ತವೆ. ಸಂಕ್ರಮಣದ ಶುಭ ದಿನ ಪ್ರಾತಃಕಾಲದಲ್ಲಿ ನಾಯಕನಹಟ್ಟಿ ಒಳಮಠದಲ್ಲಿ ವಿಶೇಷ ಪೂಜೆ ಸಲ್ಲಿಸಿದ ಭಕ್ತವೃಂದ, ಹೊರಮಠಕ್ಕೆ ಪೂಜೆ ಸಲ್ಲಿಸಿ ಒಳಮಠಕ್ಕೆ ಹಿಂದಿರುಗಿ ಪಂಚಾಂಗ ಪಠಣ ಮಾಡಿ ಸಂಕ್ರಮಣದ ಶುಭಫಲ ಕೇಳಿ ಮಹಾಮಂಗಳಾರತಿಯಾದ ಮಾರನೆಯ ದಿನದ ವಿಶೇಷ ಪ್ರಸಾದವಾದ ಎಳ್ಳು ಬೆಲ್ಲವನ್ನು ಸ್ವೀಕರಿಸುತ್ತಾರೆ.

ವಿಶೇಷವಾದ ಪೂಜೆ ಪುನಸ್ಕಾರಗಳನ್ನು ಎಲ್ಲ ಭಕ್ತರು ಸೇರಿ ಪೂಜೆಯನ್ನು ಸಲ್ಲಿಸುತ್ತಾರೆ. ಧನುರ್ಮಾಸದಿಂದ ಆರಂಭವಾಗಿ ಮಕರ ಸಂಕ್ರಾಂತಿಯಂದು ಮುಗಿಯುತ್ತದೆ. ಇತ್ತೀಚಿನ ದಿನಗಳಲ್ಲಿ

ನಾಯಕನಹಟ್ಟಿಯಲ್ಲಿ ತಿಪ್ಪೇಸ್ವಾಮಿ ಮಾಲೆ ಮತ್ತು ಕೊಟ್ಟೂರಿನಲ್ಲಿ 'ಕೊಟ್ಟೂರೇಶ್ವರ ಮಾಲೆ' ಹಾಕುವುದು ಕಾಣಬಹುದು. ಮಾಲೆ ಹಾಕಿದವರು ಪೂಜೆಯನ್ನು ಮಾಡುತ್ತಾರೆ. ಮಕರ ಸಂಕ್ರಾಂತಿಯ ದಿನದಂದು ಅಕ್ಷಯ ಬುತ್ತಿ, ಒಣಕೊಬ್ಬರಿ, ಬೆಲ್ಲ, ಉತ್ತುತ್ತಿ, ಅರಿಷಿಣ ಕೊಂಬು ಎಲ್ಲವನ್ನು ಚೀಲದಲ್ಲಿ ಕಟ್ಟಿಕೊಂಡು ಬಂದು ದೇವಸ್ಥಾನದಲ್ಲಿಡುವುದರ ಮೂಲಕ ಧನುರ್ಮಾಸದ ಮಾಲೆಧರಿಸುವ ಆಚರಣೆಯನ್ನು ಕೊನೆಗೊಳಿಸುತ್ತಾರೆ.

**೫.೨. ಕಾರ್ತೀಕಮಾಸ**

ಶ್ರಾವಣ ಮಾಸದಲ್ಲಿ ನಾಯಕನಹಟ್ಟಿ ತಿಪ್ಪೇಸ್ವಾಮಿಯವರ ದರ್ಶನ ಮಾಡಿದರೆ ವರ್ಷವಿಡೀ ಹರ್ಷ ತುಂಬಿರುತ್ತದೆಂಬ ನಂಬಿಕೆ. ಈ ಮಾಸದಲ್ಲಿ ವಿಶೇಷವಾದ ಪೂಜಾ ಕಾರ್ಯಕ್ರಮಗಳು ನಡೆಯುತ್ತವೆ. ಶ್ರಾವಣ ಮಾಸದಲ್ಲಿ ಜನರುಭಕ್ತಿಯಿಂದ ಬಂದು ಪೂಜೆ ಸಲ್ಲಿಸಿ ದಾಸೋಹದಲ್ಲಿ ಭಾಗಿಯಾಗುತ್ತಾರೆ. ಶ್ರಾವಣ ಮಾಸದ ಕೊನೆಯಲ್ಲಿ ೧೦೮ ಕುಂಭಗಳ 'ಕುಂಬಾಭಿಷೇಕ' ನಡೆಯುತ್ತದೆ. ಕಾರ್ತೀಕಮಾಸದ ಆಚರಣೆಯ ಮೊದಲನೆಯ ಶನಿವಾರ ಬಂಡೆರಂಗಸ್ವಾಮಿ ದೇವರಿಗೆ ದೀಪ ಹಚ್ಚುವುದರ ಮೂಲಕ ಕಾರ್ತೀಕ ಮಾಸದ ದೀಪೋತ್ಸವವು ಆರಂಭವಾಗುತ್ತದೆ. ನಂತರ ಎರಡನೇ ಗುರುವಾರ ಬಿದಿಗೆಯೆಂದು ತಾಳ್ಯದವರ ಕಾರ್ತೀಕಪೂಜೆ. ಮೂರನೇ ಗುರುವಾರ ಸಂದೇಶ ಕಾರ್ತೀಕಪೂಜೆ, ನಂತರ ಗುರುವಾರ ಬಹುಳ ದಶಮಿಯಂದು ಬಸವನ ಉಚ್ಚಾಯ ನಂತರ ಶುಕ್ರವಾರ ಮಧ್ಯಾಹ್ನ ಮೂರು ಗಂಟೆಗೆ ಸಣ್ಣ ತೇರಿನ ಮೇಲೆ ಸ್ವಾಮಿಯ ಮೂರ್ತಿಯನ್ನು ಕೂರಿಸಿ ತೇರನ್ನು ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡುತ್ತಾರೆ. ಈ ಕಾರ್ತೀಕ ಮಾಸದ ಪೂಜೆಯನ್ನು ನೆರವೇರಿಸುವವರು ಈ ಗ್ರಾಮದ ಆರ್ಯ ಈಡಿಗ ವಂಶಸ್ಥರು.

ಸಣ್ಣ ಕಾರ್ತೀಕೋತ್ಸವ ನಡೆದ ಮುಂದಿನ ಗುರುವಾರ 'ದೊಡ್ಡ ಕಾರ್ತೀಕೋತ್ಸವ' ನಡೆಯುತ್ತದೆ. ಇದನ್ನು ಏಕಾಂತೇಶ್ವರ ಕಾರ್ತೀಕವೆಂದು ಹೇಳುವುದುಂಟು. ಇದರ ಸೇವೆಯನ್ನು ನಡೆಸುವವರು ಶಿವಪ್ಪಳಿ ಬಸವರಾಜಪ್ಪನವರು. ಅಂದು ವಿಶೇಷ ಪೂಜೆ ನಡೆಯುತ್ತದೆ. ರಾತ್ರಿ ಏಳು ಗಂಟೆಯಿಂದ ಒಳಮಠ, ಹೊರಮಠ, ಏಕಾಂತಮಠ, ಈಶ್ವರ ದೇವಸ್ಥಾನ, ತೇರುಬೀದಿ ಮೊದಲಾದ ಕಡೆಗಳಲ್ಲಿ ದೀಪಗಳು ಎಲ್ಲಾ ಕಡೆ ರಾರಾಜಿಸುತ್ತವೆ. ಹಿಂದಿನ ಕಾಲದಲ್ಲಿ ಎಣ್ಣೆಯನ್ನು ಹಾಕಿ ದೀಪವನ್ನು ಹಚ್ಚಿ "ಲಕ್ಷದೀಪೋತ್ಸವ"ದ ಆಚರಣೆ ಮಾಡುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ವಿದ್ಯುತ್ ದೀಪಗಳನ್ನು ಹಾಕಿ ಸಿಂಗರಿಸಿರುತ್ತಾರೆ. ಇಂತಹ ದೀಪದ ವೈಭವವನ್ನು ನೋಡಲು ಎರಡು ಕಣ್ಣು ಸಾಲವು ಅಷ್ಟು ವೈಭವದಿಂದ ಕೂಡಿರುತ್ತದೆ.

ಕೊಟ್ಟೂರಿನಲ್ಲಿ ಕಾರ್ತೀಕೋತ್ಸವ ಡಿಸೆಂಬರ್ ತಿಂಗಳಲ್ಲಿ ನಡೆಯುತ್ತದೆ. ಹಂಪಿಯಲ್ಲಿರುವ ವೈಭವ ಇಲ್ಲಿಯೂ ಇರುತ್ತದೆ. ಕಾರ್ತೀಕ ಮಾಸದಲ್ಲಿ ಪ್ರತಿ ಸೋಮವಾರ ಮತ್ತು ಗುರುವಾರ ಗುರುಬಸವೇಶ್ವರರ ಮೂರ್ತಿಯನ್ನು ಪಲ್ಲಕ್ಕಿಯಲ್ಲಿಟ್ಟುಕೊಂಡು ತೊಟ್ಟಿಲು ಮಠದಿಂದ ಗಚ್ಚಿನಮಠಕ್ಕೆ ತರುತ್ತಾರೆ. ಇದರ ಮತ್ತೊಂದು ವಿಶೇಷತೆಯೆಂದರೆ ಗಚ್ಚಿನಮಠದಲ್ಲಿ ಅಕ್ಬರ್ ಕೊಟ್ಟಿದ್ದೆಂದು ಹೇಳಲಾಗುವ ಮಂಚದ ಮೇಲೆ ಅಕ್ಬರ್ ಕೊಟ್ಟಂತಹ ಖಡ್ಗವನ್ನು ಇಟ್ಟು ಮೆರವಣಿಗೆ ಮಾಡುತ್ತಾರೆ. ಪಲ್ಲಕ್ಕಿಯಲ್ಲಿ ಉತ್ಸವಮೂರ್ತಿ ಬಂದ ನಂತರ ಮಂಗಳಾರತಿಯನ್ನು ಮಾಡಲಾಗುತ್ತದೆ. ಸೋಮವಾರದ ಕಾರ್ತೀಕೋತ್ಸವವನ್ನು ಹರಪನಹಳ್ಳಿ

ಪಾಳೇಗಾರ ಸೋಮಶೇಖರ ರಾಜನ ಹೆಸರಿನಲ್ಲಿ ನಡೆಸಿದರೆ, ಗುರುವಾರದ ಕಾರ್ತೀಕೋತ್ಸವವನ್ನು ಮದಕರಿ ನಾಯಕನ ಹೆಸರಿನಲ್ಲಿ ನಡೆಸಲಾಗುತ್ತದೆ. ಕೊಟ್ಟೂರಿನಲ್ಲಿ ಕಾರ್ತೀಕ ಮಾಸದ ಆಚರಣೆ ತುಂಬಾ ವಿಶೇಷವಾಗಿ ಕಂಡುಬರುತ್ತದೆ.

ಕಾರ್ತೀಕ ಮಾಸದ ಆಚರಣೆ ಅತ್ಯಂತ ಸಡಗರ ಸಂಭ್ರಮದಿಂದ ನಡೆಯುತ್ತದೆ. ದೇವಾಲಯದ ಸುತ್ತ ಮುತ್ತಲು ದೀಪಗಳಿಂದ ಅಲಂಕರಿಸಲಾಗಿದ್ದು ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತದೆ. ಕಾರ್ತೀಕ ಮಾಸದ ಆಚರಣೆ ಅತ್ಯಂತ ವಿಜೃಂಭಣೆಯಿಂದ ನಡೆಯುತ್ತದೆ. ಮೂರ್ಕಲ್ ಮಠ ಸ್ವಾಮಿಯ ಮೂಲ ಯೋಗಸ್ಥಾನ ಈ ಮಠದಲ್ಲಿ ಪ್ರತಿನಿತ್ಯ ಪೂಜೆಯಿರುತ್ತದೆ. ಕಾರ್ತೀಕದಲ್ಲಿ ೧೦೦೮ ದೀಪೋತ್ಸವ ಬೆಳಗುತ್ತಾರೆ. ಜಾತ್ರೆಯಲ್ಲಿ ವಿಶೇಷ ಪೂಜೆ ನಡೆಯುತ್ತವೆ.

ಕೊಟ್ಟೂರಿನಲ್ಲಿ ಕಾರ್ತೀಕೋತ್ಸವ ನಡೆದ ಎಂಟು ದಿನಕ್ಕೆ ಅರಸೀಕೆರೆಯಲ್ಲಿ ಕಾರ್ತೀಕೋತ್ಸವ ನಡೆಯುತ್ತದೆ. ಮಠದ ತುಂಬ ದೀಪವನ್ನು ಹಚ್ಚಿರುತ್ತಾರೆ. ಒಳಮಠ ಮತ್ತು ಹೊರಮಠಗಳಲ್ಲಿ ಕಾರ್ತೀಕದ ದೀಪವನ್ನು ಹಚ್ಚಿ ಸಿಂಗರಿಸುತ್ತಾರೆ. ಮಠ ದೀಪಗಳ ಬೆಳಕಿನಿಂದ ಕಂಗೊಳಿಸಿ ನೋಡುಗರ ಕಣ್ಣಿಗೆ ಆನಂದವನ್ನುಂಟುಮಾಡುತ್ತದೆ. ೧೯೯೫ರಲ್ಲಿ ಪಂಚ ಸಹಸ್ರ ದೀಪೋತ್ಸವದ ಕಾರ್ಯಕ್ರಮ ನೆರವೇರಿಸಿದ್ದರು. ಅದರಲ್ಲಿ ಶಿವಕೀರ್ತನೆ, ಭಜನೆ, ನಂದಿಕೋಲು ಮೊದಲಾದ ಕಾರ್ಯಕ್ರಮ ನಡೆದವು. ಆದರೆ ನಾಯಕನಹಟ್ಟಿ, ಕೊಟ್ಟೂರಿನಲ್ಲಿ ನಡೆಯುವಷ್ಟು ಅದ್ದೂರಿಯಾದ ದೀಪೋತ್ಸವ ನಡೆಯುವುದಿಲ್ಲ. ಕಡಿಮೆ ಪ್ರಮಾಣದ ದೀಪಗಳಿಂದ ಅಲಂಕರಿಸಿರುತ್ತಾರೆ. ಅಮವಾಸ್ಯೆ, ಕಾರ್ತೀಕ ಮೊದಲಾದ ವಿಶೇಷ ದಿನಗಳಲ್ಲಿ ದೇವರಿಗೆ 'ಕ್ರಿಯಾ' ಕೊಡುವ ಪದ್ಧತಿಯಿದೆ.

ಅರಸೀಕೆರೆ ಕೋಲಶಾಂತಯ್ಯನ ಒಳಮಠದಲ್ಲಿ ಕಾರ್ತೀಕ ಸಮಯದಲ್ಲಿ ಕೊಬ್ಬರಿ ಸುಡುವ ಆಚರಣೆ ಕಂಡುಬರುತ್ತದೆ. ಹಾಗೆಯೇ ಹರಪನಹಳ್ಳಿ ಕೆಂಪಯ್ಯನ ಕಾರ್ತೀಕೋತ್ಸವ ಕೊಟ್ರೇಶನ ಕಾರ್ತೀಕವಾಗಿ ಒಂದು ವಾರಕ್ಕೆ ಇಲ್ಲಿ ನಡೆಯುತ್ತದೆ. ಕಾರ್ತೀಕದಲ್ಲಿ ೧೦೧, ೫೦೧, ೧೦೦೧ ಹೀಗೆ ದೀಪವನ್ನು ಹಚ್ಚಿ ಮಠದ ಸುತ್ತಲೂ ಇಟ್ಟಿರುತ್ತಾರೆ. ಒಂದು ತಿಂಗಳುಗಳ ಕಾಲ ದೀಪ ಹಚ್ಚಿಡುತ್ತಾರೆ. ಕೊನೆಯ ದಿನ ಪೂಜೆಮಾಡಿ ದೀಪಹಚ್ಚಿ, ಪೂಜೆ ಸಲ್ಲಿಸಿ ಮೆರವಣಿಗೆಯನ್ನು ಮಾಡುತ್ತಾರೆ. ನಂದಿಕೋಲು, ಸಮಾಳ, ಮೊದಲಾದ ವಾದ್ಯಗಳೊಂದಿಗೆ ಮಠದಿಂದ ಮೆರವಣಿಗೆ ಹೋಗುತ್ತದೆ. ಭಕ್ತರು ಕೆಲವು ಸಮಯದಲ್ಲಿ ರುದ್ರಾಭಿಷೇಕ ಮಾಡಿಸುತ್ತಾರೆ. ಕಾರ್ತೀಕೋತ್ಸವ ಇಲ್ಲಿ ಅದ್ದೂರಿಯಾಗಿ ನಡೆಯುವ ಬದಲು ಸರಳವಾಗಿ ನಡೆಯುತ್ತದೆ. ದಿನದ ಪೂಜೆ, ಕಾರ್ತೀಕೋತ್ಸವ ಬಿಟ್ಟರೆ ಕೆಂಪಯ್ಯನಿಗೆ ವಿಶೇಷ ಪೂಜೆ ಉತ್ಸವ ನಡೆಯುವುದಿಲ್ಲ.

ಕೂಲಹಳ್ಳಿಯಲ್ಲಿ ಊರಿನ ಎಲ್ಲ ಮಠಗಳಲ್ಲಿ ಮತ್ತು ದೇವಾಲಯಲ್ಲಿ ಪೂಜೆ ಸಲ್ಲಿಸಿ ದೀಪ ಹಚ್ಚುತ್ತಾರೆ. ಪಲ್ಲಕ್ಕಿಯಲ್ಲಿ ಉತ್ಸವ ಮೂರ್ತಿಯನ್ನುಟ್ಟುಕೊಂಡು ಬೆಟ್ಟದ ಮಲ್ಲಯ್ಯನ ಗುಡಿಗೆ ಹೋಗಿ ಪೂಜೆ ಸಲ್ಲಿಸಿ, ರಾತ್ರಿ ಉಳಿದುಕೊಂಡು ಬರುವ ಪದ್ಧತಿಯಿದೆ. ಏಕೆಂದರೆ ಗೋಣಿಬಸಪ್ಪನಿಗೆ ಶಿವನಯ್ಯನು ತೊಂದರೆಗಳನ್ನು ಕೊಟ್ಟಾಗಲೆಲ್ಲ ಬೆಟ್ಟದ ಮಲ್ಲಯ್ಯನನ್ನು ಸ್ಮರಿಸುತ್ತಿದ್ದನು ಎಂಬ ನಂಬಿಗೆಯಿದೆ. ಆಗ ಶಿವ ಪಾರ್ವತಿಯ

ಸ್ವರೂಪಿಯಾದ ಮಲ್ಲಯ್ಯ ಶಿವನಯ್ಯ ಕಾಟದಿಂದ ಗೋಣಿಬಸಪ್ಪನನ್ನು ರಕ್ಷಿಸುತ್ತಿದ್ದ, ಹಾಗಾಗಿ ಕಾರ್ತೀಕಮಾಸದಲ್ಲಿ ಬೆಟ್ಟದ ಮಲ್ಲಯ್ಯನಿಗೆ ಪೂಜೆ ಸಲ್ಲಿಸಿ ಬರುವಂತಹ ಆಚರಣೆ ಕೂಲಹಳ್ಳಿಯಲ್ಲಿ ಕಂಡುಬರುತ್ತದೆ. ಪಲ್ಲಕ್ಕಿಯಲ್ಲಿ ಮದ್ದಾನಸ್ವಾಮಿ ಮಠದಲ್ಲಿರುವ ಬೆತ್ತ ಮತ್ತು ಹಾವುಗೆಗಳನ್ನು ಪಲ್ಲಕ್ಕಿಯಲ್ಲಿಡುತ್ತಾರೆ. ಪಲ್ಲಕ್ಕಿಯನ್ನು ಹೊರುವವರು ಕುರುಬ ಜನಾಂಗದವರು ಪಲ್ಲಕ್ಕಿಯ ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಹೋಗಿ ಬಂದು ಉತ್ಸವಮೂರ್ತಿಯನ್ನು ಮಠದಲ್ಲಿಡುತ್ತಾರೆ. ದೇವಾಲಯದ ಸುತ್ತಮುತ್ತ ಈ ಸಮಯದಲ್ಲಿ ದೀಪಗಳನ್ನು ಹಚ್ಚಿ ದೀಪೋತ್ಸವವನ್ನು ಆಚರಿಸಲಾಗುತ್ತದೆ.

**೫.೩. ಗುಗ್ಗರಿ ಹಬ್ಬ**

ಶಿವರಾತ್ರಿಯ ನಂತರ ಜಾತ್ರೆಗೆ ಸಿದ್ಧತೆ ನಡೆಯುತ್ತದೆ. ಜೊತೆಗೆ ಕಂಕಣ ಮಹೋತ್ಸವದ ನಂತರ ಜಾತ್ರೆಗೆ ಸಿದ್ಧತೆ ಆರಂಭವಾಗುತ್ತದೆ. ಒಂದು ವಾರದ ಮುನ್ನ ಬರುವ ಶುಭ ಸೋಮವಾರದಂದು 'ಗುಗ್ಗರಿ ಹಬ್ಬ' ಆಚರಿಸಲಾಗುತ್ತದೆ. ಅಂದು ಎರಡು ಮಠಗಳಲ್ಲಿ ವಿಶೇಷ ಪೂಜೆ ಇರುತ್ತದೆ. 'ಕುರುಳಿನಿಂದ ಹುರುಳಿ' ಬೇಯಿಸಿ ತಯಾರಿಸಲಾದ ಗುಗ್ಗರಿಯನ್ನು ಪ್ರಸಾದದ ರೂಪದಲ್ಲಿ ಭಕ್ತರಿಗೆ ವಿತರಿಸಲಾಗುತ್ತದೆ. ಸುಟ್ಟ ಕುರುಳಿನ ಭಸ್ಮವೇ ಪವಿತ್ರವಾದ ದೂಳ್ತ. ಇದು ವರ್ಷವಿಡೀ ಎರಡು ಮಠಗಳಲ್ಲಿ ಭಕ್ತರ ಹಣೆಯನ್ನು ಅಲಂಕರಿಸುವ ಪವಿತ್ರ ವಿಭೂತಿ. ಇದನ್ನು ನಾಯಕನಹಟ್ಟಿಯಲ್ಲಿ ವರ್ಷವಿಡೀ ದೂಳ್ತವಾಗಿ ಬಳಕೆ ಮಾಡುತ್ತಾರೆ.

**೫.೪. ಕೊಬ್ಬರಿ ಸುಡುವ ಆಚರಣೆ**

ನಾಯಕನಹಟ್ಟಿ ಜಾತ್ರೆಯಲ್ಲಿ ಕೊಬ್ಬರಿಯನ್ನು ಸುಡುವುದು ವಿಶೇಷವಾದ ಆಚರಣೆಯಾಗಿದೆ. ವಿದ್ಯುತ್ ದೀಪಗಳಿಲ್ಲದಿದ್ದ ಹಿಂದಿನ ಕಾಲದಲ್ಲಿ ಸ್ವಾಮಿಗಳನ್ನು ಫಣಿಯಪ್ಪ ನಾಯಕನಹಟ್ಟಿಗೆ ಕರೆತರುವಾಗ ಕೊಬ್ಬರಿಯ ಬೆಳಕಿನಲ್ಲಿ ಊರಿಗೆ ಕರೆತಂದರು. ಫಣಿಯಪ್ಪ ವ್ಯಾಪಾರಕ್ಕಾಗಿ ಹೋಗಿದ್ದ ಸಂದರ್ಭದಲ್ಲಿ ಫಣಿಯಪ್ಪನಿಗೆ ಸ್ವಾಮಿಗಳ ಪರಿಚಯವಾಗುತ್ತದೆ. ಕತ್ತಲೆಯಲ್ಲಿ ಸ್ವಾಮಿಗಳನ್ನು ಊರಿಗೆ ಕರೆದುಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ ತನ್ನ ಬಳಿಯಿದ್ದ ಕೊಬ್ಬರಿಯನ್ನು ಕಬ್ಬಿಣದ ಸರಳಿಗೆ ಸಿಕ್ಕಿಸಿಕೊಂಡು ಅದರ ಬೆಳಕಿನಲ್ಲಿ ಊರಿಗೆ ಕರೆತಂದರು ಎಂಬ ಪ್ರತೀತಿ. ಹೀಗೆ ಫಣಿಯಪ್ಪ ಕತ್ತಲ ದಾರಿಯನ್ನು ಕಳೆಯಲು ಕೊಬ್ಬರಿಯನ್ನು ಸುಟ್ಟದ್ದು ಇಂದು ಅದೇ ಒಂದು ಆಚರಣೆಯಾಗಿ ಬೆಳೆದು ಬಂದಿದೆ. ಜಾತ್ರೆಯ ಕಾಲದಲ್ಲಿ ಭಕ್ತರು ಎಲ್ಲೆಲ್ಲಿ ಬಿಡಾರ ಹಾಕಿಕೊಂಡಿರುತ್ತಾರೋ ಮತ್ತು ದೇವಸ್ಥಾನದ ಮುಂದೆ ಅಲ್ಲಲ್ಲಿ ರಾಶಿಗಟ್ಟಲೇ ಕೊಬ್ಬರಿಯನ್ನು ಕರ್ಪೂರ ಹಚ್ಚಿದಂತೆ ಇಂದಿಗೂ ಸುಡುತ್ತಾರೆ. ಕೊಬ್ಬರಿ ಸುಡುವುದು ಇಂದು ಹರಕೆಯ ರೂಪದಲ್ಲಿ ಸುಡುವುದು ಆಚರಣೆಯಾಗಿ ಜನರಲ್ಲಿ ಬೆಳೆದು ಬಂದಿದೆ.

ಪಂಚಗಣಾಧೀಶ್ವರರ ಆಚರಣೆಗಳಲ್ಲಿ ವಿಶಿಷ್ಟವಾಗಿ ಕಂಡು ಬರುವಂತಹದ್ದು ಕೊಬ್ಬರಿ ಸುಡುವ ಆಚರಣೆ. ಕಾರ್ತೀಕೋತ್ಸವದ ಸಂಜೆ ಭಕ್ತಾದಿಗಳು ಕೊಬ್ಬರಿಯನ್ನು ಸುಡುತ್ತಾರೆ. ಸುಟ್ಟ ಕೊಬ್ಬರಿಯ ಬೂದಿಯನ್ನು ಹಣೆಗೆ ಹಚ್ಚಿಕೊಳ್ಳಲು ಉಪಯೋಗಿಸುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಕೊಬ್ಬರಿ

ಸುಡುವವರ ಸಂಖ್ಯೆ ಅಧಿಕವಾಗಿರುವ ಕಾರಣ ಅರ್ಚಕರು ಕೊಬ್ಬರಿ ಸುಡುವ ಬದಲು ದಾಸೋಹಕ್ಕೆ ನೀಡಿ ಎಂಬ ಸಲಹೆ ನೀಡುವುದು ಕಂಡುಬರುತ್ತದೆ. ಕೊಟ್ಟೂರಿನಲ್ಲಿ, ನಾಯಕನಹಟ್ಟಿಯಲ್ಲಿ ಕೊಬ್ಬರಿ ಸುಡುವಂತೆ ಅರಸೀಕೆರೆಯಲ್ಲಿ ಕೊಬ್ಬರಿಯನ್ನು ಸುಡುವ ಆಚರಣೆಯು ಕಾರ್ತೀಕ ಮಾಸದಲ್ಲಿ ಕಂಡುಬರುತ್ತದೆ.

**೫.೫. ತೆಪ್ಪೋತ್ಸವ**

ನಾಯಕನಹಟ್ಟಿ ಭಾಗದಲ್ಲಿ ಮಳೆ ಬಾರದಿದ್ದಾಗ ಶ್ರಾವಣ ಮಾಸದಲ್ಲಿ ಗ್ರಾಮದ ಆದಿ ದೈವವಾದ ತಿಪ್ಪೇಸ್ವಾಮಿಗೆ ಪೂಜೆ ಸಲ್ಲಿಸಿ ಮಳೆಗಾಗಿ ಪ್ರಾರ್ಥಿಸಿಕೊಳುತ್ತಾ, ಕೆರೆಗಂಗಮ್ಮ, ಕೋಡಿಬಸವಣ್ಣ, ಏಕಾಂತಸ್ವಾಮಿಯವರನ್ನು ಆರಾಧಿಸುವ ಮೂಲಕ ಪೂಜೆ ನೆರವೇರಿಸುತ್ತಾರೆ. ಮಳೆ ಬಾರದೆ ಹೋದಾಗ ಕೊನೆಯ ಅಸ್ತ್ರವೆಂಬಂತೆ 'ನಗಾರಿಯ ಮೇಲೆ ಕೈ ಹಾಕುತ್ತಾರೆ'. ನಂತರ ಪೂಜೆ ಸಲ್ಲಿಸಿ ಮಳೆ ಬಂದು ಕೆರೆಯ ಕೋಡಿ ಬಿದ್ದರೆ ತೆಪ್ಪ ಬಿಡುವುದಾಗಿ ಹರಕೆ ಮಾಡಿಕೊಳ್ಳುತ್ತಾರೆ. ಮಳೆ ಬಂದು ಕೆರೆ ತುಂಬಿದಾಗ ೩೬ ಹಳ್ಳಿಯ ಜನ ಸೇರಿ ತೆಪ್ಪೋತ್ಸವ ಆಚರಿಸುತ್ತಾರೆ. ಈ ಹಿಂದೆಯು ಕೆರೆ ೧೨ ವರ್ಷದಿಂದ ತುಂಬಿರಲಿಲ್ಲವಂತೆ ಕಳೆದ ವರ್ಷ ಮಳೆ ಬಂದು ಕೆರೆ ಕೋಡಿ ಬಿದ್ದಾಗ ತೆಪ್ಪೋತ್ಸವ ಕಾರ್ಯಕ್ರಮ ನಡೆಯಿತು. ಈ ಸಂದರ್ಭದಲ್ಲಿ ಜಾತ್ರೆಗಿಂತ ಅಧಿಕ ಸಂಖ್ಯೆಯಲ್ಲಿ ಜನರು ಕೆರೆಯ ಹತ್ತಿರ ತೆಪ್ಪೋತ್ಸವ ಕಾರ್ಯದಲ್ಲಿ ನೆರೆದಿರುತ್ತಾರೆ. ಇಂತಹ ವಿಶೇಷವಾದ ತೆಪ್ಪೋತ್ಸವ ನೋಡಲು ಲಕ್ಷಾಂತರ ಮಂದಿ ಭಕ್ತರು ಸೇರುತ್ತಾರೆ.

ತೆಪ್ಪ ಕಟ್ಟಲು ಹತ್ತಿ ಮತ್ತು ಬುರುಗದ ಮರವನ್ನು ಬಳಕೆ ಮಾಡುತ್ತಾರೆ. ೨೧ ಅಡಿ ಉದ್ದದ ೮ ಮರದ ದಿಮ್ಮಿಗಳನ್ನು ಬಳಸಿರುತ್ತಾರೆ. ೩೨ ದಿಮ್ಮಿಗಳನ್ನು ಬಳಸಿಕೊಂಡು ೨೧ ಅಡಿ ಅಗಲ ೨೧ ಅಡಿ ಉದ್ದದ ಚೌಕಾಕಾರದಲ್ಲಿ ೫ ಅಡಿ ಮೇಲ್ಪಟ್ಟು ಎತ್ತರವಿರುತ್ತದೆ. ಮಧ್ಯಭಾಗದಲ್ಲಿ ಬಾಳೆಯ ದಿಂಡನ್ನು ಚಾಪೆಯಂತೆ ಜೋಡಿಸಿರುತ್ತಾರೆ. ಸುಂದರವಾದ ಮಂಟಪವನ್ನು ನಿರ್ಮಿಸಿರುತ್ತಾರೆ. ಮಂಟಪದ ಮಧ್ಯದಲ್ಲಿ ಎಂಟು ಜನ ನಾವಿಕರು ಬಿದಿರಿನ ಕೋಲಿನಿಂದ ಹುಟ್ಟು ಹಾಕುತ್ತಾರೆ. ತೆಪ್ಪೋತ್ಸವ ನಡೆಯುವಾಗ ತೆಪ್ಪ ಕೆರೆಯ ಮಧ್ಯಭಾಗಕ್ಕೆ ಸಾಗಿದಾಗ, ಕರಿಯ ಮೇಕೆ ಮರಿಯನ್ನು ಸಿಗಿದು ಕೆರೆಗೆ ಹಾವುತಿ ಕೊಡಲಾಗುತ್ತದೆ. ನಂತರ ತೆಪ್ಪ ತೂಬಿನ ಹತ್ತಿರ ಹೋದಾಗ ಪಲ್ಲಕ್ಕಿಯಲ್ಲಿರುವ ಸ್ವಾಮಿಗೆ ಪೂಜೆ ಸಲ್ಲಿಸಲಾಗುತ್ತದೆ. ಭಕ್ತಾದಿಗಳು ತೆಪ್ಪ ಬಂದ ನಂತರ ಅತ್ಯಂತ ಸಂಭ್ರಮದಿಂದ ತೆಪ್ಪೋತ್ಸವದ ಸಡಗರವನ್ನು ಆನಂದಿಸಿ ಪ್ರಸಾದವನ್ನು ಸ್ವೀಕರಿಸುತ್ತಾರೆ. ಸಂಜೆಯಾದ ನಂತರ ಲಕ್ಷದೀಪೋತ್ಸವ ಕಾರ್ಯ ನಡೆಯುತ್ತದೆ. ಮರುದಿನ ಏಕಾಂತೇಶ್ವರ ಕಾರ್ತೀಕ ನಡೆಯುತ್ತದೆ. ದೊಡ್ಡ ಕಾರ್ತೀಕ ರಥೋತ್ಸವ ಮಧ್ಯಾಹ್ನ ೩ ಗಂಟೆಗೆ ನಡೆಯುತ್ತದೆ. ಲಕ್ಷಾಂತರ ಭಕ್ತರು ಈ ತೆಪ್ಪೋತ್ಸವ ಕಾರ್ಯದಲ್ಲಿ ಭಾಗಿಯಾಗಿ ಆನಂಧವನ್ನು ಅನುಭವಿಸುತ್ತಾರೆ.

**೫.೬. ಪಾಲ್ಗುಣ ಮಾಸ**

ಪಾಲ್ಗುಣ ಮಾಸದಲ್ಲಿ ಕಾರ್ಯಕ್ರಮಗಳು ಭಕ್ತಸಾಗರ ಮಧ್ಯೆ ನಡೆಯುತ್ತದೆ. ವಾರ್ಷಿಕ ರಥೋತ್ಸವ ಕಾರ್ಯಕ್ರಮಗಳು ಪ್ರಾರಂಭವಾಗಿ ಮರಿಪರಿಷೆಯೊಂದಿಗೆ ಮುಕ್ತಾಯವಾಗುವಂತಹದು. ಜಾತ್ರೆಯ ಕಾರ್ಯಕ್ರಮ ನಡೆಸಲು ಸಿದ್ಧತೆ ಮಾಡಿಕೊಳ್ಳುತ್ತಾರೆ. ಏಕಾದಶಿಯಂದು ಸರ್ಪ ವಾಹನನೋತ್ಸಹ,

ದ್ವಾದಶಿಯಂದು ಮಯೂರ ವಾಹನೋತ್ಸವ, ತ್ರಯೋದಶಿಯಂದು ರಥಕ್ಕೆ ಕಳಸ ಸ್ಥಾಪನೆ, ಚತುರ್ದಶಿಯಂದು ಸಿಂಹ ವಾಹನೋತ್ಸವ, ಪೌರ್ಣಿಮಿಯಂದು ವಾಹನೋತ್ಸವ ಹಾಗೂ ಅಶ್ವ ವಾಹನೋತ್ಸವಗಳು ಪಾದಗಟ್ಟೆಯವರೆಗೆ ಹೋಗಿ ಬರುತ್ತವೆ. ಏಳು ದಿನಗಳವರೆಗೆ ಒಂದೊಂದು ವಾಹನೋತ್ಸವ ಕಾರ್ಯಕ್ರಮ ನಡೆದು ಜಾತ್ರೆಯ ಕೊನೆಯದಿನದಂದು ಪಾಲ್ಗುಣ ಮಾಸದ ಚಿತ್ತಾ ನಕ್ಷತ್ರದ ಮಧ್ಯಾಹ್ನ ೩ ಗಂಟೆಯಿಂದ ದೊಡ್ಡ ರಥೋತ್ಸವ ನಡೆಯುತ್ತದೆ. ಫಣಿಯಪ್ಪನ ವಂಶಜರಾದ ಪೂಜಾರಿಗಳ ಮನೆಯಿಂದ ಬಲಿ ಅನ್ನವನ್ನು ಹೊತ್ತು ತರುತ್ತಾರೆ. ಪಲ್ಲಕ್ಕಿಯ ಜೊತೆಗೆ ಮಂಗಳ ವಾದ್ಯಗಳು, ನಂದಿ ಕೋಲುಗಳನ್ನು ಕುಣಿಸುತ್ತ ಬರುತ್ತಾರೆ. ಬಾಬುದಾರರು, ತಳವಾರ ನಾಯಕ, ಮಣೆಗಾರರು, ಜೋಗಿಹಟ್ಟಿಯವರು ರಥದ ಗಾಲಿಗಳಿಗೆ ಪೂಜೆಯನ್ನು ಸಲ್ಲಿಸುತ್ತಾರೆ. ರಥವನ್ನು ಎಳೆಯುವ ಮುಂಚೆ ಕುಪ್ಪಿನಕೆರೆ ಆಂಜನೇಯಸ್ವಾಮಿಗೆ ಮಹಾಮಂಗಳಾರತಿ ಸಲ್ಲಿಸಿ ನಂತರ ತಿಪ್ಪೇಸ್ವಾಮಿಯ 'ಮುಕ್ತಿಬಾವುಟ'ದ ಹರಾಜು ಮಾಡಲಾಗುತ್ತದೆ. ನಂತರ ಎಲ್ಲ ಜನರು ಸೇರಿ ರಥೋತ್ಸವ ಎಳೆಯಲು ಮೀಣಿಗೆ ಕೈಹಾಕುತ್ತಾರೆ. ನಂದಿಕೋಲುಗಳನ್ನು ಕುಣಿಸುತ್ತಾ, ಸ್ವಾಮಿಯನ್ನು ರಥದಲ್ಲಿ ಕುರಿಸಿ ರಥವನ್ನು ಎಳೆಯುತ್ತಾ ಮೆರವಣಿಗೆಯಲ್ಲಿ ಊರಿನ ಪ್ರಮುಖ ಬೀದಿಯಲ್ಲಿ ಸಾಗುತ್ತದೆ, ಪಾದಗಟ್ಟೆಗೆ ಬಂದು ರಥ ನಿಲ್ಲುತ್ತದೆ. ಅಲ್ಲಿ ಪೂಜೆಯನ್ನು ನೆರವೇರಿಸಿ ಆ ನಂತರ ರಥೋತ್ಸವ ವಾಪಸ್ಸು ಬರುತ್ತದೆ. ನಂತರ ಪಲ್ಲಕ್ಕಿಯಲ್ಲಿ ಸ್ವಾಮಿಯನ್ನು ಹೊರಮಠದ ಪಾದಗಟ್ಟೆಗೆ ತರುತ್ತಾರೆ. ಅಂದು ರಾತ್ರಿ ಅಲ್ಲಿಯೆ ಉತ್ಸವ ಮೂರ್ತಿಯಿದ್ದು, ಮರುದಿನ ಪೂಜೆಸಲ್ಲಿಸಿ ಒಳಮಠಕ್ಕೆ ಹೋಗುತ್ತದೆ. ದೊಡ್ಡ ರಥೋತ್ಸವದ ಜಾತ್ರೆಗೆ ಮುಕ್ತಾಯ ಹಾಡುತ್ತಾರೆ. ದೊಡ್ಡ ರಥೋತ್ಸವ ನಡೆದ ಮುಂದಿನ ಸೋಮವಾರ ಮರಿಪರಿಷೆ ನಡೆಯುತ್ತದೆ. ಜಾತ್ರೆಗೆ ಬರದೆಯಿರುವವರು 'ಮರಿಪರಿಷೆಗೆ' ಬಂದು ದೇವರ ಕೃಪೆಗೆ ಪಾತ್ರರಾಗಲಿ ಎಂದು ಮರಿಪರಿಷೆಯನ್ನು ಆಚರಿಸುತ್ತಾರೆ.

ಕೊಟ್ಟೂರಿನ ಜಾತ್ರೆಯಲ್ಲಿ ಮಹೋತ್ಸವ ಮಾಘಶುದ್ಧ ಪಂಚಮಿಯಂದು ಆರಂಭವಾಗುವುದು ತೇರನ್ನು ಕಟ್ಟುವ ಕೆಲಸದಿಂದ ಆರಂಭವಾಗಿ, ಜಾತ್ರೆಯಲ್ಲಿ ಇದರಲ್ಲಿ ಎಲ್ಲ ಜಾತಿಯ ಜನರು ಭಾಗಿಯಾಗುತ್ತಾರೆ. ಮೊದಲನೇ ದಿನ ನಾಗರೋತ್ಸವ ಎರಡನೇ ದಿನ ನವಿಲು ವಾಹನನೋತ್ಸವ, ಮೂರನೇ ದಿನ ಆನೆ ವಾಹನೋತ್ಸವ, ನಾಲ್ಕನೇ ದಿನ ಬಸವನ ವಾಹನೋತ್ಸವ, ಐದನೇ ದಿನ ರಥೋತ್ಸವ, ಆರನೇ ದಿನ ಮದಾಲಸೆ ಇದು ತೇರಿನ ಹತ್ತಿರ ನಡೆಯುತ್ತದೆ. ಇದನ್ನು ಮರಿಪರಿಷೆ ಎನ್ನುತ್ತಾರೆ. ದೊಡ್ಡ ರಥೋತ್ಸವದ ತೇರನ್ನು ಮೂಲ ನಕ್ಷತ್ರ ಬಂದಾಗಲೇ ಎಳೆಯುತ್ತಾರೆ. ಊರಿನ ಹರಿಜನ ಕೇರಿಯ ಮನೆಯಲ್ಲಿ ಹಸು, ಕರು ಹಾಕಿದ ಮನೆಯಿಂದ ಗಿಣ್ಣದ ಎಡೆ ಬರುತ್ತದೆ. ಮಡಿ-ಹುಡಿಯಿಂದಿರುವ ಹರಿಜನ ಕೇರಿಯ ಮಹಿಳೆ (ದುರುಗಮ್ಮ) ಮಲ್ಲೇಶ್ವರ ದೇಗುಲದ ಹತ್ತಿರ ಪಲ್ಲಕ್ಕಿ ಬಂದಾಗ ಆರತಿ ಬೆಳಗುತ್ತಾಳೆ. ಸ್ವಾಮಿ ಅಲ್ಲಿಂದ ಬಂದು ರಥ ಏರುತ್ತಾನೆ. ಕೊಟ್ಟೂರು ಗುರುಬಸವೇಶ್ವರ ಉತ್ಸವದ ಸಮಯದಲ್ಲಿ ಫಿರಂಗಿಯನ್ನು ಮುಂದೆ ಹಿಡಿದಿರುತ್ತಾರೆ. ಈ ಹಿಂದೆ ಗೌಡರು ಹಿಡಿಯುತ್ತಿದ್ದರು. ಈಗ ಅರ್ಚಕರು ಇದನ್ನು ಹಿಡಿಯುತ್ತಾರೆ. ತೇರು ಎಳೆಯುವಾಗ 'ಕೊಟ್ಟೂರು ದೊರೆಯ ನಿನಗಾರು ಸರಿಯೆ, ಸರಿ ಎಂದವರ ಹಲ್ಲುಮುರಿಯೆ' ಎಂದು ಕೂಗುತ್ತಾರೆ.

ಚೈತ್ರಶುದ್ಧ ಹುಣ್ಣಿಮೆಯಂದು ಅರಸೀಕೆರೆ ಕೋಲಶಾಂತಯ್ಯ ರಥ ಎಳೆಯುತ್ತಾರೆ. ಮೊದಲು ನಾಲ್ಕು ದಿನ ನಾಲ್ಕು ಉಚ್ಚಾಯಗಳಿವೆ. ಗಜೋತ್ಸವ, ನವಿಲೋತ್ಸವ, ಸರ್ಪೋತ್ಸವ, ಬಸವನ ಉಚ್ಚಾಯ ಒಳಮಠದಿಂದ ಹೊರಮಠಕ್ಕೆ ಹೋಗಿ ಬರುತ್ತವೆ. ಜಾತ್ರೆಯಲ್ಲಿ ಎಲ್ಲಾ ಜಾತಿಯ ಜನರು ಸೇರಿ ಕಾರ್ಯಕ್ರಮವನ್ನು ನೆರವೇರಿಸುತ್ತಾರೆ. ತೇರುಗಾಲಿಗೆ ಗೌಡರ ಮನೆಯಿಂದ ಎಡೆ ಬರುತ್ತಿತ್ತು, ಈಗ ನಿಂತು ಹೋಗಿದೆ. ಒಳಮಠದಿಂದ ಎಡೆ ಬರುತ್ತದೆ. ಒಳಮಠದಿಂದ ತೇರನ್ನು ಹೊರಮಠದವರೆಗೆ ಎಳೆಯುತ್ತಾರೆ. ಅಲ್ಲಿಂದ ಪಲ್ಲಕ್ಕಿಯಲ್ಲಿ ಈ ದೇವರನ್ನು ಹೊತ್ತು ಬಸವಣ್ಣ ದೇವರ ಕಟ್ಟೆಗೆ ತಂದು ಕೂರಿಸುತ್ತಾರೆ. ಇಡೀ ರಾತ್ರಿ ಊರಲ್ಲಿ ಮದಾಲಸಿ ಮಾಡಿ (ನೃತ್ಯ, ಹಾಡು, ಡೊಳ್ಳು ಕುಣಿತ), ಮರುದಿನ ಬೆಳಗ್ಗೆ ಗುಡಿ ದುಂಬಿಸುತ್ತಾರೆ. ಹರಕೆಯನ್ನು ಹೊತ್ತುಕೊಂಡ ಭಕ್ತರು ಊಟ ಹಾಕಿಸುವುದು, ಜಂಗೀಕುಸ್ತಿ ಆಡಿಸುವುದು ಮುಂತಾದ ಕಾರ್ಯಕ್ರಮಗಳು ನಡೆಯುತ್ತವೆ. ಜಾತ್ರೆಗೆ ಹೆಚ್ಚು ಜನ ಸೇರಿದರೆ ಅಜ್ಜಯ್ಯನಿಗೆ ತಲೆಶೂಲೆ ಬರುತ್ತದಂತೆ, ಹಾಗಾಗಿ ಕೆಮ್ಮಣ್ಣಿನ ಪಟ್ಟೆಯನ್ನು ರಥಕ್ಕೆ ಬಳಿಯುತ್ತಾರೆ.

ಹರಪನಹಳ್ಳಿ ಕೆಂಪಯ್ಯನ ತೇರು ಮೊದಲು ಶ್ರಾವಣ ಮಾಸದಲ್ಲಿ ನಡೆಯುತ್ತಿತ್ತಂತೆ. ಆದರೆ ಇತ್ತೀಚಿನ ದಿನಗಳಲ್ಲಿ ಏಪ್ರಿಲ್ ತಿಂಗಳಲ್ಲಿ ನಡೆಯುತ್ತದೆ. ಕೊಟ್ಟೂರಿನ ಜಾತ್ರೆಯಾಗಿ ಸ್ವಲ್ಪ ಸಮಯದ ನಂತರ ಕೆಂಪಯ್ಯನ ತೇರನ್ನು ಎಳೆಯುತ್ತಾರೆ. ಜಾತ್ರೆ ತೀರ ಸರಳವಾದ ರೀತಿಯಲ್ಲಿ ನಡೆಯುತ್ತದೆ. ಕೊಟ್ಟೂರು ಮತ್ತು ನಾಯಕನಹಟ್ಟಿಯಲ್ಲಿರುವಂತೆ ಜಾತ್ರೆಯ ವೈಭವಯಿರುವುದಿಲ್ಲ. ಮಠದಿಂದ ತೇರು ಊರ ಬೀದಿಯಲ್ಲಿ ಸಾಗಿ ಪುನಃ ವಾಪಸ್ಸು ಮಠದ ಹತ್ತಿರ ತಂದು ನಿಲ್ಲಿಸುತ್ತಾರೆ. ರಥಕ್ಕೆ ಪೂಜೆ-ಪುನಸ್ಕಾರಗಳನ್ನು ಮಾಡಿ ಜಾತ್ರೆಯನ್ನು ಮುಕ್ತಾಯಗೊಳಿಸುತ್ತಾರೆ. ಕೆಂಪಯ್ಯನ ಮೂಲ ಮಠ ಹಾಳಾಗಿದ್ದು, ಇತ್ತೀಚಿನ ದಿನಗಳಲ್ಲಿ ಮಠವನ್ನು ಜೀರ್ಣೋದ್ಧಾರ ಮಾಡಲಾಗಿದೆ.

ಪಾಲ್ಗುಣ ಶುದ್ಧ ಏಕಾದಶಿಯಂದು ಕೊಟ್ಟೂರು ತೇರೆಳೆದ ೧೬ನೇ ದಿನಕ್ಕೆ ಕೂಲಹಳ್ಳಿಯಲ್ಲಿ ತೇರು, ಎಳೆಯುತ್ತಾರೆ. ಎಲ್ಲಾ ಜಾತಿಯ ಜನರು ಜಾತ್ರೆಯಲ್ಲಿ ಭಾಗಿಯಾಗಿ ಅವರಿಗೆ ವಹಿಸಿದ ಕೆಲಸ ಕಾರ್ಯಗಳನ್ನು ನೆರವೇರಿಸುತ್ತಾರೆ. ಕಂಕಣ ಧಾರಣೆಯಿಂದ ಜಾತ್ರೆ ಮಹೋತ್ಸವ ಆರಂಭವಾಗುತ್ತದೆ. ಪೂಜಾರಿ ಮದುಮಗನಾಗುತ್ತಾನೆ. ಜಾತ್ರೆಯ ಮೊದಲ ದಿನ ಬಸವನ ಉಚ್ಚಾಯ ಎರಡನೆಯ ದಿನ, ಮಯೂರ ಉತ್ಸವ, ಮೂರನೇ ದಿನ ಆನೆ ಉತ್ಸವ ಹೀಗೆ ಎಂಟು ದಿನಗಳವರೆಗೆ ಉತ್ಸವಗಳು ನಡೆದು ಒಂಭತ್ತನೇ ದಿನಕ್ಕೆ ರಥೋತ್ಸವವಾಗುತ್ತದೆ. ಉಚ್ಚಾಯ ಬಂಡಿಯಂತಿರುವ ಚಿಕ್ಕರಥೋತ್ಸವದಲ್ಲಿ ನಂದಿ, ಆನೆ ಮೊದಲಾದ ಕಾಷ್ಟ ವಿಗ್ರಹಗಳನ್ನಿಟ್ಟು ಉತ್ಸವಮೂರ್ತಿಯನ್ನು ಅದರ ಮೇಲೆ ಪ್ರತಿಷ್ಠಾಪಿಸಿ ರಾತ್ರಿ ಹೊತ್ತು ಎಳೆಯುತ್ತಾರೆ. ರಥೋತ್ಸವದಲ್ಲಿ ಕೊಟ್ಟೂರೇಶನ ಉತ್ಸವ ಮೂರ್ತಿ ಮತ್ತು ಮದ್ದಾನೇಶ್ವರನ ಕೊಡಲಿ, ಬೆತ್ತ, ಹಾವುಗೆಗಳನ್ನು ಇಟ್ಟಿರುತ್ತಾರೆ. ಚಿಕ್ಕ ಹಳ್ಳಿಯ ರೈತರು ಉಚ್ಚಾಯವನ್ನು ಎಳೆಯುವುದು ಪದ್ಧತಿಯಾಗಿದೆ. ಪೂಜಾರಿಯನ್ನು ಮದುಮಗನಾಗಿ ಮಾಡುತ್ತಾರೆ. ಜಾತ್ರೆ ಮುಗಿದ ನಂತರ ಮದುಮಗನಿಗೆ ಹೊಸ ಬಟ್ಟೆಯನ್ನು ಕೊಟ್ಟು ಪೂಜೆಯನ್ನು ಮಾಡುತ್ತಾರೆ. ಜಾತ್ರೆಯ ಕೊನೆಯಲ್ಲಿ ಓಕುಳಿ ಆಟವನ್ನು ಆಡುತ್ತಾರೆ. ಹರಿಜನ ಕೇರಿಯಲ್ಲಿರುವ

ಕೊಟ್ಟೂರೇಶ್ವರ ದೇವಸ್ಥಾನದಿಂದ ಓಕುಳಿ ಆಟ ಆರಂಭವಾಗುತ್ತದೆ. ಪೂಜಾರಿ ಮೊದಲು ಓಕುಳಿಯನ್ನು ಬಸವಿಯರಿಗೆ ಉಗ್ಗುತ್ತಾನೆ. ಜೊತೆಗೆ ಓಕುಳಿ ಆಟದೊಂದಿಗೆ ಜಾತ್ರೆಗೆ ತೆರೆ ಬೀಳುತ್ತದೆ. ಅತ್ಯಂತ ವಿಜೃಂಭಣೆಯಿಂದ ಜಾತ್ರೆ ಮಹೋತ್ಸವ ನಡೆಯುತ್ತದೆ. ಗೋಣಿ ಬಸವೇಶ್ವರರಿಗೆ ಅರ್ಪಿಸುವ ನೈವೇದ್ಯವೆಂದರೆ ಹುಳ್ಳಿಕಾಳಿನ ಉದುಕ ಮುದ್ದೆ ಗೋಣಿಬಸಪ್ಪನಿಗೆ ಪ್ರಿಯವಾಗಿರುವಂತಹದ್ದು. ಕಾರಣ ಕೆಳವರ್ಗದ ಜನರೇ ಹೆಚ್ಚಾಗಿ ಬಳಸುತ್ತಿದ್ದ ಆಹಾರ ಧಾನ್ಯವಾಗಿದೆ. ಹುಳ್ಳಿಕಾಳು ಅತಿ ಅಗ್ಗದ ಬೆಲೆಗೆ ಸಿಗುವಂಥದ್ದು! ಜೊತೆಗೆ ಜನಸಾಮಾನ್ಯರಿಗೆ ಎಟುಕುವಂತದ್ದು. ಈ ಭಾಗದಲ್ಲಿ ಹೆಚ್ಚು ಬೆಳೆಯುವಂತಹ ಬೆಳೆಯಾಗಿದೆ. ಗೋಣಿ ಬಸವೇಶ್ವರರು ದಿನನಿತ್ಯದ ಆಹಾರವನ್ನೇ ತನ್ನದಾಗಿಸಿಕೊಂಡವರು. ಆದರೆ ಇತ್ತೀಚಿನ ದಿನಗಳಲ್ಲಿ ಎಲ್ಲಾರು ಸಿಹಿ ಅಡಿಗೆ ಮಾಡುವಂತಹ ಸಂಪ್ರದಾಯವಿದೆ.

ಗೋಣಿಬಸವೇಶ್ವರ ರಥೋತ್ಸವದಲ್ಲಿ ತೇರನ್ನು ಹಗ್ಗದಿಂದ ನೇರವಾಗಿ ಎಳೆದರು ಸಹಿತ ತೇರು ಮೂಲೆ ದಿಕ್ಕಿನೆಡೆಗೆ ವಾಲಿ ಚಲಿಸುತ್ತದೆ. ಜನರೆಲ್ಲ ಸೇರಿ ತೇರನ್ನು ಈಶಾನ್ಯ ದಿಕ್ಕಿನೆಡೆಗೆ ಎಳೆಯಲು ಎಷ್ಟೇ ಪ್ರಯತ್ನ ಪಟ್ಟರು ಸಾಧ್ಯವಾಗುವುದಿಲ್ಲ. ಈಶಾನ್ಯ ದಿಕ್ಕಿಗೆ ಎದುರಾಗಿಯೇ ಚಲಿಸುತ್ತದೆ. ಲಕ್ಷಾಂತರ ಜನರಿಗೂ ಎಟುಕುವುದಿಲ್ಲ. ತೇರು ಹಡಗಲಿ ಮತ್ತು ಮುಂಡರಗಿ ಮಧ್ಯೆ ಬರುವ 'ಗುಮ್ಮಗೋಳ'ದ ಕಡೆ ಮುಖ ಮಾಡಿ ಚಲಿಸುತ್ತದೆ. ಗುಮ್ಮಗೋಳದಲ್ಲಿ ಗೋಣಿಬಸವೇಶ್ವರನ ಮಠವಿದೆ. ಇಲ್ಲಿಯೇ ಶಿವನಯ್ಯನನ್ನು ದುಷ್ಟತನದಿಂದ ದೂರಮಾಡಿ ಒಳ್ಳೆಯ ಮನುಷ್ಯನಾಗಿ ಪರಿವರ್ತಿಸಿದ್ದು ಗುಮ್ಮಗೋಳದಲ್ಲಿ. ಹಾಗಾಗಿ ತೇರು ಈ ದಿಕ್ಕಿನೆಡೆ ವಾಲುತ್ತದೆ ಎಂಬುದು ಸ್ಥಳೀಯರ ಅವರ ಅಭಿಪ್ರಾಯ.

**೫.೭. ನಾಗಾರಾಧನೆ**

ನಾಗಾರಾಧನೆಯು ಭಾರತದಾದ್ಯಂತ ಆಚರಣೆಯಲ್ಲಿದೆ. ಪಂಚಗಣಾಧೀಶ್ವರರಿಗೆ ಸಂಬಂಧಿಸಿದಂತೆ ನಾಗ ಪ್ರತಿಮೆಗಳು ಎಲ್ಲ ಮಠಗಳಲ್ಲಿಯೂ ಪ್ರಮುಖವಾಗಿ ಕಂಡುಬರುತ್ತವೆ. ಗೋಡೆಯ ಮೇಲೆ ಅಥವಾ ಮಠಗಳ ನಾಗರಕಲ್ಲು ದೇವಾಲಯದ ಹಿಂದೆ ಅಥವಾ ಮುಂದೆ ಪ್ರತಿಮೆಗಳಿವೆ. ಹಾವನ್ನು ಪೂಜಿಸುವುದು ಜನಪದರಲ್ಲಿ ವಿಶೇಷವಾಗಿ ಕಂಡುಬರುತ್ತದೆ. ನಾಗರಪಂಚಮಿ ಹಬ್ಬದ ಆಚರಣೆ ರೂಢಿಯಲ್ಲಿರುವುದನ್ನು ಕಾಣಬಹುದು.

ಪಂಚಗಣಾಧೀಶ್ವರರ ಗುಡಿಯ ಕಲ್ಲಿನ ಗೋಡೆಗಳ ಮೇಲೆ ನಾಗಪ್ರತಿಮೆಗಳ ಚಿತ್ರವಿರುವುದು ಕಂಡುಬರುತ್ತದೆ. ಕೊಟ್ಟೂರು ಗುರುಬಸವೇಶ್ವರ ಹಾವು ಕಚ್ಚಿದವರ ವಿಷವನ್ನು ಇಳಿಸುವುದು ಮತ್ತು ಗೋಣಿ ಬಸವೇಶ್ವರ ಹಾವನ್ನು ಬಾರು ಕೋಲಾಗಿ ಮಾಡಿಕೊಂಡು ಬೇಸಾಯ ಮಾಡಿದ್ದು, ಶಿವನಯ್ಯನ ಮಾಟದ ಮೊರವಿ ಅಂಗಿಯನ್ನು ಧರಿಸಿ ಗೋಣಿಬಸವೇಶ್ವರ ಸಾವನ್ನಪ್ಪಿದಾಗ ಬಾಲಬಸವ ಹಾವಿನ ವೇಷಧರಿಸಿ ವಿಷವನ್ನು ಹೀರಿದ್ದು. ಇಲ್ಲೆಲ್ಲ ಹಾವಿನ ಪ್ರಸ್ತಾಪ ಬರುತ್ತದೆ. ಶಿವನಿಗೆ ಹಾರವಾಗಿ ಹಾವು ಕೊರಳಲ್ಲಿರುವುದನ್ನು ನೋಡುತ್ತೇವೆ. ಪಂಚಗಣಾಧೀಶ್ವರರು ಶಿವನ ಆಜ್ಞೆಯ ಮೇರೆಗೆ ಭೂಲೋಕಕ್ಕೆ ಬಂದವರಾದ್ದರಿಂದ ಶಿವನ ಸಂಕೇತವಾಗಿ ಹಾವನ್ನು ಪೂಜಿಸುವಂತಹ ಕ್ರಮವಿದೆ, ಎಂಬುದು ಎಲಿಗಾರ ಹನುಮಂತಪ್ಪ ಅವರ ಅಭಿಪ್ರಾಯ.

ಪಂಚಗಣಾಧೀಶ್ವರರ ಎಲ್ಲ ಮಠಗಳಲ್ಲಿ ಹಾವಿನ ಚಿತ್ರವಿರುವುದನ್ನು ಕಾಣಬಹುದು. ವಿಶೇಷವೆಂದರೆ ಕೂಲಹಳ್ಳಿ ಗೋಣಿಬಸವೇಶ್ವರ ದೇವಾಲಯದಲ್ಲಿ ಹಾವು ಯಾವಾಗಲೂ ಇರುತ್ತದೆ ಎಂಬುದು ಅರ್ಚಕರ ಅಭಿಪ್ರಾಯ. ಅಳವಂಡಿಯಲ್ಲಿಯು ಸಹ ಗೋಣಿ ಬಸವೇಶ್ವರ ದೇವಾಲಯದಲ್ಲಿ ಏನಾದರೂ ನೇಮ ತಪ್ಪಿದರೆ ಅಥವಾ ಮದ್ಯಪಾನ ಮಾಡಿ ದೇವಾಲಯದ ಒಳಗೆ ಬಂದರೆ ಹಾವು, ಚೇಳು ಬರುತ್ತವೆ ಎಂಬುದು ಅಳವಂಡಿ ಗೋಣಿಬಸವೇಶ್ವರ ದೇವಾಲಯದ ಅರ್ಚಕರ ಅಭಿಪ್ರಾಯ. ಪಂಚಗಣಾಧೀಶ್ವರರ ಎಲ್ಲ ಮಠಗಳಲ್ಲಿಯು ಶಿವನ ಸಂಕೇತವಾಗಿ ಹಾವಿನ ಚಿತ್ರ ಕಂಡುಬರುತ್ತದೆ.

**೩.೮. ನಾಮಕರಣ**

ದೇವರಿಗೆ ಹರಕೆ ಕಟ್ಟಿಕೊಂಡಂತಹ ಭಕ್ತರು ತಮ್ಮ ಮಗುವಿಗೆ ದೇವರ ಆಶೀರ್ವಾದ ಇರಲಿ ಎಂಬ ಕಾರಣಕ್ಕೆ ಅಥವಾ ದೇವರು ನಮ್ಮ ಮಕ್ಕಳನ್ನು ರಕ್ಷಿಸಲಿ ಎಂದು ದೇವರ ಹೆಸರನ್ನು ತಮ್ಮ ಮಕ್ಕಳಿಗೆ ಇಟ್ಟು ಕೃತಾರ್ಥರಾಗುತ್ತಾರೆ. ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿಗೆ ಸಂಬಂಧಿಸಿದಂತೆ ಹೆಸರುಗಳನ್ನು ತಮ್ಮ ಮಕ್ಕಳಿಗೆ ಇಡುತ್ತಾರೆ. ಅದರಲ್ಲಿ ಗಂಡುಮಕ್ಕಳಿಗೆ ತಿಪ್ಪೇಸ್ವಾಮಿ, ತಿಪ್ಪಯ್ಯ, ತಿಪ್ಪೇಶ, ತಿಪ್ಪೇರುದ್ರ, ರುದ್ರಸ್ವಾಮಿ, ಹೆಣ್ಣು ಮಕ್ಕಳಿಗೆ ತಿಪ್ಪಕ್ಕ, ತಿಪ್ಪಮ್ಮ ಮೊದಲಾದ ಹೆಸರುಗಳನ್ನಿಡುತ್ತಾರೆ. ಜಾತ್ರೆಯ ಸಂದರ್ಭದಲ್ಲಿ ಕಾರ್ತೀಕ ಮಾಸದಲ್ಲಿ ಅಥವಾ ಶ್ರಾವಣಮಾಸದಲ್ಲಿ ಹೆಸರುಗಳನ್ನು ಇಡುತ್ತಾರೆ. ಕೆಲವರು ವಾರದ ಸೋಮವಾರ ವಿಶೇಷ ದಿನವಾಗಿದೆ. ಮಗುವಿಗೆ ನಾಮಕರಣ ಮಾಡುತ್ತಾರೆ. ಅದೇ ರೀತಿ ಉಳಿದ ಪಂಚಗಣಾಧೀಶ್ವರರ ಆಚರಣೆಗಳನ್ನು ಲಭ್ಯ ಆಕರಗಳಿಂದ ಈ ರೀತಿ ಕ್ರೋಢೀಕರಿಸಬಹುದಾಗಿದೆ.

ಕೊಟ್ಟೂರುಸ್ವಾಮಿ ಮಠದಲ್ಲಿ ಕಾರ್ತೀಕ ಮಾಸದ ದಿನ ಇಲ್ಲವೇ ಸೋಮವಾರದ ದಿನದಂದು ಮಕ್ಕಳಿಗೆ ದೇವಸ್ಥಾನದಲ್ಲಿ ನಾಮಕರಣ ಮಾಡುವುದನ್ನು ನೋಡುತ್ತೇವೆ. ಕೊಟ್ಟೂರಲ್ಲಿ ಸಹ ಕೊಟ್ಟೂರೇಶ, ಕೊಟ್ರಪ್ಪ, ಕೊಟ್ರಯ್ಯ, ಬಸಣ್ಣ, ಬಸವೇಶ, ಬಸಪ್ಪ, ಉಚ್ಚಕೊಟ್ರಯ್ಯ, ಗುರು ಬಸವೇಶ್ವರ, ಕೊಟ್ಟೂರು ಬಸವೇಶ್ವರ ಎನ್ನುವಂತಹ ಹೆಸರುಗಳನ್ನು ಗಂಡು ಮಕ್ಕಳಿಗೆ ನಾಮಕರಣ ಮಾಡುತ್ತಾರೆ. ಹೆಣ್ಣುಮಕ್ಕಳಿಗೆ ಕೊಟ್ರಮ್ಮ, ಬಸಮ್ಮ, ಬಸಕ್ಕ, ಕೊಟ್ರವ್ವ ಮೊದಲಾದ ಹೆಸರುಗಳನ್ನಿಡುವುದು ಕಂಡುಬರುತ್ತವೆ. ದೇವರ ಆಶೀರ್ವಾದ ಮಕ್ಕಳಿಗೆ ಸದಾ ಇರಲಿ ಎಂಬಂತಹ ನಂಬಿಕೆಯಿಂದ ದೇವರ ಹೆಸರನ್ನು ಮಕ್ಕಳಿಗೆ ಇಡುವುದನ್ನು ಕಾಣುತ್ತೇವೆ.

ಅರಸೀಕೆರೆಯಲ್ಲಿ ವಾರದ ವಿಶೇಷ ದಿನವಾದ ಸೋಮವಾರದಂದು ಅಥವಾ ಜಾತ್ರೆ ಮತ್ತು ಉತ್ಸವ ಹಬ್ಬಗಳಲ್ಲಿ ಭಕ್ತರು ತಮ್ಮ ಮಕ್ಕಳಿಗೆ ನಾಮಕರಣ ಮಾಡುವುದು ಕಂಡುಬರುತ್ತದೆ. ಕೋಲಶಾಂತ, ಕೋಲಶಾಂತಯ್ಯ, ಕೋಲಣ್ಣ, ಅಜ್ಜಯ್ಯ, ಶಾಂತಪ್ಪ, ಕೋಲಯ್ಯ ಶಾಂತಯ್ಯ ಎಂಬ ಹೆಸರುಗಳು ಗಂಡುಮಕ್ಕಳಿಗೆ ನಾಮಕರಣ ಮಾಡುವುದು ಕಂಡುಬರುತ್ತದೆ. ಹೆಣ್ಣು ಮಕ್ಕಳಿಗೆ ಕೋಲಶಾಂತಮ್ಮ, ಕೋಳಶಾಂತವ್ವ, ಕೋಲಮ್ಮ, ಕೋಲವ್ವ, ಶಾಂತಮ್ಮ, ಶಾಂತವ್ವ ಎಂಬ ಇತ್ಯಾದಿ ಹೆಸರುಗಳಿಂದ ಕರೆಯುವ ವಾಡಿಕೆಯಿದೆ.

ಹರಪನಹಳ್ಳಿ ಭಾಗದಲ್ಲಿ ಸಹ ಕೆಂಪಯ್ಯ ಸ್ವಾಮಿಯ ಹೆಸರಿನಲ್ಲಿ ಮಕ್ಕಳಿಗೆ ನಾಮಕರಣ ಮಾಡುತ್ತಾರೆ. ನಾಯಕನಹಟ್ಟಿ, ಕೊಟ್ಟೂರು, ಕೂಲಹಳ್ಳಿಗೆ ಹೋಲಿಸಿದರೆ ಕಡಿಮೆಯಿದೆ. ಕೆಂಪಯ್ಯ, ಕೆಂಪಣ್ಣ ಎಂದು

ಗಂಡು ಮಕ್ಕಳಿಗೆ ಹೆಸರಿಡುತ್ತಾರೆ. ನಾಮಕರಣ ಮಾಡುವಾಗ ಹೆಣ್ಣುಮಕ್ಕಳಿಗೆ ಕೆಂಪಮ್ಮ, ಕೆಂಪವ್ವ ಎಂದು ಕರೆಯುತ್ತಾರೆ. ಆದರೆ ಇಲ್ಲಿ ಹೆಚ್ಚಾಗಿ ಕಂಡುಬರುವುದಿಲ್ಲ.

ಕೂಲಹಳ್ಳಿಯಲ್ಲಿ ಮದ್ದಾನಸ್ವಾಮಿ ಮತ್ತು ಗೋಣಿ ಬಸವೇಶ್ವರರ ಎರಡು ಮಠಗಳಿವೆ. ಪೂಜಾ ಕಾರ್ಯಕ್ರಮಗಳು, ನಾಮಕರಣಗಳು, ನಡೆಯುವುದು ಮದ್ದಾನ ಸ್ವಾಮಿ ಮಠದಲ್ಲಿ. ಮದ್ದಾನೇಶ್ವರರಿಗಿಂತ ಗೋಣಿ ಬಸವೇಶ್ವರರ ಪ್ರಭಾವ ಜನರ ಮೇಲೆ ಅಧಿಕವಾಗಿದೆ. ಹೆಚ್ಚು ಜನ ಮಕ್ಕಳಿಗೆ ಗೋಣಿ ಬಸಪ್ಪ, ಗೋಣಿ ಬಸವೇಶ್ವರ, ಗೋಣಪ್ಪ, ಕೂಲಹಳ್ಳಿ ಬಸವೇಶ್ವರ, ಗೋಣ್ಣಾಣ್ಣ, ಗೋಣೇಶ ಮೊದಲಾದ ಹೆಸರುಗಳು ಗಂಡು ಮಕ್ಕಳಿಗಿಡುತ್ತಾರೆ. ಹೆಣ್ಣು ಮಕ್ಕಳಿಗೆ ಗೋಣಿ ಬಸಮ್ಮ, ಗೋಣಿ ಬಸಕ್ಕ, ಗೋಣಕ್ಕ, ಗೋಣಮ್ಮ ಮೊದಲಾದವು ಹೆಸರುಗಳು ಕಂಡುಬರುತ್ತವೆ. ಮಕ್ಕಳಿಗೆ ಮಾತ್ರವಲ್ಲದೆ ಅವರ ಮನೆಗಳಿಗೆ, ವಾಹನಗಳಿಗೂ, ಅಂಗಡಿಗಳಿಗೂ ಕೂಡ ದೇವರ ಹೆಸರನ್ನು ಇಡುವುದು ಕಾಣಬಹುದು. ಕುಲದೇವರು, ಮನೆದೇವರು ನಮ್ಮನ್ನು ಕಾಪಾಡಲಿ ಎಂಬ ನಂಬಿಕೆ ಆ ಭಾಗದ ಜನರಲ್ಲಿ ನೆಲೆಯೂರಿದೆ.

### ಮದುವೆ

ಮದುವೆ ಕಾರ್ಯಕ್ರಮ ಇತ್ತೀಚಿನ ದಿನಗಳಲ್ಲಿ ಹೆಚ್ಚು ದೇವಸ್ಥಾನಗಳಲ್ಲಿ ನಡೆಯುವುದನ್ನು ಕಾಣಬಹುದು. ಆರ್ಥಿಕವಾಗಿ ಸಬಲರಾಗಿರುವವರು ಮತ್ತು ಹಿಂದುಳಿದವರು ಸಹ ದೇವಸ್ಥಾನದಲ್ಲಿ ಮದುವೆ ಕಾರ್ಯಕ್ರಮವನ್ನು ನಡೆಸುತ್ತಾರೆ. ನವ ವಧು-ವರರಿಗೆ ದೇವರ ಕೃಪ ಕಟಾಕ್ಷ ಇರಲಿ ಎಂದು ಜನರು ದೇವಾಲಯದಲ್ಲಿ ಮದುವೆ ಮಾಡಿಸುವುದನ್ನು ಕಾಣುತ್ತೇವೆ. ನಾಯಕನಹಟ್ಟಿ ಒಳಮಠದಲ್ಲಿ ಮದುವೆ, ನಾಮಕರಣ ಕಾರ್ಯಕ್ರಮಗಳು ನಡೆಯುತ್ತವೆ. ಕೊಟ್ಟೂರೇಶ್ವರ ಗುಡಿಯಲ್ಲಿ ಕೂಲಹಳ್ಳಿ ಮದ್ದಾನಸ್ವಾಮಿ ಮಠದಲ್ಲಿ, ಕೋಲಶಾಂತಯ್ಯನ ಮಠದಲ್ಲಿ ಬಸವ ಜಯಂತಿಯಂದು ಮದುವೆಗಳು ನಡೆಯುತ್ತವೆ. ಇಲ್ಲೆಲ್ಲ ದಾಸೋಹ ಕಾರ್ಯಕ್ರಮವಿದೆ. ದೇವಸ್ಥಾನದ ದಾಸೋಹಕ್ಕೆ ಹಣವನ್ನು ನೀಡಿ ವಿವಾಹ ಕಾರ್ಯಕ್ರಮಗಳನ್ನು ನೆರವೇರಿಸಿಕೊಂಡು ಹೋಗುವುದನ್ನು ನೋಡಬಹುದು.

### ಉಪನಯನ

ದೇವಸ್ಥಾನದಲ್ಲಿ ಸೋಮವಾರ ಅಥವಾ ಜಾತ್ರೆ ದಿನಗಳಲ್ಲಿ ಕಾರ್ತೀಕಮಾಸ, ಶ್ರಾವಣಮಾಸದಲ್ಲಿ ಅಥವಾ ಬಿಡಿ ದಿನದಲ್ಲಿ ಭಕ್ತರು ಬಂದು ಮಕ್ಕಳ ಜವಳವನ್ನು ತೆಗೆಸುತ್ತಾರೆ. ಈ ಕಾರ್ಯಕ್ರಮ ಎಲ್ಲಾ ದೇವಸ್ಥಾನಗಳಲ್ಲಿ ಕಂಡುಬರುತ್ತವೆ. ಅವರ ಅನುಕೂಲಕ್ಕೆ ತಕ್ಕಂತೆ ರಜಾದಿನಗಳಲ್ಲಿ ಬಂದು ಜವಳ ತೆಗೆಸುವ ಕಾರ್ಯವನ್ನು ಮಾಡಿಕೊಂಡು ಹೋಗುತ್ತಾರೆ.

### ೫.೯. ಕಡುಬಿನ ಕಾಳಗ

ಗೋಧಿ ಹಿಟ್ಟಿನಿಂದ ಮಾಡುವ ಕಡುಬುಗಳನ್ನು ಮೈಮೇಲೆ ಎಸೆಯುವ ಆಚರಣೆ ಇದಾಗಿದೆ. ಈಗ ಶಾಸ್ತ್ರದ ಹೆಸರಿನಲ್ಲಿ ಇದೆಯೇ ವಿನಃ ಅಧಿಕೃತವಾಗಿ ಆಚರಣೆಯಲ್ಲಿಲ್ಲ. ಹಿಂದೆ ದೇವದಾಸಿಯರಿಗೆ ಊರಿನ ಗೌಡರು ಮೇಲ್ವರ್ಗದ ಜನರು ಪುರೋಹಿತಶಾಹಿ ವರ್ಗದವರು ಕಡುಬನ್ನು ಎಸೆಯುವ ಮೂಲಕ ಕೆಳವರ್ಗದ ಮಹಿಳೆಯರನ್ನು ತೆಕ್ಕೆಗೆ ಹಾಕಿಕೊಳ್ಳುವ ಬಗೆ ಇದಾಗಿತ್ತೆಂಬುದು ಕಂಡುಬರುತ್ತದೆ.

ಕೊಟ್ಟೂರು ಮತ್ತು ಕೂಲಹಳ್ಳಿಯಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಕೊಟ್ಟೂರಿನಲ್ಲಿ ರಥೋತ್ಸವ ಜರುಗುವ ಆರಂಭದಲ್ಲಿ ರಥದ ಗಾಲಿಗಳನ್ನು ಹೊರಹಾಕಿ ಪೂಜೆ ಮಾಡಲಾಗುತ್ತದೆ. ತೇರು ಗಾಲಿಗಳನ್ನು ಹೊರಹಾಕುವಾಗ ಉತ್ಸವ ತ್ರಿಮೂರ್ತಿಗೆ ಮತ್ತು ಗಾಲಿಗಳಿಗೆ ಬತ್ತಿಕಾಯಿಗಳಿಂದ ಹೊಡೆಯುತ್ತಾರೆ. ಇದಕ್ಕೆ ಸಂಬಂಧಿಸಿದಂತೆ ಕತೆ ಹೇಳುತ್ತಾರೆ. ಗುರುಬಸವ ಆರಂಭದಲ್ಲಿ ಹುಚ್ಚನಂತೆ ಇಲ್ಲಿಗೆ ಬಂದಾಗ ಆತನಿಗೆ ಜನರು ಕಲ್ಲಿನಿಂದ ಹೊಡೆಯುತ್ತಿದ್ದರು. ಹೊಡೆತ ಬೀಳದೆ ಗುರುಬಸವ ತಿರುಗಾಡುತ್ತಿದ್ದನು. ಅದನ್ನು ಸಾಂಕೇತಿಸಲಿಕ್ಕಾಗಿ ಬತ್ತಿಕಾಯಿಗಳಿಂದ ಗುರುಬಸವನ ಮೂರ್ತಿಗೆ ಹೊಡೆಯುವುದು ಕಂಡುಬರುತ್ತದೆ. ಕೂಲಹಳ್ಳಿಯಲ್ಲಿ ರಥೋತ್ಸವದ ಮರುದಿನ ಓಕಳಿ ಆಡಲಾಗುತ್ತದೆ. ಮತ್ತು ಟಗರಿನ ಕಾಳಗವನ್ನು ಮನೋರಂಜನೆಗಾಗಿ ಆಚರಿಸುತ್ತಾರೆ.

**೫.೧೦. ನಿತ್ಯ ಆಚರಣೆಗಳು ಮತ್ತು ವಾರದ ಆಚರಣೆಗಳು**

ಪಂಚಗಣಾಧೀಶ್ವರರಲ್ಲಿ ತಿಪ್ಪೇಸ್ವಾಮಿ ಮತ್ತು ಕೊಟ್ಟೂರೇಶ್ವರ ಇವರುಗಳಿಗೆ ಪ್ರತಿ ದಿನ ೫ ಬಾರಿ ಪೂಜೆ ನಡೆಯುತ್ತದೆ. ಬೆಳಿಗ್ಗೆ ೫ ಗಂಟೆಯಿಂದ ಪೂಜೆ ಆರಂಭವಾಗುತ್ತದೆ. ಕೊನೆಯ ಪೂಜೆ ರಾತ್ರಿ ೯ ಗಂಟೆಗೆ ನಡೆಯುತ್ತದೆ. ಉಳಿದ ಗಣಾಧೀಶ್ವರರಲ್ಲಿ ಬೆಳಿಗ್ಗೆ ಪೂಜೆ ೫ ಗಂಟೆಗೆ ಮತ್ತು ರಾತ್ರಿ ಕೊನೆಯ ಪೂಜೆ ನಡೆಯುವುದು ಬೆಳಿಗ್ಗೆ ಪೂಜೆಯ ನಂತರ ಪ್ರಸಾದ ವಿನಿಯೋಗ ಮಾಡುತ್ತಾರೆ. ಬೆಳಿಗ್ಗೆ ಆರಂಭವಾದ ದಿನದ ಪೂಜಾ ಕಾರ್ಯಕ್ರಮಗಳು ರಾತ್ರಿಯವರೆಗೆ ನಡೆಯುತ್ತವೆ.

ಪಂಚಗಣಾಧೀಶ್ವರರ ಆಚರಣೆಗಳಲ್ಲಿ ವಾರದ ವಿಶೇಷ ದಿನವಾಗಿ ಸೋಮವಾರವನ್ನು ಕಾಣಬಹುದು. ಪ್ರತಿ ಸೋಮವಾರದ ದಿನ ಊರಿನ ಜನರು ಮತ್ತು ಅಕ್ಕಪಕ್ಕದ ಗ್ರಾಮದವರು ದೇವಸ್ಥಾನಕ್ಕೆ ಬಂದು ಭಕ್ತಿಯಿಂದ ಹಣ್ಣು ಕಾಯಿ ಕರ್ಪೂರಗಳನ್ನು ತಂದು ಪೂಜೆ ಸಲ್ಲಿಸಿ ಸ್ವಾಮಿಯ ಕೃಪೆಗೆ ಪಾತ್ರರಾಗುತ್ತಾರೆ. ಪಂಚಗಣಾಧೀಶ್ವರರಲ್ಲಿ ಸೋಮವಾರ ಅತ್ಯಂತ ವಿಶಿಷ್ಟವಾದ ವಾರವಾಗಿದೆ. ಉತ್ಸವ ಮೂರ್ತಿಯು ಒಳಮಠದಿಂದ ಹೊರಮಠಕ್ಕೆ ಪಲ್ಲಕ್ಕಿಯಲ್ಲಿ ಹೋಗಿ ಬರುತ್ತದೆ. ವಾರದ ಒಂದು ದಿನದಲ್ಲಿ ಮಾತ್ರ ಪಲ್ಲಕ್ಕಿಯ ಮೆರವಣಿಗೆಯಿರುತ್ತದೆ. ಕೊಟ್ಟೂರಿನಲ್ಲಿ ಹಿರೇಮಠದಿಂದ ಉತ್ಸವಮೂರ್ತಿ ಗಚ್ಚಿನಮಠಕ್ಕೆ ಹೋಗಿ ಬರುತ್ತದೆ. ಪೂಜೆ ಮುಗಿದ ನಂತರ ಪ್ರಸಾದ ಹಂಚುತ್ತಾರೆ. ಹಾಗೆ ಕೋಲಶಾಂತಯ್ಯನ ದೇವಸ್ಥಾನದಲ್ಲಿ ಅಂದು ವಿಶೇಷವಾದ ಪೂಜೆ ಪುನಸ್ಕಾರಗಳು ನಡೆಯುತ್ತವೆ. ಕೆಂಪಯ್ಯನ ಮಠದಲ್ಲಿ ಸೋಮವಾರ ಪೂಜೆ ನಡೆಯುತ್ತದೆ. ಕೂಲಹಳ್ಳಿಯಲ್ಲಿ ಗೋಣಿಬಸವೇಶ್ವರ ಮತ್ತು ಮದ್ದಾನೇಶ್ವರರ ಮಠಗಳಲ್ಲಿ ಸೋಮವಾರ ವಿಶೇಷ ಪೂಜೆ ನಡೆಯುತ್ತದೆ. ಕೆಲವು ಕಡೆಗಳಲ್ಲಿ ಗುರುವಾರ ಪೂಜೆ ನಡೆಯುವುದು ಕಂಡುಬರುತ್ತದೆ. ಪಂಚಗಣಾಧೀಶ್ವರರೆಲ್ಲರಲ್ಲಿ ಸೋಮವಾರ ವಿಶೇಷ ಪೂಜಾ ದಿನವಾಗಿದೆ.

**ವಾರೋತ್ಸವ**

ನಾಯನಕಹಟ್ಟಿಯಲ್ಲಿ ತಿಪ್ಪೇಸ್ವಾಮಿಗೆ ಪ್ರತಿ ಸೋಮವಾರ ವಿಶೇಷ ಪೂಜೆ ಸಲ್ಲುತ್ತದೆ. ಹೊರಮಠ ಮತ್ತು ಒಳಮಠಗಳಲ್ಲಿ ನಡೆಯುವ ಈ ಉತ್ಸವವನ್ನು 'ವಾರೋತ್ಸವ' ಎಂದು ಕರೆಯಲಾಗುತ್ತದೆ.

ಸೋಮವಾರದಂದು ಒಳಮಠದಿಂದ ಉತ್ಸವಮೂರ್ತಿಯನ್ನು ಪಲ್ಲಕ್ಕಿಯಲ್ಲಿ ಸಕಲ ಬಿರುದಾವಳಿಗಳೊಂದಿಗೆ ಮೆರವಣಿಗೆಯಲ್ಲಿ ಒಯ್ಯಲಾಗುತ್ತದೆ. ದಾರಿಯಲ್ಲಿ ಹಟ್ಟಿದೊರೆ ಮಲ್ಲಪ್ಪ ನಾಯಕನ ವಂಶಜರ ಮನೆಯ ಹತ್ತಿರ ಗೊಂಚಿಗಾರ ಬೀದಿ, ಈಶ್ವರ ಮತ್ತು ಆಂಜನೇಯ ದೇವಾಲಯಗಳ ಹತ್ತಿರ ಪಲ್ಲಕ್ಕಿಯನ್ನು ನಿಲ್ಲಿಸಲಾಗುತ್ತದೆ. ಈ ಸ್ಥಳಗಳಲ್ಲಿ ಭಕ್ತರಿಗೆ ನೈವೇದ್ಯ ಅಥವಾ ಪೂಜೆಮಾಡಿ ಕೊಡಲಾಗುತ್ತದೆ. ಪಲ್ಲಕ್ಕಿಯನ್ನು ಹೊರಮಠದ ಮುಂಭಾಗದಲ್ಲಿನ ಮಂಟಪದಲ್ಲಿ ತಂದು ಇಡುತ್ತಾರೆ. ಪಲ್ಲಕ್ಕಿ ಜೊತೆಯಲ್ಲಿ ಬಂದ ಒಳಮಠದ ಪೂಜಾರಿಯು ಹೊರಮಠದ ಮೂರ್ತಿಯನ್ನು (ಸಮಾಧಿ) ಪೂಜಿಸುತ್ತಾರೆ. ಹೊರಮಠದ ಪೂಜಾರಿಯಿಂದ ಒಂದು ಜೋಳಿಗೆ ಬಿಲ್ವಪತ್ರೆಯನ್ನು ಪಡೆದುಕೊಳ್ಳುತ್ತಾರೆ. ನಂತರ ಅಲ್ಲಿದ್ದವರಿಗೆಲ್ಲ ಹಸಿಕಡಲೆ, ಕೊಬ್ಬರಿ, ಸಕ್ಕರೆ ಮಿಶ್ರಣದ ಪ್ರಸಾದವನ್ನು ಹಂಚುತ್ತಾರೆ. ಪೂಜೆಯ ನಂತರ ಪಲ್ಲಕ್ಕಿಯು ಹೊರಮಠದಿಂದ ಹಿಂದಿರುಗಿ ಹೋಗುವಾಗ, ಹರಕೆ ಹೊತ್ತ ಭಕ್ತರೆಲ್ಲ ಪಲ್ಲಕ್ಕಿ ಬರುವ ದಾರಿಯಲ್ಲಿ ನೆಲದ ಮೇಲೆ ಸಾಲಾಗಿ ಮಲಗಿಕೊಂಡಿರುತ್ತಾರೆ. ಆಗ ಉತ್ಸವಮೂರ್ತಿಯನ್ನು ಅವರ ಮೇಲಿಂದ ಎತ್ತಿಕೊಂಡು ಹೋಗುತ್ತಾರೆ. ಹೀಗೆ ಮಲಗುವುದರಿಂದ ಕಷ್ಟಗಳೆಲ್ಲ ಪರಿಹಾರವಾಗುತ್ತವೆ ಎಂದು ಜನರು ನಂಬಿದ್ದಾರೆ. ಪಲ್ಲಕ್ಕಿ ವಾಪಸ್ಸು ಬರುವಾಗ ಗೋಧಿ ಹಿಟ್ಟಿನಿಂದ ಮಾಡಿದ ಆರತಿಯನ್ನು ಮಹಿಳೆಯರು ಬೆಳಗುತ್ತಾರೆ. ಅಲ್ಲದೆ ಕರಿ ಮತ್ತು ಕೆಂಪು ಬಣ್ಣದ ಓಕಳಿಯನ್ನು ಉತ್ಸವಮೂರ್ತಿಗೆ ನಿವಾಳಿಸಿ ಚೆಲ್ಲುತ್ತಾರೆ. ಪಲ್ಲಕ್ಕಿಯನ್ನು ಒಳಮಠದ ಮಹಾದ್ವಾರದ ಮೂಲಕ ತಂದು ಗರ್ಭಗುಡಿಯನ್ನು ಪ್ರದಕ್ಷಿಣೆ ಹಾಕಿ ನವರಂಗ ಮಂಟಪದಡಿಯಲ್ಲಿ ಇಳಿಸುತ್ತಾರೆ. ಅಲ್ಲಿಂದ ಉತ್ಸವ ಮೂರ್ತಿಯನ್ನು ಗರ್ಭಗುಡಿಯ ಗದ್ದುಗೆಗೆ ತಂದು ಪ್ರತಿಷ್ಠಾಪಿಸುತ್ತಾರೆ.

### ೫.೧೧. ವಾಹನೋತ್ಸವ

ಎಲ್ಲ ಜಾತ್ರೆಗಳಲ್ಲಿ ಕಂಡುಬರುವ ಆಚರಣೆಯೆಂದರೆ 'ವಾಹನೋತ್ಸವ'ದ ಆಚರಣೆ. ಹರಪನಹಳ್ಳಿ ಕೆಂಪಯ್ಯನನ್ನು ಬಿಟ್ಟರೆ ಉಳಿದ ನಾಲ್ವರು ಗಣಾಧೀಶ್ವರರ ಜಾತ್ರೆಯ ಸಂದರ್ಭದಲ್ಲಿ ಕಂಡುಬರುತ್ತದೆ. ನಾಯಕನಹಟ್ಟಿಯಲ್ಲಿ ಪ್ರತಿಯೊಂದು ದಿನವೂ ಪಲ್ಲಕ್ಕಿಯಲ್ಲಿ ಒಂದೊಂದು ಪ್ರಾಣಿಯ ಮೂರ್ತಿಯನ್ನು ಚಿಕ್ಕ ರಥದಲ್ಲಿ ಕುಳ್ಳಿರಿಸಿ ಒಂದು ಕಿ.ಮೀ.ದೂರದಲ್ಲಿರುವ ಪಾದಗಟ್ಟೆಯತನಕ ಎಳೆದೊಯ್ಯುತ್ತಾರೆ. ಅಲ್ಲಿ ಪೂಜೆ ಮಾಡಿ ವಾಪಸ್ಸು ಮರಳಿ ತರುತ್ತಾರೆ. ಸರ್ಪವಾಹನೋತ್ಸವ, ಮಯೂರ ವಾಹನೋತ್ಸವ (ನವಿಲು) ಗಜ ವಾಹನೋತ್ಸವ, ಸಿಂಹ ವಾಹನೋತ್ಸವ, ಆನೆ ವಾಹನೋತ್ಸವ, ನಾಗರ ವಾಹನೋತ್ಸವಗಳು ನಡೆಯುತ್ತವೆ.

ಕೊಟ್ಟೂರಿನಲ್ಲಿಯೂ ಚಿಕ್ಕ ರಥವನ್ನು ತಯಾರಿಸಿ ಪ್ರತಿದಿನ ಒಂದೊಂದು ಮೂರ್ತಿಯನ್ನು ಇಟ್ಟು ಪೂಜೆ ಮಾಡಿ ಹಿರೇಮಠದಿಂದ ಮೂರ್ಕಲ್‌ಮಠ, ತೊಟ್ಟಿಲಮಠ, ಗಚ್ಚಿನಮಠಕ್ಕೆ ಹೋಗಿ ಮರಳಿ ತರಲಾಗುತ್ತದೆ. ಬಸವೋತ್ಸವ ನಾಗರ, ನವಿಲು, ಗಜೋತ್ಸವ ನಡೆಯುತ್ತವೆ. ಕೂಲಹಳ್ಳಿ ಮತ್ತು ಅರಸೀಕೆರೆಯ ಜಾತ್ರೆಯಲ್ಲಿ ವಿವಿಧ ಪ್ರಾಣಿಗಳ ಮೂರ್ತಿಗಳನ್ನು ಚಿಕ್ಕರಥದಲ್ಲಿ ಕುಳ್ಳಿರಿಸಿ ಮೆರವಣಿಗೆ ಮಾಡಿ ಪಾದಗಟ್ಟೆಯವರೆಗೆ ತಂದು ಪೂಜಿಸಲಾಗುತ್ತದೆ.

### ೫.೧೨. ಬಾಯಿಬೀಗ

ಜಾತ್ರೆಯಲ್ಲಿ ಭಕ್ತರು 'ಬಾಯಿಬೀಗ' ಎನ್ನುವ ಆಚರಣೆಯನ್ನು ಆಚರಿಸುತ್ತಾರೆ. ವಡ್ನಳ್ಳಿ ಮಾರಮ್ಮ ಇಲ್ಲವೆ ತಿಪ್ಪೇಸ್ವಾಮಿಯ ಹೆಸರಿನಲ್ಲಿ ಭಕ್ತರು ಬಾಯಿಬೀಗ ಹರಕೆ ಕಟ್ಟುತ್ತಾರೆ. ರಥೋತ್ಸವದ ದಿನ ಹರಕೆಯನ್ನು ಹೊತ್ತ ಭಕ್ತರು ಮುಖದ ಎರಡು ದವಡೆಗಳ ಮೂಲಕ ಬಾಯಿಯ ಒಳಗೆ ಒಂದು ತಾಮ್ರದ ತಂತಿಯನ್ನು ಸೇರಿಸಿ ಕೊಂಡಿಯನ್ನು ಹಾಕುತ್ತಾರೆ. ಇದನ್ನೇ ಬಾಯಿಬೀಗ ಎನ್ನುತ್ತಾರೆ. ಕಾಲ್ನಡಿಗೆಯಲ್ಲಿ ಹೊರಮಠಕ್ಕೆ ಬಂದು ಪೂಜಾರಿಗಳಿಂದ ತೀರ್ಥವನ್ನು ತಲೆಯ ಮೇಲೆ ಹಾಕಿಸಿಕೊಂಡ ನಂತರ ಬಾಯಿಗೆ ಹಾಕಿದ ತಾಮ್ರದ ತಂತಿಯನ್ನು ತೆಗೆಯಲಾಗುತ್ತದೆ. ಸಾಮಾನ್ಯವಾಗಿ ಹೀಗೆ 'ಬಾಯಿಬೀಗ' ಹರಕೆಯನ್ನು ಆಚರಿಸುವವರು ದಲಿತವರ್ಗದವರಾಗಿತ್ತಾರೆ. ಹೆಚ್ಚಾಗಿ ವಡ್ನಳ್ಳಿ ಮಾರಮ್ಮನ ಹೆಸರಿನಲ್ಲಿಯೇ ಹರಕೆ ಕಟ್ಟುತ್ತಾರೆ.

### ೫.೧೩. ಓಕಳಿ ಆಟ

ಓಕಳಿಯಾಡುವ ಆಚರಣೆ ನಾಲ್ವರು ಗಣಾಧೀಶ್ವರರ ಜಾತ್ರೆಗಳಲ್ಲಿ ಕಂಡುಬರುವ ಆಚರಣೆಯಾಗಿದೆ. ನಾಯಕನಹಟ್ಟಿಯಲ್ಲಿ ಹೊರಮಠದವರು ಆಡಿದರೆ, ಕೊಟ್ಟೂರಿನಲ್ಲಿ ಗಚ್ಚಿನಮಠದ ಹತ್ತಿರ ಕೂಲಹಳ್ಳಿಯಲ್ಲಿ, ಹರಿಜನಕೇರಿಯಲ್ಲಿರುವ ಗುರುಬಸವನ ಮಠದ ಹತ್ತಿರ ಕೊಟ್ಟೂರಿನಲ್ಲಿ ಮತ್ತು ಅರಸೀಕೆರೆಯಲ್ಲಿ ಕೋಲಶಾಂತಯ್ಯನ ಒಳಮಠದ ಆವರಣದಲ್ಲಿ ಆಡುವ ಪದ್ಧತಿಯಿದೆ.

ಓಕಳಿಯ ಸಂದರ್ಭದಲ್ಲಿ ಮಠದ ದೇವದಾಸಿಯರಿಗೆ ಕೆಂಪುಬಣ್ಣದ ನೀರನ್ನು ಚೆಲ್ಲಲಾಗುತ್ತದೆ. ಮೊದಲು ಮಠದ ಪೂಜಾರಿ ಚೆಲ್ಲಿದ ನಂತರ ನೆರೆದ ಜನರೆಲ್ಲ ದೇವದಾಸಿಯರಿಗೆ ಬಣ್ಣದ ನೀರನ್ನು ಚೆಲ್ಲುತ್ತಾರೆ. ನಂತರ ಒಬ್ಬರಿಗೊಬ್ಬರು ಬಣ್ಣದ ನೀರನ್ನು ಚೆಲ್ಲಾಡುತ್ತಾರೆ. ಇದರಲ್ಲಿ ವಿವಿಧ ವರ್ಗದ ಪುರುಷರು ಮತ್ತು ಮಹಿಳೆಯರು ಪಾಲ್ಗೊಳ್ಳುತ್ತಾರೆ. ಇದು ಬರೀ ಹೋಳಿಹಬ್ಬಕ್ಕೆ ಸೀಮಿತವಾದ ಆಚರಣೆ ಮಾತ್ರವಲ್ಲ, ಒಬ್ಬರಿಗೊಬ್ಬರು ಪರಸ್ಪರ ಗಂಡು ಹೆಣ್ಣುಗಳು ಓಕಳಿಯಾಡುವುದು ಶೃಂಗಾರದಾಟದ ಸಂಕೇತವಾಗಿದೆ. ಹೋಳಿ ಹಬ್ಬದಲ್ಲಿ ಬಣ್ಣದ ನೀರನ್ನು ಎರಚುವುದು ಕಾಮದ ಪ್ರಚೋದನೆಗೆ ಸಂಕೇತವಾಗಿದೆ.

# ಅಧ್ಯಾಯ-ಆರು

# ಪಂಚಗಣಾಧೀಶ್ವರರ ಪವಾಡಗಳು ಮತ್ತು ಅನನ್ಯತೆ

೬.೧. ಪವಾಡಗಳ ಬಗ್ಗೆ ಜನಪದರ ಕಲ್ಪನೆ

೬.೨. ಪವಾಡಗಳು ಮತ್ತು ಆಧುನಿಕ ಸಂದರ್ಭ

# ಅಧ್ಯಾಯ-ಆರು

# ಪಂಚಗಣಾಧೀಶ್ವರರ ಪವಾಡಗಳು ಮತ್ತು ಅನನ್ಯತೆ

"ಪವಾಡ"ವೆಂಬ ಕನ್ನಡ ಶಬ್ದ 'ಪ್ರವಾದ'ವೆಂಬ ಸಂಸ್ಕೃತ ಪದದಿಂದ ಬಂದಿದೆ. ಬಳಕೆಯ ಮಾತಿನಲ್ಲಿ ಪವಾಡವೆಂದರೆ ಒಂದು ಅದ್ಭುತಕ್ರಿಯೆ, ಅಲೌಕಿಕ ಶಕ್ತಿ, ನಿಸರ್ಗಕ್ಕೆ ವಿರುದ್ಧವಾದ ಪ್ರಕ್ರಿಯೆ, ಪ್ರಪಂಚದಲ್ಲಿ ಸಾಮಾನ್ಯ ಜನತೆಯ ದಿನನಿತ್ಯದ ಅನುಭವಕ್ಕಿಂತ ಬೇರೆಯಾದ ಸಂಗತಿ ಎಂದು ಕರೆಯುವುದುಂಟು.

"ಪವಾದ" ಎಂಬ ಮೂಲ ಸಂಸ್ಕೃತ ಶಬ್ದದಿಂದ "ಪವಾಡ" ಶಬ್ದ ಬಂದಿದೆ. ಯೋಗಶಾಸ್ತ್ರದ ವಿವರಣೆಯಂತೆ ಒಬ್ಬ ಸಾಧಕನು ಸತ್ಯಾನ್ವೇಷಣೆಯಲ್ಲಿ ತೊಡಗಿದಾಗ, ಅವನಲ್ಲಿ ಕೆಲವೊಂದು ಅಲೌಕಿಕ ಶಕ್ತಿಗಳು ಸಹಜವಾಗಿ ಮೈದೋರುತ್ತವೆ. ಈ ಅಲೌಕಿಕ ಶಕ್ತಿಗಳಿಗೆ ಯೋಗಶಾಸ್ತ್ರ ಪರಿಭಾಷೆಯಲ್ಲಿ ಸಿದ್ಧಿ ಎಂದು ಕರೆಯಲಾಗಿದೆ.

### ವೇದಾಂತದ ಪ್ರಕಾರ

"ಪವಾಡಗಳು ಒಬ್ಬ ಮಹಾಪುರುಷನಿಗೆ ಧಾರ್ಮಿಕ ಮುಂದಾಳುತನವನ್ನು ದೊರಕಿಸಿಕೊಡುವಲ್ಲಿ ಯೋಗ್ಯತಾ ಪತ್ರಗಳಂತೆ ಅಥವಾ ಪ್ರತ್ಯೇಕ ಒಂದು ದೇವರ ಶ್ರೇಷ್ಠತವಾದ ಶಕ್ತಿಯ ಪ್ರದರ್ಶನಕ್ಕೆ ದೃಷ್ಟಾಂತವಾಗಿ ಇಲ್ಲವೆ ಒಂದು ನಿರ್ಧಿಷ್ಟವಾದ ಶಕ್ತಿಯ ಪ್ರದರ್ಶನಕ್ಕೆ ಇಲ್ಲವೆ ಒಂದು ನಿರ್ಧಿಷ್ಟವಾದ ಧರ್ಮದ ಸತ್ಯದ ಶಕ್ತಿಯನ್ನೊದಗಿಸುವ ಸಾಧನಗಳಾಗಿ ಕಾರ್ಯನಿರ್ವಹಿಸುವವು. ಕಲ್ಪನೆಯ ಉನ್ನತ ಹಂತವೇ ಪವಾಡ. ಅದಕ್ಕೊಂದು ದೊಡ್ಡ ರೂಪಕ ಶಕ್ತಿಯಿದೆ."[1] ಸಾಮಾನ್ಯ ವ್ಯಕ್ತಿಯಿಂದ ಸಾಧ್ಯವಾಗದೆ ಇರುವುದನ್ನು ಅಸಾಮಾನ್ಯ ರೀತಿಯಲ್ಲಿ ವ್ಯಕ್ತಿ ಪ್ರದರ್ಶಿಸಿದಾಗ, ಅವು ಪವಾಡಗಳ ರೂಪ ತಾಳುತ್ತವೆ. ಆದ್ದರಿಂದ ವ್ಯಕ್ತಿಯ ಮಹಿಮೆಯನ್ನು ಉನ್ನತೀಕರಿಸಲು ಪವಾಡಗಳು ಯೋಗ್ಯತಾ ಪತ್ರಗಳಂತೆ ಕಂಡುಬರುತ್ತವೆ.

### ಶ್ರೀ ಕೋಳಿಯವರ ಪ್ರಕಾರ

ಸಾಮಾನ್ಯವಾಗಿ ಎಲ್ಲ ಮಹಾತ್ಮರ, ಸಂತರ ಜೀವನದಲ್ಲಿ ಪವಾಡಗಳನ್ನು ಕಾಣುತ್ತೇವೆ ಅವು ಆಧ್ಯಾತ್ಮ ಜೀವನದ ಅಂಗವಲ್ಲದಿದ್ದರೂ, ಹೇಗೋ ಆಧ್ಯಾತ್ಮ ಜೀವಿಗಳ ಜೀವನದಲ್ಲಿ ನುಸುಳಿಕೊಂಡು ಬಂದು ಬಿಟ್ಟಿವೆ. ಹೀಗಾಗಿ ಕೆಲವು ಮಹಾತ್ಮರ ಜೀವನದಲ್ಲಿ ಪವಾಡಗಳ ಉಲ್ಲೇಖವಿದ್ದುದನ್ನು ನೋಡುತ್ತೇವೆ.

"ಪವಾಡವೆಂದರೆ ಅಸಾಮಾನ್ಯವಾದ, ಆಶ್ಚರ್ಯವನ್ನು ಉಂಟುಮಾಡುವ ಲೋಕಮುಕ್ತವಾದ ಅದ್ಭುತ ಘಟನೆ ಅಥವಾ ಸಂಗತಿ. ಕಾರ್ಯಕಾರಣವಿಲ್ಲದೆ ನಿಸರ್ಗ ನಿಯಮದ ವಿರುದ್ಧ ಫಲಿಸುವ ಇಂಥ ಘಟನೆ

ಅಥವಾ ಸಂಗತಿಯನ್ನು ಮಾನವೀಯ ಶಕ್ತಿಯಿಂದ ಎಸಗುವುದು ಅಸಾಧ್ಯ. ಈ ರೀತಿ ಮಾನವೀಯ ಶಕ್ತಿಗೆ ಅಸಾಧ್ಯವೆನ್ನಿಸಿದ ಕಾರ್ಯ ಇಲ್ಲವೆ ಸಂಗತಿಗಳನ್ನು ದೇವರ ಪ್ರೀತಿಗೆ ವಿಶೇಷವಾಗಿ ಪಾತ್ರನಾದವನು ಮಾತ್ರ ದೈವೀಶಕ್ತಿಯ ಬಲದಿಂದ ಎಸಗಬಲ್ಲ. ಪವಾಡಗಳು ದೇವರ ಪ್ರತಿರೂಪವೆನ್ನಿಸಿದ ವ್ಯಕ್ತಿಯಿಂದ ಪ್ರದರ್ಶಿತವಾಗುವಂಥವು”[೨]. ಸಿದ್ಧಿಗಳನ್ನು ಅಲೌಕಿಕ ಶಕ್ತಿಯಂತೆ, ಅದರ ಪ್ರದರ್ಶನ ಮಾಡುವುದು ಎಂದು ಜನ ಭಾವಿಸಿದರು. ಈ ಪವಾಡಗಳು ವಿಶೇಷ ಜ್ಞಾನ ಮತ್ತು ಸಾಧನೆಗಳ ಉತ್ಪ್ರೇಕ್ಷಿತ ರೂಪಗಳು.

“ಸಿದ್ಧಯ್ಯ ಸ್ವಾಮಿ ಬನ್ನಿ
ಪವಾಡ ಗೆದ್ದಯ್ಯ ನೀವೇ ಬನ್ನಿ”[೩]

“ಧಾರ್ಮಿಕ ಚರಿತ್ರೆಯಲ್ಲಿ ಮನುಷ್ಯನ ಸಾಮಾನ್ಯ ಪ್ರಜ್ಞೆಗೆ ಒಪ್ಪಿಕೊಳ್ಳಲಾಗದ ರೀತಿಯ ಕೆಲವು ಅಸಾಮಾನ್ಯವಾದ ಅಪರೂಪದ ಮತ್ತು ಅಸಹಜವಾದ ಘಟನೆ, ಕ್ರಿಯೆ ಮತ್ತು ಹೇಳಿಕೆಗಳಿವೆ. ಈ ದಾಖಲೆಗಳನ್ನು ‘ಪವಾಡ’ಗಳೆಂದು ಧರ್ಮ ತನ್ನಲ್ಲಿ ಕಾಪಾಡಿಕೊಂಡಿದೆ. ಪವಾಡಗಳು ಅತೀಂದ್ರಿಯ ಶಕ್ತಿಯನ್ನು ದೈವಿಕತೆಯನ್ನಾಗಿ ಪರಿಪೂರ್ಣಗೊಳಿಸುವ ಪ್ರಣಾಳಿಕೆಗಳಾಗಿ ಧಾರ್ಮಿಕ ಚರಿತ್ರೆಯಲ್ಲಿ ಬಳಕೆಗೊಂಡಿವೆ. ಅಂದರೆ ತಾಂತ್ರಿಕ ವಿದ್ಯೆಗಳಿಗೆ ದೈವಿಕತೆಯ ಸ್ಥಾನವನ್ನು ದೊರಕಿಸಿಕೊಡುವ ಕೆಲಸವಾಗಿದೆ. ಯಾರು ತಮ್ಮ ಪ್ರಜ್ಞೆಯನ್ನು ದರ್ಶನಗಳ, ಕನಸುಗಳ ಅಥವಾ ಧ್ಯಾನ ಎಂಬ ಅಭ್ಯಾಸದ ಮೂಲಕ ನಿಯಂತ್ರಣದಲ್ಲಿರಿಸಿಕೊಂಡಿರುತ್ತಾರೆ ಅವರು ಪವಾಡ ಪುರುಷರೆನಿಸಿಕೊಳ್ಳುತ್ತಾರೆ.”[೪] ಪವಾಡಗಳನ್ನು ಕುರಿತು ವಿವಿಧ ವಿದ್ವಾಂಸರು ಹಲವಾರು ವ್ಯಾಖ್ಯೆಗಳನ್ನು ನೀಡಿರುವುದು ಕಂಡುಬರುತ್ತದೆ. ಅಲೌಕಿಕವಾಗಿ ಘಟಿಸುವಂತಹ ಘಟನೆಗಳು ಸಾಮಾನ್ಯ ವ್ಯಕ್ತಿಯಿಂದ ಸಾಧ್ಯವಾಗದೆಯಿರುವಂತಹದ್ದನ್ನು ಸಾಧಿಸುವುದೇ ಪವಾಡ.

“ಪವಾಡವೆಂಬ ಕನ್ನಡ ಪದಕ್ಕೆ ಸಂವಾದಿಯಾದ ಪದ ಇಂಗ್ಲೀಷನ Miracle ಆಗಿದೆ. ಪವಾಡ<ಪ್ರವಾದ (ಸಂ) ಸಂಸ್ಕೃತದ ‘ವಾದ’ ಪದಕ್ಕೆ ‘ಪ್ರ’ ಉಪಸರ್ಗಸೇರಿ ‘ಪ್ರವಾದ’ ಆಗುತ್ತದೆ. ‘ವಾದ’ ಎಂದರೆ ಚರ್ಚೆ, ತರ್ಕ, ಮಾತು, ಸಂಭಾಷಣೆ ಎಂಬ ಅರ್ಥಗಳಿವೆ. ಒಬ್ಬನ ಮಾತಿಗೆ ವಿಶೇಷ ಶಕ್ತಿ ಬಂದಾಗ ಪ್ರವಾದವಾಗುತ್ತದೆ. ‘ಪ್ರವಾದ’ ಹೇಳುವವನು ‘ಪ್ರವಾದೀ’ ಆಗುತ್ತಾನೆ. ‘ಪ್ರವಾದೀ’ ಎಂದರೆ ತನ್ನದೇ ಸರಿ ಎಂದು ಹೇಳಿ ಹಾಗೆ ಮಾಡಿ ತೋರಿಸುವವ. ಅಂದರೆ ಇಲ್ಲಿ ಹೇಳುವುದು ಮತ್ತು ಹೇಳಿದ್ದನ್ನು ಮಾಡಿ ತೋರಿಸುವುದು ಎರಡು ಕೆಲಸಗಳನ್ನು ಪ್ರವಾದಿ ಮಹಾತ್ಮ ಎಂಬರ್ಥಗಳಲ್ಲೂ ಬಳಸಲಾಗಿದೆ.”[೫] ಪವಾಡಗಳಿಗೆ ವಿವಿಧ ಅರ್ಥಗಳಿವೆ. ಪವಾಡಗಳು ಮಹಾತ್ಮರ ಬದುಕಿನ ಸುತ್ತ ಹೆಣೆಯಲ್ಪಟ್ಟಿವೆ. ಪಂಚಗಣಾಧೀಶ್ವರರು ಜನ ಸಾಮಾನ್ಯರನ್ನು ರಕ್ಷಿಸಲು, ರೋಗ-ರುಜಿನೆ, ಅಹಂಕಾರ, ಜಾತಿ, ವರ್ಗ, ವರ್ಣಗಳ ಅಂಧಕಾರದ ಕೂಪದಲ್ಲಿರುವಂತಹ ಜನರನ್ನು ತಿದ್ದಲು ಲೋಕಕಲ್ಯಾಣಕ್ಕಾಗಿ ಶ್ರಮಿಸಿದವರು.

ಪವಾಡಗಳನ್ನು ಎಸಗುವಂತಹವರು ಸಾಧು, ಸನ್ಯಾಸಿಗಳು. ಪಂಚಗಣಾಧೀಶ್ವರರು ಸನ್ಯಾಸಿಗಳಾಗಿದ್ದರು. ಬೆತ್ತ, ಜೋಳಿಗೆ, ರುದ್ರಾಕ್ಷಿ ಸರವನ್ನು ಹಾಕಿಕೊಂಡು ಗಡ್ಡದಾರಿಯಾದ ಮತ್ತು ಕಾವಿ ವಸ್ತ್ರಧಾರಿಗಳು. ಇವರು ಮರುಳರ ಅಥವಾ ಹುಚ್ಚರ ಹಾಗೆ ಜನರಲ್ಲಿ ಗುರುತಿಸಿಕೊಂಡವರು. ತಿಪ್ಪೇಸ್ವಾಮಿ ಮತ್ತು

ಕೊಟ್ಟೂರೇಶ್ವರ ಹುಚ್ಚರಾಗಿ ಕುಣಿಯುವುದರ ಮೂಲಕ ಜನರನ್ನು ತಮ್ಮ ಕಡೆ ಸೆಳೆದವರೆಂಬುದಕ್ಕೆ ಮಾಹಿತಿಗಳಿವೆ. ಇವರು ಮಹಾಮಹಿಮ ಪುರುಷರಾಗಿದ್ದರು. ಪವಾಡ ಮಾಡಲು ದೇಹದಲ್ಲಿರುವಂತಹ ಷಟ್‌ಚಕ್ರಗಳ ಮೂಲಕ ಕುಂಡಲಿನಿ ಶಕ್ತಿಯನ್ನು ಜಾಗ್ರತ ಮಾಡಿಕೊಂಡ ಯೋಗಿಗಳಿಗೆ ಪವಾಡಾತ್ಮಕ ಶಕ್ತಿ ಬರುತ್ತದೆಂದು ಯೋಗ ತಜ್ಞರು ಹೇಳುತ್ತಾರೆ. ಯೋಗದ ಪರಮ ಧ್ಯೇಯ ಪವಾಡಶಕ್ತಿಯನ್ನು ಪಡೆದುಕೊಂಡು ಪ್ರದರ್ಶಿಸುವುದಲ್ಲ. ಪರಮಾತ್ಮನಲ್ಲಿ ಒಂದಾಗುವುದು. ಪವಾಡ ಹುಟ್ಟಿಕೊಂಡಿರುವುದು ಸಾಮಾನ್ಯವಾಗಿ ಒಬ್ಬ ವ್ಯಕ್ತಿಯನ್ನು ಮಹಾಪುರುಷನೆಂದು ಹೊಗಳುವ ಸಂದರ್ಭದಲ್ಲಿ ಮತ್ತು ಧರ್ಮದ ಮಹತ್ವವನ್ನು ಆಚರಣೆಯ ವಿಧಿ ವಿಧಾನಗಳನ್ನು ಜನತೆಗೆ ಪ್ರಚಾರ ಮಾಡುವ ಸಂದರ್ಭದಲ್ಲಿ ವ್ಯಕ್ತಿಯ ಮಹಿಮೆಯನ್ನು ಸಾರುವುದು ಮತ್ತು ಧರ್ಮದ ಶ್ರೇಷ್ಠತೆಯನ್ನು ಎತ್ತಿಹಿಡಿಯುವುದು ಪವಾಡಗಳ ಉದ್ದೇಶವಾಗಿದೆ.

ಪವಾಡಗಳು ಮಹಾತ್ಮರ ಅಂತರಂಗದ ವಿವೇಚನೆಯಲ್ಲಿ ಮಾಟ-ಮಂತ್ರ, ಅಣಿಮಾದಿ ಅಷ್ಟ ಸಿದ್ಧಿಗಳು ಪವಾಡಗಳಲ್ಲ. ಅವು ಜನರಂಜನೆಗಾಗಿ, ಜನಾಕರ್ಷಣೆಗಾಗಿ ಮಾಡುವ ಉದ್ದೇಶಪೂರ್ವಕವಾದ ಮಾಟಗಳು, ಮಹಾತ್ಮರ ರೀತಿಯದಲ್ಲ. ಸರ್ವಾಂಗವೆಲ್ಲವೂ ದೈವೀಮಯವಾಗಿರುತ್ತದೆ. ನುಡಿದ ನುಡಿ, ನೋಡಿದ ನೋಟ ಪವಾಡಮಯವಾಗಿರುತ್ತದೆ. "ಸಾಧನೆಯ ಮೂಲ ಮಾರ್ಗಗಳೆಂದರೆ ಧರ್ಮ ಮತ್ತು ಯೋಗ, ಯೋಗ ಸಾಧನೆಯಿಂದ ಮೊದಲು ದೇಹ, ನಂತರ ಮನಸ್ಸಿನ ನಿಯಂತ್ರಣ ಮಾಡುವುದು. ಇದರ ಮುಂದಿನ ಮತ್ತು ಕೊನೆಯ ಭಾಗವೇ ಸತ್ಯದರ್ಶನ ಎಂಬ ನಂಬಿಕೆ. ಕೆಲವರು ಯೋಗ ಮಟ್ಟವನ್ನು ತಲುಪಿದ ಕೂಡಲೇ ತಮಗೆ ಲಭ್ಯವಾದ ಅಲೌಕಿಕ ಶಕ್ತಿಯಿಂದ ಅನೇಕ ಅತಿಮಾನುಷವಾದ, ಮಾನವನನ್ನು ಚಕಿತಗೊಳಿಸುವ ಅಸಾಮಾನ್ಯ ಘಟನೆ ಅಥವಾ ಅದ್ಭುತ ಕಾರ್ಯಗಳನ್ನು ಮಾಡಲು ತೊಡಗುತ್ತಾರೆ."[5] ಸಾಮಾನ್ಯ ಮನುಷ್ಯನಿಂದ ಆಗದೆಯಿರುವ ಕೆಲಸವನ್ನು ಅಸಾಮಾನ್ಯವಾದ ರೀತಿಯಲ್ಲಿ ಮಾಡಿ ತೋರಿಸಿದಾಗ ಪವಾಡಗಳ ರೂಪ ಪಡೆಯುತ್ತವೆ. ಪವಾಡಗಳು ಜನ ಸಾಮಾನ್ಯರ ಬದುಕಿನಲ್ಲಿ ಬೆರೆತು ಹೋಗಿವೆ. ಪವಾಡಗಳು ವ್ಯಕ್ತಿಯನ್ನು ಹಿಗ್ಗಿಸಿ ತೋರಿಸುವ ಭೂತಗನ್ನಡಿಯಾಗಿದೆ ಎಂದು ಶಿಷ್ಟ ಪುರಾಣಗಳು ಹೇಳುತ್ತವೆ.

ಪವಾಡಗಳು ಸಮುದಾಯ ಒಪ್ಪಿತ ಮೌಲ್ಯಗಳಾಗಿವೆ. ಜನರಲ್ಲಿ ನಂಬಿಕೆ ದೃಢವಾಗಿ ಬೇರೂರಿದೆ. ದೇವರು ನಂಬಿದವರನ್ನು ಕೈಬಿಡುವುದಿಲ್ಲ ಎಂಬ ನಂಬಿಕೆಯ ಕಾರಣವಾಗಿ ಪವಾಡಗಳು ಶ್ರೀಸಾಮಾನ್ಯ ಜನರ ಬದುಕಿನಲ್ಲಿ ಭಕ್ತಿಯ ಮುದ್ರೆಯನ್ನು ಒತ್ತಿವೆ. ಉದಾ: ವಿಶಾಲವಾದ ಆಗಸಕ್ಕೆ ನೀಲಿ ಬಣ್ಣವನ್ನು ಬಳಿದಿರುವ, ಅನಂತವಾಗಿ ಮಲಗಿರುವ ಭೂಮಿತಾಯಿಗೆ ಹಸಿರು ಹೊದಿಕೆಯನ್ನು ಹೊಚ್ಚಿರುವ, ವಿಶಾಲ ಆಗಸದಲ್ಲಿ ಬೆಳಕಿನ ಕಿರಣಗಳಾಗಿ ಸೂರ್ಯ, ಚಂದ್ರ, ತಾರೆಗಳನ್ನು ಇರಿಸಿರುವ ಅವುಗಳ ಚಲನೆಯನ್ನು ನಿರ್ದಿಷ್ಟಗತಿಗೆ ಒಳಪಡಿಸಿರುವ ಆ ಪವಾಡ ಪುರುಷನ ಬಗೆಗೆ ವಿಚಾರಿಸುತ್ತ ಹೋದರೆ ವರ್ಣನೆ ಮಾಡಲು ತೆರೆದ ನಮ್ಮ ಬಾಯಿಯನ್ನು ಯಾರೋ ಹಿಂದಿನಿಂದ ಬಂದು ಗಪ್ಪನೇ ಮುಚ್ಚಿದಂತಾಗುತ್ತದೆ. ಹೀಗೆ ವಿಶ್ವದ ಒಂದೊಂದು ಆವಿಷ್ಕಾರವನ್ನು ತೆರೆದ ಕಣ್ಣುಗಳಿಂದ ನೋಡುತ್ತಾ ಹೋದಂತೆ ಅಲ್ಲಿ ಪವಾಡ ಶಕ್ತಿಯ ದರ್ಶನವೇ ನಮಗಾಗುತ್ತದೆ.

ಆಧ್ಯಾತ್ಮಿಕ ಜ್ಞಾನ ಧರ್ಮಪ್ರಚಾರ ಮಾಡುವುದೇ ಶಿವಶರಣರ ಉದ್ದೇಶವಾಗಿತ್ತು. ಜಾನಪದ ಸಂಸ್ಕೃತಿಯ ಅನುಯಾಯಿಗಳಿಗೆ ಇವುಗಳನ್ನು ಪವಾಡವೆಂದು ಹೇಳಿದರು. ಮುಗ್ಧರಾದ ಅನುಯಾಯಿಗಳು ಇದನ್ನು ನಂಬಿದರು. ಏಕೆಂದರೆ ತುಂಬಿ ಹರಿಯುವ ನದಿಯಲ್ಲಿ ಇಳಿದು ಇಷ್ಟಲಿಂಗವನ್ನು ಎತ್ತಿ ಕೊಡುವುದೆಂದರೆ ಜನಸಾಮಾನ್ಯರಿಗೆ ದುಸ್ಸಾಹಾಸದ ಕೆಲಸ. ಯಾರಾದರೂ ಇದನ್ನು ಮಾಡಿದರೆ ಆ ವ್ಯಕ್ತಿಯಲ್ಲಿ ಅತಿಮಾನುಷಶಕ್ತಿ ಇರಬೇಕು ಎಂದು ನಂಬುವಂತಹದ್ದು. ಪವಾಡಕ್ಕೆ ವಶೀಕರಣವೆಂದು ಹೇಳಲಾಗುವುದಿಲ್ಲ. ಪವಾಡಗಳು ನೈಸರ್ಗಿಕ ಶಕ್ತಿಯಂತೆ ಅಸಾಮಾನ್ಯ ವಿಭೂತಿ ಪುರುಷರಲ್ಲಿ ಬೆಳೆದು ಬರುವಂತಹವು. ವಿಭೂತಿ ಪುರುಷರು ಪವಾಡಗಳನ್ನು ಮಾಡಬೇಕೆಂದು ಪೂರ್ವಭಾವಿ ಸಿದ್ಧತೆಗಳನ್ನೇನು ಮಾಡಿ ಕೊಂಡಿರಲಾರರು. ಅವು ಆಕಸ್ಮಿಕವಾಗಿ ಘಟಿಸುವಂತಹವು. ಪವಾಡವು ಬಹುಮಟ್ಟಿಗೆ ಮಂತ್ರವಿದ್ಯೆಯಂತೆ ಮೇಲುನೋಟಕ್ಕೆ ಅನಿಸಿದರೂ ಸಹಿತ ಮಂತ್ರವಿದ್ಯೆಯೆಂದು ಪರಿಗಣಿಸಲಿಕ್ಕಾಗದು. ಇದರಲ್ಲಿ ಪವಾಡ ಪುರುಷನ ಸ್ವಾರ್ಥವಾಗಲೀ, ಮಂತ್ರವಿದ್ಯೆಗಳಲ್ಲಿರುವಂತೆ ಮಾಟದ ಅಂಶವಾಗಲೀ ವ್ರತಾಚರಣೆಯ ನಿಯಮ ನಿಬಂಧನೆಗಳಾಗಲೀ ಇರುವುದಿಲ್ಲ. ಇವು ಸಾಮಾನ್ಯ ಜನರ ನಂಬಿಕೆಯಾಗಿವೆ. ಪವಾಡಗಳು ಸಾಮಾನ್ಯವಾಗಿ ಧರ್ಮಕ್ಕೆ ಅಂಟಿಕೊಂಡಿರುವಂಥವು.

ಮಹಾತ್ಮರ ಬದುಕು ಪವಾಡಗಳ ಸುತ್ತ ಹೆಣೆದಿರುತ್ತದೆ. ಅದರಲ್ಲಿ ಬುದ್ಧ, ಮಹಾವೀರ, ಮಹಮದ್, ಯೇಸುಕ್ರಿಸ್ತ, ಬಸವಣ್ಣ, ಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ ಮುಂತಾದ ಮಹಾತ್ಮರು ಸಾಧು, ಸಂತರು, ಯೋಗಿಗಳು, ಪ್ರವಾದಿಗಳು ಹೀಗೆ ಇನ್ನು ಹಲವಾರು ಜನ ಮಹಾತ್ಮರು ಪವಾಡಗಳನ್ನು ಮಾಡಿದ್ದಾರೆ. "ಸಿದ್ಧಲಿಂಗರ ಪವಾಡಗಳಲ್ಲಿ ಮಾಟ, ಮದ್ದು, ಮಂತ್ರಗಳ ಪ್ರಭಾವದಿಂದ ವಿಷಬಾಧೆ, ರೋಗಬಾಧೆ, ಮರಣ ಬಾಧೆಗಳ ಪರಿಹಾರವೂ ಸೇರುತ್ತದೆ. ಜನೋಪಯೋಗಿ ಕೆಲಸ ಕಾರ್ಯಗಳಿಗೆ ನಿಸರ್ಗಶಕ್ತಿಯನ್ನು ಬಳಸಿಕೊಂಡದ್ದು ಇದೆ. ಸೊಕ್ಕಿನಿಂದ ಮೆರೆದ ಮಾಂತ್ರಿಕರನ್ನು, ಪರಮತಸ್ಥರನ್ನು ಭಂಜಿಸಿದ್ದಿದೆ. ಹೀಗೆ ಇಂತಹ ಪವಾಡಗಳು ಹಲವಾರು ನಡೆದಿವೆ. ಪಂಚಗಣಾಧೀಶ್ವರರ ಪರಂಪರೆಯ ಸಾಲಿನಲ್ಲಿರುವಂತಹ ಗೋಣಿ ಬಸವೇಶ್ವರ ಚರಿತ್ರೆಯಲ್ಲಿ ಇಂಥಹ ಘಟನೆಗಳಿವೆ."[5] ಸಿದ್ಧರ ಜೊತೆ ಸೇರಿ ಮಾಟಮಂತ್ರಗಳನ್ನು ನಿವಾರಿಸಿದ್ದು, ಶಿವನಯ್ಯನು ಮಾಟ ಮಾಡಿಸಿದಾಗ ಅದರಿಂದ ಪಾರಾಗುವುದೆಲ್ಲವು ಗೋಣಿಬಸವೇಶ್ವರನ ಪವಾಡಗಳಲ್ಲಿವೆ.

ಮನುಷ್ಯಮಾತ್ರದಿಂದ ಆಗದೆಯಿರುವ ಕೆಲಸವನ್ನು ಅಸಾಮಾನ್ಯವಾದ ರೀತಿಯಲ್ಲಿ ಪ್ರದರ್ಶಿಸಿ ತೋರಿಸಿದಾಗ, ಅದ್ಭುತ, ಅತಿಮಾನುಷ, ಅಲೌಕಿಕ ನೆಲೆಯನ್ನು ಪಡೆಯುತ್ತವೆ. ಪವಾಡಗಳು ಕವಿಯ ಅಥವಾ ಜನ ಸಾಮಾನ್ಯ ಇಲ್ಲವೆ ಮೌಖಿಕವಾಗಿ ಸಾಹಿತ್ಯಿಕವಾಗಿ ಕವಿಯ ಕಾವ್ಯವಾಣಿಯಲ್ಲಿ ಕಸವು ಕೂಡ ರಸವಾಗುವುದು. ಅಸಾಧ್ಯವಾದ ಸಂಗತಿಗಳೂ ಕೂಡ ಸತ್ಯವಾಗಿ ಕಂಡುಬರುತ್ತವೆ. ಪವಾಡ ಕಥೆಗಳಲ್ಲಿ ಬಸವಣ್ಣನವರ ಪ್ರಾಣವು ಹೋದ ಮತ್ತು ಬಂದ ಸಂಗತಿ ಸತ್ಯವಲ್ಲ. ಆದರೆ ಸಾಹಿತ್ಯಿಕ ದೃಷ್ಟಿಯಲ್ಲಿ ಅದು ಸತ್ಯವಾದುದೇ 'ರವಿ ಕಾಣದ್ದನ್ನು ಕವಿ ಕಂಡ' ಎನ್ನುವಂತೆ. ಸಾಮಾನ್ಯ ಜನರ ಅಥವಾ ಆರ್ತರ ಇಲ್ಲವೆ

ಸಂಕಟಕ್ಕೊಳಗಾದವರ ರಕ್ಷಣೆಗಾಗಿ ಸಂಚರಿಸುವ ಸರ್ವಾಂತರ್ಯಾಮಿಗಳು ಮಾನವೀಯ ಅನುಕಂಪಯುಳ್ಳ ಮಹಾತ್ಮರು. ಪವಾಡಗಳು ಅವರ ವ್ಯಕ್ತಿತ್ವ ಮತ್ತು ಮಹಿಮೆಯನ್ನು ಸಾಮಾನ್ಯ ಜನತೆಗೆ ಮನವರಿಕೆ ಮಾಡಿಕೊಡುತ್ತದೆ.

ಮಹಾತ್ಮರು ಸಮಾಜದ ಏಳಿಗೆಗೆ ಮುಂದಾದವರು. ಹೀಗೆ ಸಮುದಾಯದ ಅಭಿವೃದ್ಧಿಯಲ್ಲಿ ತೊಡಗಿದಾಗ ಯಾವುದಾದರು ದುಷ್ಟಮೃಗ, ಪ್ರಾಣಿ ಪಕ್ಷಿಗಳು ನೆರವಾಗುತ್ತವೆ. ಹೀಗಾಗಿ ಮಹಾತ್ಮರು ಪ್ರಾಣಿ ಪಕ್ಷಿಗಳನ್ನು ವಾಹನಗಳಾಗಿ ಬಳಸಿಕೊಂಡವರು. ಮಹಾತ್ಮರ ಜಾತ್ರೆ, ಉತ್ಸವಗಳಲ್ಲಿ ಆನೆ, ನವಿಲು, ಸಿಂಹ, ಇತ್ಯಾದಿ ಪ್ರಾಣಿಗಳನ್ನು ಆರಾಧಿಸುವಂತಹದ್ದನ್ನು ಕಾಣುತ್ತೇವೆ. ಪಂಚಗಣಾಧೀಶ್ವರರು ಮಾಡಿದಂತಹ ಪವಾಡಗಳಲ್ಲಿ ಮೊದಲು ಕೆಳವರ್ಗದ ಜನರಿಗೆ ಆದ್ಯತೆ ನೀಡಿದವರು. ಕುಲವಿಲ್ಲದವರಿಗೆ ನೆಲೆ, ನೆರಳು ಕಲ್ಪಿಸಹೊರಟವರು ಅಧಿಕಾರಶಾಹಿಯ ಹಮ್ಮನ್ನು ಮುರಿದವರು. ಧಾರ್ಮಿಕ ಮಹಾಪುರುಷರೇ ಆಯಾ ಧರ್ಮದ ಸಾಂಸ್ಕೃತಿಕ ಪ್ರತಿನಿಧಿಗಳು, ಧಾರ್ಮಿಕ ತತ್ವಗಳು, ಜೀವನ ಮೌಲ್ಯಗಳು, ಧ್ಯೇಯಾದರ್ಶಗಳನ್ನು ಪವಾಡಗಳ ಮೂಲಕ ಜನತೆಗೆ ಪ್ರಚುರಪಡಿಸುವುದರ ಮೂಲಕ ಅಸ್ಪೃಶ್ಯತೆಯನ್ನು ಹೋಗಲಾಡಿಸಿದರು, ಆತ್ಮೀಯವಾಗಿ ಬದುಕಿದರು, ಮೂಢನಂಬಿಕೆಯನ್ನು ತೊಡೆದುಹಾಕಿದರು, ಮಳೆಬರಿಸುವುದು ಸಾಂಕ್ರಮಿಕ ರೋಗಗಳನ್ನು ನಿಯಂತ್ರಿಸುವುದು, ದೆವ್ವ, ಪೀಡೆ, ಪಿಶಾಚಿಗಳಿಂದ ರಕ್ಷಿಸುವುದು, ಮೋಸ ವಂಚನೆಯಿಂದ ಜನರನ್ನು ದೂರವಿರಿಸಿದರು. ಜಾತಿ, ವರ್ಗ, ವರ್ಣ ತಾರತಮ್ಯವನ್ನು ಒಡೆದೋಡಿಸಿದರು. ಸಮಾಜಮುಖಿ ಯಾದ ಕೆಲಸಕಾರ್ಯಗಳನ್ನು ಮಾಡಿದ್ದರಿಂದ ಜನರ ದೃಷ್ಟಿಯಲ್ಲಿ ದೈವತ್ವ ಸ್ಥಾನಪಡೆದುಕೊಂಡರು. ಮಹಾತ್ಮರನ್ನು ನಂಬಿದವರಿಗೆ ಯಾವಾಗಲೂ ಒಳ್ಳೆಯದಾಗುತ್ತದೆಂಬ ನಂಬಿಕೆಯಿಂದ ಪವಾಡಗಳು ಸಮುದಾಯದ ಒಪ್ಪಿತ ಮೌಲ್ಯಗಳಾಗಿವೆ. ಇದು ಭಕ್ತಿ, ವ್ರತ, ಶ್ರದ್ಧೆಯ ಪ್ರಶ್ನೆ. ಹಾಗಾಗಿ ಪವಾಡಗಳು ಸಂಭವಿಸುವವೋ ಇಲ್ಲವೋ ಅಥವಾ ಸಂಭವಿಸಿದಾಗ ಹೇಗೆ ಸಂಭವಿಸಿದವು ಜನರಿಗೆ ಪ್ರಸಾರವಾಗುವಾಗ ಯಾವ ಸ್ವರೂಪ ಪಡೆದವೆಂಬುದೆಲ್ಲಾ ವಿಚಾರವಾದ ಪ್ರಶ್ನೆಗಳು. ನಾವಿಲ್ಲಿ ಗಮನಿಸಬೇಕಾದ ಅಂಶವೆಂದರೆ ಪವಾಡಗಳೆಂಬುವು ಆಯಾ ಕಾಲಘಟ್ಟದ ಭಕ್ತ ಸಮುದಾಯದ ಮೌಲ್ಯಗಳಾಗಿವೆ.

"ಪವಾಡಗಳು ನಿಜವೆ? ಪವಾಡಗಳು ಕಣ್ಣು ಮಸುಗೆ? ಎಂದು ನಿರ್ಧರಿಸಲು ಹೋಗಿ ಬಹು ಜನರ ಭಾವನೆಯನ್ನು ಕೆರಳಿಸುವುದಕ್ಕಿಂತ ಆ ಪವಾಡಗಳ ಹಿಂದೆಯಿರುವ ಉದ್ದೇಶವನ್ನು ವಿಶ್ಲೇಷಿಸಿ, ಪವಾಡಗಳ ಬಗ್ಗೆ ಹೊಸ ದೃಷ್ಟಿಯನ್ನು ಬೆಳೆಸಿ, ಜನರ ಭಾವನೆಗಳನ್ನು ಅರಳಿಸುವುದು ಬಹುಮುಖ್ಯ. ಅಸಾಧ್ಯವಾಗಿರುವುದನ್ನು ಸಾಧ್ಯವಾಗಿಸುವ ಸಾಮರ್ಥ್ಯವನ್ನೊಂದಿದ ಮಹಾಚೇತನಗಳನ್ನು 'ಅವತಾರ ಪುರುಷರು' ಅಥವಾ ಪವಾಡ ಪುರುಷರೆಂದು ಜನ ಪೂಜನೀಯವಾಗಿ ಕಾಣುವರು. ಇದು ನಮ್ಮ ಸಂಸ್ಕೃತಿಯ ಸಂಸ್ಕಾರವಾಗಿದೆ. ಪವಾಡಗಳ ಹಿಂದೆ ಒಂದು ಘನ ಉದ್ದೇಶವಿರುದ ಆ ಘನ ಉದ್ದೇಶವನ್ನು, ತತ್ವವನ್ನು ಎತ್ತಿ ಹಿಡಿಯುವುದಕ್ಕೆ ಪವಾಡಗಳನ್ನು ಬಳಸಿಕೊಂಡರು."[8] ಪವಾಡಗಳು ಒಂದು ಸಮುದಾಯದ ಒಪ್ಪಿತ ಮೌಲ್ಯಗಳಾಗಿರುವುದರಿಂದ ಜನ ಅವುಗಳನ್ನು ನಂಬುವುದು ಕಂಡುಬರುತ್ತದೆ.

ಪುರಾತನ ಕಾಲದ ಋಷಿಮುನಿಗಳು ಧ್ಯಾನದ ಮೂಲಕ ನಾನಾ ಸಾಧನೆಗಳನ್ನು ಮಾಡಿದ್ದರೆಂದು, ತ್ರಿಕಾಲ ಜ್ಞಾನವನ್ನು ಹೊಂದಬಲ್ಲವರಾಗಿದ್ದರೆಂದು, ಭವಿಷ್ಯದಲ್ಲಿ ಯಾನ ಮಾಡಬಲ್ಲರಾಗಿದ್ದಾರೆ ಎಂದು ತಿಳಿದುಬರುತ್ತದೆ. ಪವಾಡಗಳು ಕೇವಲ ಕಲ್ಪನೆಗಳಲ್ಲ. ಮನಸ್ಸು, ದೇಹ, ಆತ್ಮಗಳನ್ನು ಶುದ್ಧವಾಗಿಟ್ಟುಕೊಂಡು ಪ್ರಯತ್ನಿಸಿದಲ್ಲಿ ಇಂದಿಗೂ ಸಾಧ್ಯವಿದೆ ಎಂದು ನಂಬುವವರು ಈಗಲೂ ಇದ್ದಾರೆ. ಕಣ್ಣಿಲ್ಲದವರಿಗೆ ಕಣ್ಣುಕೊಟ್ಟರು, ಕಾಲಿಲ್ಲದವರಿಗೆ ಕಾಲು ಕೊಟ್ಟರು ಎಂದು ಕಥೆ, ಪುರಾಣಗಳಲ್ಲಿ ಹೇಳಲಾಗಿದೆ. ಮಡಿದವರಿಗೆ ಮರಳಿ ಜೀವ ಬರಿಸುವುದು ಎಂದರೆ ಸತ್ತಂತೆ ಬದುಕಿರುವವರನ್ನು ಎಚ್ಚರಿಸಿದವರು. ಸಾಮಾನ್ಯ ಜನ ಮೂಢನಂಬಿಕೆಗಳಲ್ಲಿ ಮುಳುಗಿ ಚೇತನರಹಿತರಾಗಿ ಬಾಳುತ್ತಿರುವವರಲ್ಲಿ ವೈಚಾರಿಕ ಬೆಳಕನ್ನು ಹಚ್ಚಿ ಜಾಗೃತಗೊಳಿಸಿದರು ಎಂಬುದಾಗಿ ಕೂಡ ನಾವು ಅರ್ಥೈಸಲು ಸಾಧ್ಯವಿದೆ. ಮಡಿದವರಿಗೆ ಮರಳಿ ಜೀವ ಬರಿಸಿದರು ಎಂದರೆ ನಮ್ಮ ವಿಚಾರಶೀಲ ಮನಸ್ಸು ಅದನ್ನು ನಂಬಲು ನಿರಾಕರಿಸುತ್ತದೆ. ಅಥವಾ ಇನ್ನೇನು ಸತ್ತಂತೆ ಆಗಿದ್ದವರನ್ನು ಅಥವಾ ಸಾಯುವಂತಹ ಖಾಯಿಲೆ ಬಂದವರನ್ನು ತಮ್ಮ ಆರೈಕೆ, ಅಂತಃಕರಣಗಳಿಂದ, ವೈದ್ಯಕೀಯ ಸುಶ್ರೂಶೆಗಳಿಂದ ಬದುಕಿಸಿರಬೇಕು. ಅದು ನಂತರದಲ್ಲಿ ಸತ್ತವರಿಗೆ ಪ್ರಾಣ ಬರಿಸಿದವರು ಎಂದು ಜನಜನಿತವಾಗಿರಬೇಕು ಎಂದು ಕೂಡ ನಾವು ತರ್ಕಿಸಲು ಸಾಧ್ಯವಿದೆ. ಪವಾಡಗಳನ್ನು ಹೀಗೆ ಎಂದು ಹೇಳುವುದು ಕಷ್ಟಸಾಧ್ಯ. ಯಾಕೆಂದರೆ ಅವು ನಡೆಯುವಾಗ ನಾವು ಅದರ ಪ್ರತ್ಯಕ್ಷ ಸಾಕ್ಷಿಗಳಾಗಿಲ್ಲ. ಅದು ನಡೆಯಿತಂತೆ ಎಂದು ಹೇಳುವವರು ಕೂಡ ಅದರ ಪ್ರತ್ಯಕ್ಷದರ್ಶಿಗಳಲ್ಲ. ಭಕ್ತಿ ಭಾವನೆಯ ಮನಸ್ಸು ಅಂತಹದೊಂದು ಅತಿಮಾನುಷ ಶಕ್ತಿಯುಳ್ಳ ಮಹಿಮಾನಿತ್ವರಿದ್ದರು ಎಂದು ನಂಬಿದರೆ, ಸಾಮಾನ್ಯ ಮನಸ್ಸು ಅಲ್ಪಸ್ವಲ್ಪ ನಡೆದದ್ದನ್ನು ಉತ್ಪ್ರೇಕ್ಷಾಲಂಕಾರಗೊಳಿಸಿ ಜನಜನಿತಗೊಳಿಸಿರಬೇಕು ಎಂದು ಭಾವಿಸಬೇಕಾಗುತ್ತದೆ.

ಪವಾಡಪುರುಷರು ನೆಲೆಯೂರುವ ಮುನ್ನ ಶಿಷ್ಯ ಪರಂಪರೆಗಳು ಮಹಾತ್ಮರ ಬಗ್ಗೆ ಪ್ರಚಾರವನ್ನು ಮಾಡಿ ಹಾಡು, ಕಥೆಗಳನ್ನು ಕಟ್ಟಿ ಹೊಗಳುವ ಒಂದು ವಾತಾವರಣ ಬೆಳೆಸಿರುತ್ತದೆ. ಧಾರ್ಮಿಕ ಮಹಾಪುರುಷರ ತತ್ವಗಳು ಜನರನ್ನು ಸಾಧನೆಗೆ ಅಣಿಗೊಳಿಸಬೇಕೆ ವಿನಃ ಅವರಲ್ಲಿ ಅಂಧ ಶ್ರದ್ಧೆಯನ್ನುಂಟು ಮಾಡಿ ಮೂಢನಂಬಿಕೆಯನ್ನು ಬಿತ್ತುವುದಿಲ್ಲ. "ಇಲ್ಲಿ ಪವಾಡಗಳನ್ನು ಹೇಗೆ ಪರಿಗಣಿಸುವುದು? ಯಾವುದೇ ವೈಚಾರಿಕ ನೆಲೆಯಿಂದ ಪವಾಡಗಳನ್ನು ನೋಡಬೇಕೇ? ಪವಾಡವೆಂದರೆ ವಾಸ್ತವವನ್ನು ಮೀರುವ ಹಂಬಲ ಎಲ್ಲ ಮನಸ್ಸುಗಳಲ್ಲೂ ಈ ಹಂಬಲವಿದೆ. ಕಲ್ಪನೆಯೇ ಪವಾಡವಲ್ಲವೇ? ಪವಾಡಗಳು ಸರಿಯೋ ತಪ್ಪೋ ಎಂದು ವಿಚಾರ ಮಾಡುವುದೇ? ಪವಾಡಗಳನ್ನು ಅಲ್ಲಗಳೆಯುವುದೆಂದರೆ ಡಾಂಟೆ, ಹೋಮರ್, ವರ್ಜಿಲ್, ಮಿಲ್ಟನ್ ಎಲ್ಲರನ್ನು ಅಲ್ಲಗಳೆದಂತೆ. ಮೇನಕೆ ಶಕುಂತಲೆಯನ್ನೆತ್ತಿಕೊಂಡು ಹೋದರೆ ಕಾಳಿದಾಸನ ನಾಟಕದ ಸ್ವರೂಪವೇನು? ನಾವೇಕೆ ಪವಾಡಗಳ ಆತಂಕಿತರಾಗಿದ್ದೇವೆ. ಟಿ.ವಿ.ಸ್ವಿಚ್ ಹಾಕಿದೊಡನೆ ಕುಣಿಯುವುದು ಪವಾಡವೇ."[6] ಪವಾಡಗಳನ್ನು ಕುರಿತು ವಿಚಾರ ಮಾಡಿದಾಗ ಆಧುನಿಕ ಚಿಂತಕರು ಪವಾಡಗಳನ್ನು ಆಧುನಿಕ ಬದುಕನ್ನು ಮೈಗೂಡಿಸಿಕೊಂಡಿರುವ ಜನರು ಪವಾಡಗಳನ್ನು ನಂಬುವುದಿಲ್ಲ. ಒಂದು ಕಾಲಕ್ಕೆ ನಮ್ಮ ನಿಮ್ಮ ಹಾಗೆ ಬದುಕಿದಂತಹ ವ್ಯಕ್ತಿಗಳು. ಹೇಗೆ ದೇವರುಗಳಾದರು ಎನ್ನುವಂತಹದ್ದು. ಆರಾಧನೆ ಮಾಡೋ ಮಟ್ಟಕ್ಕೆ ಹೇಗೆ ಹೋದರು? ಅಂಬೇಡ್ಕರ್ ಅವರು ಹಿಂದೆ ನಮ್ಮ ನಿಮ್ಮ ಹಾಗೆ ಜನಗಳ ಮಧ್ಯೆ ಬದುಕಿದಂತಹ

ವ್ಯಕ್ತಿಗಳು, ಅಂಬೇಡ್ಕರ್ ಎಲ್ಲ ಮೂರ್ತಿಗಳಿಗೂ ಒಂದು (Force) ರಕ್ಷಣೆಯಿದೆ. ಆ ಮೂರ್ತಿಗೆ ಸುತ್ತಲೂ ರಕ್ಷಣೆಯಿದೆ. ಒಬ್ಬ ಚಾರಿತ್ರಿಕ ವ್ಯಕ್ತಿ ನಮ್ಮ ಎದುರುಗಡೆ ಯಾರು ಪ್ರಶ್ನೆ ಮಾಡಲಿಕ್ಕೆ ಆಗದೆ ಎದುರಿಸಿ ಬದುಕಲಿಕ್ಕೂ ಆಗದೆ, ನಮ್ಮ ಎದುರುಗಡೆ ದೇವರಾಗುತ್ತಿದ್ದಾರೆ. ಯಾರು ಪ್ರಶ್ನೆ ಮಾಡಲಿಕ್ಕೆ ಆಗುತ್ತಿಲ್ಲ. ಇದು ಏನನ್ನು ಸೂಚಿಸುತ್ತದೆ ಎಂದರೆ ಸಂಕ್ರಮಣಸ್ಥಿತಿ ಮನುಷ್ಯನಾಗಿದ್ದವರು ದೇವರಾಗುವ ಸ್ಥಿತಿ. ಯಾರು ಪ್ರಶ್ನೆ ಮಾಡಲಿಕ್ಕೆ ಆಗದೆಯಿರುವ ಗುಣಯಿರುತ್ತೆ. ಆ ಗುಣ ಅಂಬೇಡ್ಕರ್ ಅವರ ಸುತ್ತಲುಯಿದೆ. ಹಲವಾರು ವರ್ಷ ಕಳೆದು ಮುಂದಿನ ತಲೆಮಾರಿನ ಮಕ್ಕಳಿಗೆ ಅಂಬೇಡ್ಕರ್ ಸಹಿತ ದೇವರಾಗುವ ಸಾಧ್ಯತೆಯಿದೆ ಎಂಬುದು ಡಾ.ಸತೀಶ ಪಾಟೇಲರ ಹೇಳಿಕೆಯಾಗಿದೆ. ಈ ಹೇಳಿಕೆ ಸೂಚಿಸುತ್ತಿರುವಂತೆ ಪವಾಡಗಳ ಪ್ರಭಾವಳಿ ಬೆಳೆಯುವುದಕ್ಕೆ ಹಾಗೂ ಜನಜನಿತವಾಗುವುದಕ್ಕೆ ಆಯಾ ಕಾಲಘಟ್ಟದ ಸಾಮಾಜಿಕ ಸಾಂಸ್ಕೃತಿಕ ಸನ್ನಿವೇಶಗಳ ಒತ್ತಾಸೆಯಿರುತ್ತದೆ. ಹೆಚ್ಚಿನ ಸಲ ಈ ಬಗೆಯ ಪವಾಡಗಳನ್ನು ದಂತಕತೆಗಳಂತೆ ಹುಟ್ಟಿ ಕಾಲಾನುಕ್ರಮದಲ್ಲಿ ರಂಗು ಧರಿಸುತ್ತಾ, ಅಗಾಧ ಸ್ವರೂಪ ಪಡೆದುಕೊಳ್ಳುತ್ತಾ ಬೆಳೆದಿರುವ ಶ್ರದ್ಧಾವಲಯದ ಒಂದು ಪ್ರಕ್ರಿಯೆ ಎಂದು ಗ್ರಹಿಸಲಾಗಿದೆ.

ಪವಾಡಗಳಲ್ಲಿ ನಂಬಿಕೆಯಿಡುವುದರಿಂದ ಜನರನ್ನು ವಾಸ್ತವವಾದದಿಂದ ಆಧ್ಯಾತ್ಮಿಕ ಚಿಂತನೆಗೆ ಹಚ್ಚುತ್ತದೆ ಎಂಬ ವಾದವಿದೆಯಾದರೂ, ಇಹಪರಗಳಲ್ಲಿನ ಭೌತಿಕ ಲಾಭವೇ ನಂಬಿಕೆಯ ಮೂಲವಾಗಿರುವುದರಿಂದ, ಪವಾಡಗಳನ್ನು ನಂಬುವವರನ್ನು ಕೂಡ ಒಂದು ಐಹಿಕ ಅಪೇಕ್ಷೆಯ ಈಡೇರಿಕೆಯ ಗುರಿ ಹೊಂದಿರುತ್ತಾರಾದ್ದರಿಂದ ವಾಸ್ತವವಾದದಿಂದ ಪೂರ್ಣವಾಗಿ ಅವರು ಹೊರನಡೆದಂತಾಗುವುದಿಲ್ಲ. ಯಜ್ಞ ಯಾಗಗಳಿಂದ ಹಿಡಿದು ಆಧ್ಯಾತ್ಮದ ಸೋಗಿನಲ್ಲಿ ಮಾನವ ಮಾಡುವ ಪ್ರತಿಯೊಂದು ವಿಧಿ ವಿಧಾನಗಳಲ್ಲಿ ಉತ್ತಮ ಭವಿಷ್ಯದ ನಿರೀಕ್ಷೆ ಅಡಗಿರುತ್ತದೆ. ಆತ್ಮಪರಮಾತ್ಮರನ್ನು ಒಂದುಗೂಡಿಸುವಂಥ ಮೋಕ್ಷದ ಸಾಧನೆಯೇ ಪ್ರತಿಯೊಬ್ಬರ ಹೆಬ್ಬಯಕೆಯಾಗಿದೆ. "ಪವಾಡಗಳನ್ನು ವೈಜ್ಞಾನಿಕ ಒರೆಗಲ್ಲಿಗೆ ಉಜ್ಜಿ ನೋಡಿದಾಗ ಅಸಂಗತವಾದುದು, ಅವೈಚಾರಿಕವಾದುವು ಹಾಗೂ ಕಾಲ್ಪನಿಕವಾದುವು ಎಂದು ತೋರಬಹುದೇನೋ ನಿಜ. ಆದರೆ ಅವು ಅರ್ಥವಿಲ್ಲದವು ಎಂದು ತಳ್ಳಿ ಹಾಕುವುದು ಸರಿಯಲ್ಲ. ಅವುಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ, ಅರ್ಥೈಯಿಸಿದರೆ ಬಸವಾದಿ ಶರಣರು ಎತ್ತಿ ಹಿಡಿದ ನಿರ್ಭಯವಾದ ಸತ್ಯ ಪ್ರತಿಪಾದನೆ, ಸಾಮಾಜಿಕ ಸುಧಾರಣೆ, ಜನಸಾಮಾನ್ಯರ ಅಂತರಂಗದಲ್ಲಿ ಹುದುಗಿರುವ ಶುದ್ಧ ಧಾರ್ಮಿಕ ಪ್ರಜ್ಞೆ ಮುಂತಾದವು ಗೋಚರಿಸದೆ ಇರಲಾರದು. ಚರಿತ್ರೆ ಚಿತ್ರಿಸಲಾದ ಪವಾಡಗಳನ್ನು ಒಳದೃಷ್ಟಿಯ ದೀವಿಗೆ ಹಿಡಿದು ಭೇದಿಸಿ ನೋಡಿದ್ದೇ ಆದರೆ ಅಲ್ಲಿ ನಿಕ್ಷಿಪ್ತವಾಗಿರುವ ಅನರ್ಘ್ಯ, ಅಮೂಲ್ಯತತ್ವ ರತ್ನಗಳು ಕಂಗೊಳಿಸುವವು."[00] ಪವಾಡಗಳನ್ನು ವಿಶ್ಲೇಷಿಸಿ ನೋಡಿದಾಗ ಅವು ಸುಳ್ಳು ಎಂದು ಆಧುನಿಕ ಚಿಂತಕರು ಚರ್ಚಿಸುತ್ತಾರೆ. ಆಗಂತ ಪವಾಡಗಳನ್ನು ಸುಳ್ಳು ಎಂದು ನಿರಾಕರಿಸಲು ಬರುವುದಿಲ್ಲ. ಸಂದರ್ಭಗಳು ಮುಖ್ಯವಾಗಿರುತ್ತವೆ. ಆಧುನಿಕ ಶಿಕ್ಷಣಕ್ಕೆ ಒಳಗಾದಂತಹ ಬುದ್ಧಿಜೀವಿಗಳು ಪವಾಡಗಳ ಬಗ್ಗೆ ಜೆ.ಎನ್.ಟಿಬೆಟಿಯನ್, ಬೌದ್ಧಧರ್ಮ, ಸ್ವಾಮಿ ಮುಕ್ತಾನಂದ, ಭಗವಾನ್ ರಜನೀಶ, ಲಾಮಾ ಜ್ಯೋಗಮ್, ತುಂಗಸಾ, ಸಾಯಿಬಾಬಾ ಹೀಗೆ ಎಷ್ಟೋ ಜನರು ಪವಾಡ ಶಕ್ತಿಗಳ ಬಗ್ಗೆ ವೈಜ್ಞಾನಿಕ ಅಧ್ಯಯನ ನಡೆಸಲು

ಮುಂದಾದವರು. ಮಾನವನ ತರ್ಕಕ್ಕೆ ನಿಲುಕದ ಮನಸ್ಸಿನ ವಿವಿಧ ಶಕ್ತಿಗಳನ್ನು ಅನೇಕ ವಲಯದ ಶಕ್ತಿಗಳನ್ನು ಗ್ರಹಿಸುವುದು ಅವೆಲ್ಲವನ್ನು ದಾಟಿ ನಂಬುವ ಶ್ರದ್ಧೆಯನ್ನು ರೂಢಿಸಿಕೊಳ್ಳುವ ಹಂತಕ್ಕೆ ಬಂದಿದ್ದಾರೆ. ನಂಬಿಕೆಗಳು ಅವೈಜ್ಞಾನಿಕವೆಂದು ಹೇಳಲಾಗುತ್ತಿಲ್ಲ. ಹಾಗಂಥ ಅವು ಸತ್ಯ ಎಂದು ನಂಬುವುದಲ್ಲ. ಪವಾಡಗಳಲ್ಲಿರುವ ಸತ್ಯದ ಅಸ್ಮಿತೆಯನ್ನು ತಿಳಿಯುವುದು ಮುಖ್ಯವಾಗಿದೆ.

ಪವಾಡಗಳು ಆಧುನಿಕ ಬದುಕಿನ ಜನತೆಗೆ ತರ್ಕವೆಂದೆನಿಸಿದರೂ ಅವುಗಳನ್ನು ಧಾರ್ಮಿಕ ನೆಲೆಯ ಒಳಗೆ ಒಪ್ಪಿಕೊಳ್ಳಬೇಕಾದ ಪರಿಸ್ಥಿತಿ ಜನತೆಯಲ್ಲಿ ಕಂಡುಬರುತ್ತದೆ. ಧರ್ಮದ ಉದ್ಧಾರಕ್ಕೆ ಶ್ರಮಿಸಿದ ಮಹಾತ್ಮರ ಜೀವನ ಸಾಧನೆಗಳ ಅಸಾಮಾನ್ಯ ಘಟನೆಗಳನ್ನು ತರ್ಕಕ್ಕೆ ನಿಲುಕುವಂತೆ ಕಟ್ಟಿಕೊಡುತ್ತವೆ. ಜನಸಾಮಾನ್ಯರ ಸಮಸ್ಯೆಗಳನ್ನು ಬಗೆಹರಿಸುವ ನಿಟ್ಟಿನಲ್ಲಿ ಲೋಕ ಕಲ್ಯಾಣಕ್ಕಾಗಿ ಶ್ರಮಿಸಿದವರು ಪಂಚಗಣಾಧೀಶ್ವರರು. ಪವಾಡಗಳು ಒಂದರ್ಥದಲ್ಲಿ ಸತ್ಯದ ಮುಖಕ್ಕೆ ಮುಚ್ಚಿದ ಸುವರ್ಣದ ಮುಚ್ಚುಳದಂತೆ. ಈ ಮುಚ್ಚಳವನ್ನು ಓರೆ ಮಾಡಿದಾಗ ಸತ್ಯದ ಸಾಕ್ಷಾತ್ಕಾರವಾಗುತ್ತದೆ. ಪವಾಡಗಳಲ್ಲಿನ ಅದ್ಭುತ, ಅವಾಸ್ತವಿಕ ಅಂಶಗಳನ್ನು ಹೆಕ್ಕಿ ತೆಗೆದು ಬಿಡಿಸಿ ಒಳತಿರುಳನ್ನು ನೋಡಿದಾಗ ಧಾರ್ಮಿಕ ಸಂತರ, ಮಹಾಪುರುಷರ ನೈಜ ಜೀವನ ಚರಿತ್ರೆ ಲಭಿಸುವುದು. ಪವಾಡಗಳು ಸತ್ಯವೇ ಇರಲಿ, ಮಿಥ್ಯವೇ ಇರಲಿ ಇದು ಮುಖ್ಯವಲ್ಲ. ಪಂಚಗಣಾಧೀಶ್ವರರು ಪವಾಡಗಳ ಮೂಲಕ ಕಟ್ಟಿಕೊಡುವ ಸಮಾಜಮುಖಿ ಆಶಯ ಮುಖ್ಯವಾದುದು.

### ೬.೧. ಪವಾಡಗಳ ಬಗ್ಗೆ ಜನಪದರ ಕಲ್ಪನೆ

ಪವಾಡಗಳಿಲ್ಲದೆ ಪಂಚಗಣಾಧೀಶ್ವರರಿಲ್ಲ. ಪವಾಡಗಳ ಸುತ್ತ ಬೆಳೆದಿರುವ ಇವರ ಚರಿತ್ರೆ, ಪವಾಡಗಳ ಸುಳಿಯಲ್ಲಿ ಇವರ ಬದುಕಿದೆ. ಪವಾಡಗಳು ಮಾಟ, ಮಂತ್ರ, ತಂತ್ರಗಳಂತೆ ಕುರಿ ಕೋಳಿಯನ್ನು ಬಲಿಕೊಡುವ ಮುಖಾಂತರ ಒಲಿಸಿಕೊಳ್ಳುವ ವಿದ್ಯೆಯಲ್ಲ. ಹಲವು ವರ್ಷಗಳ ಸಿದ್ಧಿ ಸಾಧನೆಯ ತಪಸ್ಸಿನ ಫಲವಾಗಿದೆ. ಮಂಟೇಸ್ವಾಮಿ, ಮಾದೇಶ್ವರ, ಮೈಲಾರಲಿಂಗ, ಜುಂಜಪ್ಪ ಮತ್ತು ಪಂಚಗಣಾಧೀಶ್ವರರು ಹಲವಾರು ಪವಾಡಗಳನ್ನು ಮಾಡುವ ಮೂಲಕ ಧರ್ಮವನ್ನು ನೆಲೆ ನಿಲ್ಲಿಸುವುದರ ಜೊತೆಗೆ ಒಕ್ಕಲುಗಳಾಗಿ ಮಾಡಿಕೊಂಡು ಎಲ್ಲ ಜಾತಿಯ ಜನರಿಗೆ ಸಮಾನ ಅವಕಾಶ ಕಲ್ಪಿಸುವ ಉದ್ದೇಶವಾಗಿದೆ. ಎಲ್ಲೋ ಒಂದು ಕಡೆ ಕ್ರೂಢೀಕರಿಸಿದ್ದ ಸಂಪತ್ತನ್ನು ಇಲ್ಲದವರಿಗೂ ಸಮಾನವಾಗಿ ಹಂಚಿ ತಿನ್ನವಂತೆ ಕಾಯಕ ತತ್ವವನ್ನು ಕಲಿಸಿಕೊಟ್ಟವರು. ಲೋಕಕಲ್ಯಾಣವೇ ಅವರ ಬದುಕಿನ ಹೆಗ್ಗುರಿಯಾಗಿತ್ತು.

ಆಸರೆ ಬೇಕಾಗಿತ್ತು. ಯುದ್ಧಗಳ ನೆರಳಿನಲ್ಲಿ ಭಯದ ಭೀತಿಯಿಂದ ಬದುಕುತ್ತಿದ್ದ ಈ ಸಂದರ್ಭದಲ್ಲಿ ಪಂಚಗಣಾಧೀಶ್ವರರ ಕೃಪೆಯಿಂದಾಗಿ ಜನರು ಬದುಕಲ್ಲಿ ನೆಮ್ಮದಿಯ ಕನಸು ಕಂಡವರು. ಧರ್ಮ ಧರ್ಮಗಳ ನಡುವಿನ ತೊಡಗಿದ ಮುಸುಕಿನ ಗುದ್ದಾಟದ ಒಳಗೆ ಜೈನ, ಬೌದ್ಧ, ಮುಸ್ಲಿಂ, ಕ್ರಿಶ್ಚಿಯನ್ನರ ನಡುವೆ ಮಣ್ಣನ್ನು ಕೆದರಿ ಬದುಕು ಕಟ್ಟಿ ಜೀವಿಸುವ ಕೆಳವರ್ಗದ ಸಾಮಾನ್ಯ ಜನರಿಗೆ ಸರಿಯಾದ ನೆಲೆಯನ್ನು ತೋರಿಸಬೇಕಾಗಿತ್ತು. ಆಗ ಇಲ್ಲಿ ಅಸಮಾನತೆಯ ಬದುಕಿನ ಹಿನ್ನೆಲೆಯಲ್ಲಿ ಸಿದ್ಧ ಸಂತರು ಸಾಧಿಸಿದ ಪವಾಡಗಳು ಕೆಳವರ್ಗದವರ ಬದುಕಿಗೆ ಆಸರೆಯಾದವು. ಇದರಿಂದ ಭಕ್ತವೃಂದದ ಹೃದಯದಲ್ಲಿ

ಸಹಜವಾಗಿಯೇ ಇವರ ಬಗ್ಗೆ ನಂಬಿಕೆ, ಮನೆ ಮಾಡಿಕೊಂಡಿತು. ಮನುಷ್ಯ ಇತರ ಪ್ರಾಣಿಗಳಿಗೆ ಭಿನ್ನವಾಗಿ ತನ್ನ ಅರಿವಿನ ಪ್ರಜ್ಞೆಯ ಮೂಸೆಯಲ್ಲಿ ತನ್ನದೇ ಆದ ಬದುಕನ್ನು ಕಟ್ಟಿಕೊಂಡು ಅದರ ನಿರ್ವಹಣೆಯಲ್ಲಿ ತನಗುಂಟಾದ ನಿಗೂಢತೆಯ ಕುರಿತ ಭಯಕ್ಕೆ ಪರ್ಯಾಯವಾಗಿ ಭಕ್ತಿಯ ಮೂಸೆಯೊಳಗೆ ಶಕ್ತಿಯೊಂದನ್ನು ಕಂಡರು. ಅದನ್ನು ದೇವರೆಂದು ಪವಾಡಪುರುಷರೆಂದು, ಮಹಾಮಹಿಮರೆಂದು ಜನ ಆರಾಧಿಸತೊಡಗಿದರು. ಪಂಚಗಣಾಧೀಶ್ವರರು ಶಿವನ ಆಜ್ಞೆಯ ಮೇರೆಗೆ ಜನಿಸಿದವರು ಎನ್ನುವ ಕಲ್ಪನೆಯಿದೆ. ಸಾಮಾನ್ಯವಾಗಿ ದೇವಾನು ದೇವತೆಗಳನ್ನು ಅಲೌಕಿಕವಾಗಿ ಚಿತ್ರಿಸುವುದರಿಂದ ಜನಗಳಿಗೆ ಭಯ ಭಕ್ತಿ ಉಂಟಾಗುತ್ತದೆ. ಒಬ್ಬ ವ್ಯಕ್ತಿ ಸಾಮಾನ್ಯ ವ್ಯಕ್ತಿಯಂತೆ ಬದುಕಿದ್ದರೂ ಅವನನ್ನು ಅಸಾಮಾನ್ಯ ವ್ಯಕ್ತಿಯನ್ನಾಗಿ ಚಿತ್ರಿಸುವುದು ನಮ್ಮಲ್ಲಿ ಕಂಡುಬರುತ್ತದೆ. ಧಾರ್ಮಿಕ ಮಹಾಪುರುಷನ ಬದುಕಿನ ರೀತಿ ನೀತಿಗಳು ಸಾಮಾನ್ಯ ಜನರಿಗೆ ದಾರಿದೀಪಗಳಾಗಿವೆ. ಅವುಗಳ ಮಾರ್ಗದಲ್ಲಿಯೇ ನಡೆದುಕೊಳ್ಳುತ್ತಾರೆ. ಹಾಗೆ ಬೇಕಾದ ಆತ್ಮವಿಶ್ವಾಸವನ್ನು ಪವಾಡ ಘಟನೆಗಳಿಂದ ಪಡೆದುಕೊಂಡಿರುತ್ತಾರೆ ಎನ್ನಬಹುದು.

ನಂಬಿಕೆಯ ನೆಲೆಯಲ್ಲಿ ಬದುಕನ್ನು ಕಟ್ಟ ಹೊರಟ ಶ್ರೀಸಾಮಾನ್ಯ ಜನರಿಗೆ ಪಂಚಗಣಾಧೀಶ್ವರರ ಪವಾಡಗಳು ಮತ್ತು ಅವರು ಬದುಕಿದ ರೀತಿ ಜನರನ್ನು ಬದಲಾಯಿಸಿ ಒಳ್ಳೆಯ ಹಾದಿಯಲ್ಲಿ ನಡೆಯಲು ಪ್ರೇರೇಪಿಸಿದವು ಎನ್ನುವುದು ಇಲ್ಲಿ ಗಮನಾರ್ಹ.

“ಸಾಮಾಜಿಕ ಅಸಮಾನತೆಯನ್ನು ಸಮರ್ತಿಸುತ್ತಿದ್ದ ದೇವಾಲಯ, ಅಗ್ರಹಾರಗಳಲ್ಲಿದ್ದ ಪುರೋಹಿತಶಾಹಿ, ಇನ್ನೊಂದೆಡೆ ಊಳಿಗಮಾನ್ಯ ಪದ್ಧತಿಯನ್ನು ಪೋಷಿಸಿಕೊಂಡು ಬಂದ ಭೂಮಾಲೀಕರು, ಅರಸರು ಒಬ್ಬರನ್ನೊಬ್ಬರು ಸಮರ್ಥಿಸುತ್ತ ಸಾಮಾಜಿಕ ಮತ್ತು ಆರ್ಥಿಕ, ಜಾತಿ ವೈಷಮ್ಯದಿಂದೊಡಗೂಡಿದ ಸಮಾಜ ನಿರ್ಮಾಣದಲ್ಲಿ ತೊಡಗಿದರು. ದೇವಾಲಯಗಳು ಧರ್ಮದ ಹೆಸರಿನಲ್ಲಿ ಸಾಮಾಜಿಕ ಅಸಮಾನತೆಯನ್ನು ಸಮರ್ಥಿಸುತ್ತಿದ್ದಾರೆ. ಅರಸು ಪ್ರಭುತ್ವದ ಅಸ್ತಿತ್ವಕ್ಕಾಗಿ, ದೇವಾಲಯಗಳನ್ನು ಬೆಂಬಲಿಸುತ್ತಿದ್ದರು. ಹೀಗಾಗಿ ೧೨ನೇ ಶತಮಾನದ ಕಾಲಕ್ಕಾಗಲೇ ದುಡಿಯುವ ವರ್ಗ ಹಾಗೂ ಧಾರ್ಮಿಕ, ರಾಜಕೀಯ ಪ್ರಭುತ್ವಕ್ಕೂ ತಿಕ್ಕಾಟ ಶುರುವಾಯಿತು.”[೧೧] ಇದರಿಂದ ಶ್ರೀಸಾಮಾನ್ಯ ಜನರಿಗೆ ತೊಂದರೆ ಉಂಟಾಯಿತು.

ಹೀಗೆ ಅಸಮಾನತೆಯ ಬೀಜವನ್ನು ಬಿತ್ತಿದ್ದರಿಂದ ಇಡೀ ಸಮಾಜ ವ್ಯವಸ್ಥೆಯೇ ಜನ ತಲ್ಲಣಕ್ಕೆ ಒಳಗಾಯಿತು. ಯುದ್ಧದ ಭಯದಿಂದಲೇ ಬದುಕುವಂತಹ ಅನಿವಾರ್ಯ ಸ್ಥಿತಿ ನಿರ್ಮಾಣವಾಗಿತ್ತು. ಜನರು ಯುದ್ಧದಿಂದಾಗಿ ತಲ್ಲಣಕ್ಕೆ ಒಳಗಾದ ಜನರಿಗೆ ಶಾಂತಿ, ನೆಮ್ಮದಿಯ ಬದುಕು ಬೇಕಾಗಿತ್ತು. ಅಂತಹ ಸಂದರ್ಭದಲ್ಲಿ ಪಂಚಗಣಾಧೀಶ್ವರರು ರೂಪುಗೊಂಡರು. ದಕ್ಷಿಣದಲ್ಲಿ ಮಂಟೇಸ್ವಾಮಿ, ಮಾದೇಶ್ವರ, ಸಿದ್ಧಪ್ಪಾಜಿ, ರಾಜಾಪ್ಪಾಜಿಗಳು ಪ್ರಬಲವಾದ ಸಾಂಸ್ಕೃತಿಕ ನಾಯಕರಾಗಿ ಜನಪ್ರಿಯಗೊಂಡರೇ ಉತ್ತರದಲ್ಲಿ ಬಸವಣ್ಣ, ಸೂಫಿಗಳು ಪ್ರಭಾವಿಗಳಾಗಿದ್ದರು. ಇವುಗಳ ಮಧ್ಯೆ ಖಾಲಿ ಇರುವಂತಹ ಮಧ್ಯಕರ್ನಾಟಕ ಭಾಗದಲ್ಲಿ ನೆಲೆನಿಂತ ದೈವಗಳಾಗಿ ಪಂಚಗಣಾಧೀಶ್ವರರು ರೂಪುಗೊಂಡರು. ಇವರು ಎಲ್ಲ ದುಡಿಯುವ ವರ್ಗಗಳಿಗೆ ಸಮಾಜದಲ್ಲಿ ಅಧಿಕೃತ ಮಾನ್ಯತೆ ಬೇಕಾಗಿತ್ತು. ಅಂದಿನ ಕಾಲದಲ್ಲಿ ಈ ಬಗೆಯ ಮಾನ್ಯತೆಯನ್ನು

ಒದಗಿಸಿಕೊಡುವ ಬಹುದೊಡ್ಡ ಲೌಕಿಕ ಹಿಡಿತ ಧರ್ಮದ ಕೈಯಲ್ಲಿತ್ತು. ಈ ಹಿನ್ನೆಲೆಯಲ್ಲಿಯೇ ತಿಪ್ಪೇಸ್ವಾಮಿ ಬೇಡ ಜನಾಂಗಕ್ಕೆ, ಕೊಟ್ಟೂರೇಶ್ವರ-ಗೋಣಿಬಸವರು ಮಾದಿಗ ಜನಾಂಗವನ್ನು ವೀರಶೈವೀ ಕರಿಸುವುದನ್ನು ಹಾಗೂ ಮದ್ದಾನಸ್ವಾಮಿ ಬೇಡರ ಕನಕವ್ವನನ್ನು ಮತ್ತು ಗೋಣಿಬಸವ ಕುರುಬರ ವಡ್ಡೆಟ್ಟವ್ವನನ್ನು ಮದುವೆಯಾಗುವುದು ಈ ಎಲ್ಲರನ್ನು ಓಲೈಸಿಕೊಳ್ಳುವುದರ ಮೂಲಕ ತಮ್ಮ ಒಕ್ಕಲಾಗಿಸಿಕೊಂಡು ಪ್ರಭುತ್ವದ ಮೇಲೆ ಪ್ರಭಾವ ಬೀರಿದರು.

ಪಂಚಗಣಾಧೀಶ್ವರರು ಜನತೆಯ ರಕ್ಷಣೆಗಾಗಿ ಸಮಾಜದ ಉದ್ಧಾರಕ್ಕಾಗಿ, ಲೋಕಕಲ್ಯಾಣಕ್ಕಾಗಿ ಅನೇಕ ಜನಪರ ಕಾರ್ಯಗಳನ್ನು ಮಾಡಿದವರು. ಧಾನ್ಯ ಅಕ್ಷಯ ಮಾಡಿದ್ದು, ಸತ್ತೆಮ್ಮೆ, ಆಕಳು ಬದುಕಿಸಿದ್ದು, ಲಿಂಗ ಮಾಯಮಾಡಿದ್ದು, ಯುದ್ಧವನ್ನು ಮಾಡಿದ್ದು, ರೋಗವಾಸಿ ಮಾಡಿದ್ದು, ಸತ್ತ ವ್ಯಕ್ತಿಯನ್ನು ಬದುಕಿಸಿದ್ದು ಹೀಗೆ ಹಲವಾರು ರೀತಿಯ ಪವಾಡಗಳನ್ನು ಮಾಡಿದ್ದರಿಂದ ಜನರ ಮನಸ್ಸಿನಲ್ಲಿ ಇವರು ಸಾಮಾನ್ಯರಂತೆ ಕಾಣದೆ ಮಹಾಮಹಿಮ ಪುರುಷರು ಅಥವಾ ಪವಾಡ ಪುರುಷರು ಜನ ಕೊಂಡಾಡುವಂತಾಯಿತು. ಸಾಮಾನ್ಯರಿಂದ ಆಗದೆಯಿರುವಂತಹ ಕೆಲಸವನ್ನು ಇವರು ಮಾಡಿದ್ದರಿಂದ ಜನರ ದೃಷ್ಟಿಯಲ್ಲಿ ದೇವರಾಗಿ ರೂಪಿತರಾದರು. ನಮ್ಮ ನಡುವೆ ಬದುಕಿದ ವ್ಯಕ್ತಿ ಸಾಂಸ್ಕೃತಿಕ ನಾಯಕನಾಗಿ ರೂಪಿತವಾದರು.

ಜನರಲ್ಲಿರುವ ಅಜ್ಞಾನ ಅಂಧಕಾರ ಮೌಢ್ಯತೆಯನ್ನು ದೂರಮಾಡಿ ಜನತೆಗೆ ದುಡಿದು ಬದುಕುವ ಸಂದೇಶವನ್ನು ನೀಡುವುದರ ಮೂಲಕ ಕಾಯಕ ತತ್ವವನ್ನು ಮೈಗೂಡಿಸಿದರು. ಮೋಸ ವಂಚನೆಯಿಂದ ದೂರವಿರಿಸಿ ದುಷ್ಟತನದಲ್ಲಿ ಮೆರೆಯುವಂತಹವರ, ಅಹಂಕಾರವನ್ನು ಮುರಿದಿದ್ದರಿಂದ, ಜನ ಇವರ ಸುತ್ತ ಪವಾಡಗಳ ಕಥೆಗಳನ್ನು ಕಟ್ಟಿದರು. ಈ ಪವಾಡಗಳ ಮುಖೇನ ಜನರನ್ನು ನಂಬಿಕೆ, ಸಂಪ್ರದಾಯ, ಆಚರಣೆಯ ನೆಲೆಗೆ ಒಳಪಡಿಸಿರುವುದು ಕಂಡುಬರುತ್ತದೆ. ಜನಸಾಮಾನ್ಯರ ದೃಷ್ಟಿಯಲ್ಲಿ ಪವಾಡಪುರುಷರು ದೇವರಾಗಿದ್ದಾರೆ. ಅವರ ಪ್ರತೀಕವಾಗಿ ಜಾತ್ರೆಗಳು ನಡೆಯುತ್ತವೆ. ಜನಪದರು ಹರಕೆಯನ್ನು ಕಟ್ಟುತ್ತಾರೆ. ದೇವರು ನಮ್ಮ ಜೀವನದಲ್ಲಿ ಒಳ್ಳೆಯದನ್ನು ಮಾಡುತ್ತಾನೆ. ದೇವರು ನಮ್ಮನ್ನು ಎಂದಿಗೂ ಕೈಬಿಡುವುದಿಲ್ಲ ಎಂಬಂತಹ ಬಲವಾದ ನಂಬಿಕೆ ಜನಪದರಲ್ಲಿರುವುದರಿಂದ ಪವಾಡಗಳನ್ನು ಇಂದಿಗೂ ಜನ ನಂಬುತ್ತಾರೆ. ಆಧುನಿಕ ಯುಗದಲ್ಲಿ ಬದುಕುವಂತಹ ಮನುಷ್ಯ ಏನೇ ಒತ್ತಡವಿದ್ದರು, ಎಷ್ಟೇ ದೂರ ಇದ್ದರೂ ಜಾತ್ರೆಗೆ ತಪ್ಪದೆ ಬರುವಂತಹದ್ದು ಪೂಜೆ ಪುನಸ್ಕಾರ ಮಾಡುವುದು ಉಳಿದುಕೊಂಡು ಬಂದಿದೆ. ಮನುಷ್ಯ ಒಂದಲ್ಲ ಒಂದು ರೂಪದಲ್ಲಿ ನಂಬಿಕೆಯ ಜೊತೆಗೆ ಪವಾಡಗಳ ಸುತ್ತ ಬದುಕನ್ನು ರೂಪಿಸಿಕೊಂಡಿರುವುದು ಮುಂದುವರಿದಿದೆ ಎನ್ನಬಹುದು.

ಮಹಾತ್ಮರ ಜೀವನ ವೃತ್ತಾಂತವು ಪವಾಡಗಳ ಸುಳಿಯಲ್ಲಿ ಮುಚ್ಚಿ ಹೋಗಿರುವುದನ್ನು ಕಾಣಬಹುದು. ಅದರಿಂದಾಗಿ ಭಕ್ತ ಜನರು ಕಷ್ಟ-ಸುಖ, ನೋವು-ನಲಿವುಗಳಿಗೆ ದೈವತ್ವದ ಮೊರೆ ಹೋಗುವ ಮೂಲಕ ಸಾಮಾನ್ಯವಾಗಿ ಪರಿಹರಿಸಲಾಗದ ತಮ್ಮ ಪ್ರಯತ್ನದ ವ್ಯಾಪ್ತಿಯನ್ನು ಮೀರಿದ ಕಷ್ಟಗಳಿಗೆ ಈ ಪವಾಡ ಪುರುಷರ ಆಶೀರ್ವಾದದಿಂದ ರಕ್ಷಣೆ ಸಿಗುತ್ತದೆ. ಆ ಮೂಲಕ ಮಾನಸಿಕ ನೆಮ್ಮದಿಯನ್ನು ಪಡೆಯುತ್ತಾರೆ.

ಪವಾಡಗಳನ್ನು ನಂಬುವುದು ಸಾಮಾನ್ಯವಾಗಿ ಆತ್ಮಸ್ಥೈರ್ಯವನ್ನು ಪಡೆದುಕೊಳ್ಳುವ ಒಂದು ಮನೋತಂತ್ರದ ಭಾಗವೆಂಬಂತೆ ಪರಿಗಣಿಸಲಿಕ್ಕೆ ಆಸ್ಪದವಿದೆ. ನಾಳೆಬರುವ ಕಷ್ಟಗಳಿಗೆ ರಕ್ಷಣೆ ಸಿಗಲಿ ಎಂಬುದಾಗಿದೆ.

**೬.೨. ಪವಾಡಗಳು ಮತ್ತು ಆಧುನಿಕ ಸಂದರ್ಭ**

'ಪವಾಡ'ವೆಂದರೆ ಅಸಾಮಾನ್ಯವಾದ ಆಶ್ಚರ್ಯವನ್ನು ಉಂಟು ಮಾಡುವ ಲೋಕ ವಿಲಕ್ಷಣವಾದ ಅದ್ಭುತ ಘಟನೆ ಅಥವಾ ಸಂಗತಿ. ಕಾರ್ಯ ಕಾರಣವಿಲ್ಲದೆ ನಿಸರ್ಗ ನಿಯಮದ ವಿರುದ್ಧ ಘಟಿಸುವ ಘಟನೆ. ಪವಾಡಗಳು ನೈಸರ್ಗಿಕ ಶಕ್ತಿಯಂತೆ ಅಸಾಮಾನ್ಯ ವಿಭೂತಿ ಪುರುಷರಲ್ಲಿ ಬೆಳೆದು ಬರುವಂತಹದೆಂಬ ನಂಬಿಕೆ ಪ್ರಚಲಿತದಲ್ಲಿದೆ. ಪವಾಡಗಳನ್ನು ಮಾಡುವ ಮಹಾತ್ಮರು ಪೂರ್ವಸಿದ್ಧತೆಯನ್ನು ಮಾಡಿಕೊಂಡಿರುವುದಿಲ್ಲ. ಸಂದರ್ಭಕ್ಕೆ ಸರಿಯಾಗಿ ಅವು ಘಟಿಸುತ್ತವೆ. ಪವಾಡಗಳು ಯಾವಾಗಲೂ ಒಳ್ಳೆಯದನ್ನೆ ಮಾಡುತ್ತವೆಂಬ ಭಾವನೆಯಿಂದ ಪವಾಡಗಳ ಬಗ್ಗೆ ನಂಬಿಕೆಯಿಟ್ಟು ಪೂಜ್ಯಭಾವನೆಯಿಂದ ಕಾಣುವುದುಂಟು. ಇಂತಹ ಮಹಿಮ ಪುರುಷರನ್ನು ಜಗತ್ತಿನ ಎಲ್ಲ ಪ್ರಮುಖ ಧರ್ಮಗಳಲ್ಲೂ ಕಾಣಬಹುದು. ಯೇಸು ದೇವಪುತ್ರ, ದೇವರ ಅಂಶವೆಂದು ಬಗೆದರೆ, ಬುದ್ಧನನ್ನು ಮುಂದೆ ವಿಷ್ಣುವಿನ ಅವತಾರವೆನ್ನಲಾಗಿದೆ. ಶ್ರೀಕೃಷ್ಣನು ನಾನಾ ಅವತಾರಗಳನ್ನು ತಾಳಿ ಭಕ್ತರನ್ನು ಉದ್ಧರಿಸುವನು ಎಂಬ ನಂಬಿಕೆ ಜನಸಾಮಾನ್ಯರಲ್ಲಿದೆ.

ಬುದ್ಧ, ಬಸವಣ್ಣ, ಯೇಸು, ಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ, ಸಂತರು, ಪ್ರವಾದಿಗಳು, ಯೋಗಿಗಳು ಮತ್ತು ಪಂಚಗಣಾಧೀಶ್ವರರು ಮಾಡಿರುವ ಪವಾಡಗಳು ಹಿಂದಿನ ಕಾಲದಲ್ಲಿರುವ ಜನರ ಅಜ್ಞಾನ, ಅಂಧಕಾರ, ಮೌಢ್ಯತೆ, ವರ್ಗ, ವರ್ಣ, ಜಾತಿಗಳ ಅಸಮಾನತೆಯನ್ನು ಹೋಗಲಾಡಿಸಿ ರೋಗ, ಬರಗಾಲ ಮೊದಲಾದವುಗಳಿಂದ ಜನರನ್ನು ಬಿಡುಗಡೆಗೊಳಿಸಿ ಒಳ್ಳೆಯ ಹಾದಿಯಲ್ಲಿ ಬದುಕು ನಡೆಸಲು ಪ್ರೇರೇಪಿಸಿದವರು. ಸನ್ಮಾರ್ಗದಲ್ಲಿ ನಡೆಯುವಂತೆ ಜನರನ್ನು ರೂಪಿಸಲು, ಪವಾಡಗಳು ಸಂಭವಿಸಿ ಜನರ ಭಕ್ತಿ, ಶ್ರದ್ಧೆಗಳನ್ನು ಆಕರ್ಷಿಸಿವೆ. ಜನಸಾಮಾನ್ಯರು ಹಾದಿ ತಪ್ಪದೆ, ಶರಣರು ಬದುಕಿದ ಹಾದಿಯಲ್ಲಿ ಜನರನ್ನು ಮುನ್ನಡೆಯುವಂತೆ ಮಾಡುವಲ್ಲಿ ಪವಾಡಗಳು ನೆರವಾಗಿವೆ ಎನ್ನುವುದನ್ನು ನಾವು ಗಮನಿಸಬಹುದಾಗಿದೆ.

ಆಧುನಿಕ ಚಿಂತಕರು, ವಿಚಾರವಾದಿಗಳು, ಬುದ್ಧಿಜೀವಿಗಳು, ಪವಾಡಗಳನ್ನು, ಪವಾಡ ಪುರುಷರನ್ನು ಖಂಡಿಸುತ್ತಾರೆ. ಪ್ರಸ್ತುತ ಸಮಾಜದಲ್ಲಿ ಪವಾಡಗಳ ಬಗ್ಗೆ ಅನೇಕ ಪ್ರತಿಕ್ರಿಯೆಗಳಿವೆ. ಪವಾಡ ಪುರುಷರಲ್ಲಿ ನಂಬಿಕೆ ಹೊಂದಿದವರು ಪವಾಡ ಮತ್ತು ಪವಾಡ ಪುರುಷರ ಬಗೆಗೆ ವೈಜ್ಞಾನಿಕ ಪರೀಕ್ಷೆ ಸಾಧ್ಯವಿಲ್ಲ. ಅದು ನಂಬಿಕೆಯ ಪ್ರಶ್ನೆ ಎನ್ನುತ್ತಾರೆ. ಆದರೆ ನಾಸ್ತಿಕ ವಿಚಾರವಾದಿಗಳು ಪವಾಡಗಳ ಬಗ್ಗೆ ನಿಜಸ್ಥಿತಿಯನ್ನು ಪರೀಕ್ಷಿಸಲು ಯತ್ನಿಸುತ್ತಾ ಬಂದಿದ್ದಾರೆ. ಪವಾಡಗಳು ಕೇವಲ ಕೈಚಳಕಗಳು, ಇಲ್ಲಿ ದೈವೀಶಕ್ತಿಯ ಅವಶ್ಯಕತೆಯಿಲ್ಲ. ಜೀವನೋಪಾಯಕ್ಕೆ ಯಾವ ದೈವೀಶಕ್ತಿಯ ಹಿನ್ನಲೆಯನ್ನು ತೆಗೆದುಕೊಳ್ಳದೆ, ಹಾವಾಡಿಗರು, ಮಂತ್ರವಾದಿಗಳು ಜನರ ಎದುರು, ಹಾದುಹಗಲು, ಸಂತೆಗಳಲ್ಲಿ, ಜಾತ್ರೆಗಳಲ್ಲಿ ಕೈ ಚಳಕಗಳನ್ನು ಮಾಡುವುದನ್ನು ನೋಡುತ್ತೇವೆ. ಮಂತ್ರದ ಹೆಸರಿನಿಂದ ವಿವಿಧ ವೇಷಧರಿಸಿ, ಚತುರತೆಯಿಂದ ಮಾತಾಡಿ, ಮಂತ್ರದಂಡದ

ಚಲನೆಯಿಂದ, ತುಂಡು ವಸ್ತ್ರಧರಿಸಿ ಪ್ರದರ್ಶನದ ಆಟದ ಮೇಲೆ ಚಕಚಕನೆ ಅತ್ತಿಂದಿತ್ತ ಓಡಾಡುವ ಸುಂದರ ತರುಣಿಯರನ್ನು ಬಳಸಿಕೊಂಡು, ಪ್ರೇಕ್ಷಕರ ಗಮನವನ್ನು ಬೇರೆಡೆ ಸೆಳೆದು ಅನೇಕ ಕೈ ಚಳಕಗಳನ್ನು ಮಾಡುವುದನ್ನು ಕಂಡಿದ್ದೇವೆ. ಇವುಗಳನ್ನು ಪವಾಡಗಳೆಂದು ಹೇಳಲು ಬರುವುದಿಲ್ಲ. ಇದೊಂದು ಮಂತ್ರವಿದ್ಯೆಯಾಗಿ ಕಂಡುಬರುತ್ತದೆ.

ಪುಟ್ಟಪರ್ತಿ ಸಾಯಿಬಾಬಾ ವಿಭೂತಿ ಮಹಿಮೆಯಿಂದ ಪವಾಡಮಾಡುತ್ತಿದ್ದರು. ಬಂದ ಭಕ್ತರಿಗೆ ಉಂಗುರವನ್ನು ನೀಡುತ್ತಿದ್ದರು. ಉಂಗುರವನ್ನು ಬಿಟ್ಟು ಬೇರೆ ವಸ್ತುವನ್ನು ಕೇಳಿದರೆ ಸಾಧ್ಯವಾಗುತ್ತಿರಲಿಲ್ಲ. ಪವಾಡವನ್ನು ಪರೀಕ್ಷಿಸ ಬಯಸಿದ ವಿಚಾರವಾದಿಗಳು ಉಂಗುರ ಬೇಡ ಕುಂಬಳಕಾಯಿಯನ್ನು ಶೂನ್ಯದಿಂದ ಸೃಷ್ಟಿಸಿಕೊಡಬೇಕು ಎಂದು ಹಠಹಿಡಿದು ಮೂರುದಿನಗಳವರೆಗೆ ಕುಳಿತರು. ಕುಂಬಳಕಾಯಿ ಕೊಡಲು ಸಾಧ್ಯವಾಗಲಿಲ್ಲ. ಇಂತಹದ್ದನ್ನು ಗಮನಿಸಿದರೆ ಪವಾಡಗಳನ್ನು ಮಾಡುವ ಶಕ್ತಿ ಎಷ್ಟರ ಮಟ್ಟಿಗೆ ನಿಜ ಅಥವ ಸುಳ್ಳು ಎಂಬ ಗೊಂದಲವುಂಟಾಗುತ್ತದೆ. ಇದೇ ವಿಧಾನದಲ್ಲಿ ಅಮ್ಮ ಭಗವಾನ್‌ರು ಪವಾಡ ಮಾಡುತ್ತಾರೆಂಬ ಮಾತುಗಳಿರುವುದು ಕಂಡುಬರುತ್ತದೆ. ದೇವರ ಫೋಟೋದಿಂದ ಜೇನುತುಪ್ಪ ಸುರಿಯುವುದು, ನಾಣ್ಯಗಳು ಬೀಳುವುದು ಹೀಗೆ ಹಲವಾರು ಘಟನೆಗಳು ಸಂಭವಿಸಿವೆಯೆಂದು ಹೇಳಿರುವುದನ್ನು ಕೇಳಿದ್ದೇವೆ. ಆದರೆ ಈ ಮಾತುಗಳನ್ನು ಹೇಳುವವರು ಬೇರೆಯವರ ಎದುರಲ್ಲಿ ನಡೆಯುವುದನ್ನು ಋಜುವಾತು ಪಡಿಸುವಲ್ಲಿ ಯಶಸ್ವಿಯಾಗಿಲ್ಲ. ಇಂತಹ ಏರುಪೇರುಗಳನ್ನು ಕಂಡಾಗ ಅವು ಕೇವಲ ಜನಾಕರ್ಷಣೆಗೆಂದು ಹುಟ್ಟಿಕೊಂಡ ವದಂತಿಗಳು ಮಾತ್ರವೆಂದು ಹೇಳಲಿಕ್ಕೆ ಸಾಧ್ಯವಾಗುತ್ತದೆ.

ಆಧುನಿಕ ಪವಾಡ ಪುರುಷರಲ್ಲಿ ಅನೇಕರು ದೇವರ ಹೆಸರಿನಲ್ಲಿ ಜನರನ್ನು ದಿಕ್ಕು ತಪ್ಪಿಸುವ ಕಾರ್ಯಕ್ಕೆ ತೊಡಗಿರುವುದು ಕಂಡುಬರುತ್ತದೆ. ಜನರ ಆಕರ್ಷಣೆಗೆ ಒಳಗು ಮಾಡಿಕೊಂಡು ಭಕ್ತರಿಂದ ಹಣ ಸುಲಿಗೆ ಮಾಡುತ್ತಿರುವುದು ಕಂಡುಬರುತ್ತದೆ. ಆಧುನಿಕ ಚಿಂತಕರು ಪವಾಡಗಳನ್ನು ವಿಚಾರದ ಒರೆಗಲ್ಲಿಗೆ ಉಜ್ಜಿ ನೋಡಿದಾಗ ಪವಾಡ ಸುಳ್ಳು ಎಂದು ತರ್ಕಿಸುತ್ತಾರೆ. ಪವಾಡಗಳ ಕುರಿತು ಆಲೋಚಿಸಿ ತರ್ಕಿಸಿದಾಗ ಮಾಯ-ಮಂತ್ರಕಾರರು ಜೀವನ ಹೊರೆಯಲು ಅಳವಡಿಸಿಕೊಂಡಿರುವ ಕಣ್ಕಟ್ಟುಗಳು ಮಾತ್ರವೇ ಎಂದು ಅನಿಸುವುದು ಸಹಜವಾಗಿದೆ. ಶ್ರೀಲಂಕಾದ ದಿವಂಗತ ಡಾ.ಕೋವೂರ್ ಅವರು ಪವಾಡಗಳನ್ನು ಮಾಡಿ ತೋರಿಸಿದವರಿಗೆ ಒಂದು ಲಕ್ಷರೂಪಾಯಿಗಳ ಬಹುಮಾನ ನೀಡುವುದಾಗಿ ಘೋಷಿಸಿ ಅನೇಕ ವರ್ಷಗಳೇ ಕಳೆದಿದ್ದರೂ ಈವರೆಗೆ ಯಾವ ಪವಾಡಪುರುಷನೂ ಈ ಸವಾಲನ್ನು ಸ್ವೀಕರಿಸಲು ಮುಂದೆ ಬಂದಿಲ್ಲ. ಡಾ.ಕೋವೂರ್ ಅವರು ತಮ್ಮ ಪ್ರದರ್ಶನ ಭಾಷಣದ ಸಂಚಾರದಲ್ಲಿ ಪವಾಡಗಳ ಬಗೆಗೆ ಜನಸಾಮಾನ್ಯರಿಗೆ ತಿಳಿಯ ಹೇಳುವುದರ ಜೊತೆಗೆ ತಾವೇ ಕೆಲವೊಂದು ಇಂತಹ ಕೈಚಳಕವನ್ನು ಮಾಡಿ ತೋರಿಸಿದರು.

ಆಧುನಿಕ ಪವಾಡ ಪುರುಷರೆಸಿಕೊಂಡವರು ವೇಷ ಹಾಕಿಕೊಂಡು ಮುಗ್ಧ ಜನರನ್ನು ವಂಚಿಸುವುದನ್ನು ನೋಡಿದಾಗ ಪವಾಡ ಬಗ್ಗೆ ತರ್ಕ ಹುಟ್ಟುವುದು ಸಹಜ. ಪವಾಡ ಮಾನವನ ತಿಳುವಳಿಕೆಗೆ ನಿಲುಕದ್ದು. ವೈಜ್ಞಾನಿಕ ವಿಧಾನಕ್ಕೆ ಹೊರತಾದದ್ದು. ಹಿಂದಿನವರು ನಿಜವಾಗಿ ಪವಾಡ ಪುರುಷರಾಗಿದ್ದರು, ಇಂದಿನವರಿಗೆ

ಆ ಶಕ್ತಿಯಿಲ್ಲ ಎಂದು ಹೇಳುವುದು ವಿವೇಕ ಶೂನ್ಯತೆಯ ಮಾತಾದೀತು. ಪವಾಡಗಳು ಪ್ರಯೋಗಶಾಲೆಯಲ್ಲಿ ಪರೀಕ್ಷೆಗೆ ಒಡ್ಡಿ ಪರೀಕ್ಷಿಸಲು ಬರುವ ಭೌತಿಕ ವಸ್ತುಗಳಲ್ಲ. ಅವುಗಳನ್ನು ಅನುಭಾವದಿಂದ ಅನುಭವಿಸಬೇಕು; ಭಕ್ತಿ, ಶ್ರದ್ಧೆ ನಂಬಿಕೆಗಳಿಂದ ಪರಿಭಾವಿಸಿ ಪರಮಾತ್ಮನನ್ನು ಕಾಣಬೇಕು ಎಂದು ವಾದಿಸುವವರಿದ್ದಾರೆ. ಈ ನೆಲೆಯಲ್ಲಿ ಪಂಚಗಣಾಧೀಶ್ವರರು ಮಾಡಿರುವಂತಹ ಪವಾಡಗಳು ಜನರನ್ನು ಹಾದಿ ತಪ್ಪಿಸುವ ರೀತಿಯಲ್ಲಿರಲಿಲ್ಲ, ಅವರನ್ನು ಮರಳು ಮಾಡಿ ಸ್ವಂತ ಸುಖಕ್ಕೆ ಹಣ ವಸೂಲಿ ಮಾಡುವ ತಂತ್ರಗಾರಿಕೆಯಾಗಿರಲಿಲ್ಲ ಎಂಬ ಅಂಶವನ್ನು ಗಮನದಲ್ಲಿಟ್ಟುಕೊಳ್ಳಬೇಕಾಗಿದೆ. ಪಂಚ ಗಣಾಧೀಶರು ತಾವೇ ಸ್ವಯಂ ಇಂತಹ ಪವಾಡಗಳನ್ನು ಮಾಡಿದ್ದೇವೆ ಎಂದು ಸಾರಿಕೊಂಡವರಾಗಿರಲಿಲ್ಲ.

ಆಯಾ ಸಂತನ ಬಗ್ಗೆ ಭಕ್ತಿಯುಳ್ಳ ಜನರು ದೈವಸ್ವರೂಪಿಯಾದ ಆತನಿಗೆ ಇಂತಹ ಅತಿಮಾನುಷ ಶಕ್ತಿಗಳಿದ್ದವು ಎಂದು ಪರಿಭಾವಿಸಿಕೊಂಡಿರುವುದೇ ಹೆಚ್ಚಿನ ಸನ್ನಿವೇಶದಲ್ಲಿ ಕಂಡುಬರುತ್ತದೆ. ಕೆಲವು ಪವಾಡಗಳು ಸಮಕಾಲೀನ ಸಂತರ ನಡುವೆ ಪುನರಾವರ್ತಿತವಾಗಿ ಸಂಭವಿಸಿರುವಂತೆ ಹೇಳಿಕೆಗಳಿರಿವುದು ಕುತೂಹಲಕಾರಿ. ಉದಾ: ಬುತ್ತಿಯನ್ನು ಅಕ್ಷಯ ಮಾಡಿದ್ದು. ಇದನ್ನು ಬೇರೆ ಬೇರೆ ಪವಾಡ ಪುರುಷರು ನಡೆಸಿರುವಂತೆ ಅನೇಕ ಪೌರಾಣಿಕ ಉಲ್ಲೇಖಗಳಿವೆ. ೧೭-೧೮ನೇ ಶತಮಾನಗಳಲ್ಲಿದ್ದ ಸಂತ ಪವಾಡ ಪುರುಷರು ನಡೆಸಿದ ಈ ಪವಾಡಗಳಿಗೂ, ಅತ್ಯಂತ ಪ್ರಾಚೀನ ಕಾಲ ಪವಾಡಗಳಿಗೂ ಏನಾದರೂ ಆಶಯಾತ್ಮಕ ಸಂಬಂಧವಿದೆಯೇ ಎಂಬುದನ್ನು ಗಮನಿಸಬೇಕಾಗುತ್ತದೆ. ಏಸು ಕ್ರಿಸ್ತನ ಕಥೆಗಳಲ್ಲಿ ಬೆಟ್ಟದ ಮೇಲಿನ ಭೋಜನ ಪವಾಡ ಪ್ರಸಿದ್ಧಿ ಹೊಂದಿದೆ. ಐದು ಬ್ರೆಡ್ ಹಾಗೂ ಒಂದು ಬಟ್ಟಲು ದ್ರಾಕ್ಷಾರಸವನ್ನು ಅಲ್ಲಿ ನೆರೆದಿದ್ದ ಸಾವಿರಾರು ಜನರಿಗೆ ಹಂಚಿ ತೃಪ್ತಿಯಾಗುವಂತೆ ಮಾಡಿದ ಪ್ರಸಂಗ ಬೈಬಲ್‌ನಲ್ಲಿ ಇದೆ. ಅಕ್ಷಯ ಪಾತ್ರೆಯೊಳಗೆ ಉಳಿದಿದ್ದ ಒಂದೇ ಅಗುಳು ಅನ್ನ ತಿಂದು ದೂರ್ವಾಸನ ಜೊತೆ ಬಂದಿದ್ದ ಮುನಿಗಣಕ್ಕೆಲ್ಲಾ ಸಂತೃಪ್ತಿಯುಂಟಾಗುವಂತೆ ಮಾಡಿದ್ದು, ದ್ರೌಪದಿಯನ್ನು ಶಾಪ ಭಯದಿಂದ ಪಾರು ಮಾಡಿದ ಶ್ರೀಕೃಷ್ಣನ ಪವಾಡ ಕೂಡ ಇಲ್ಲಿ ನೆನೆಯಲರ್ಹವಾಗಿದೆ. ಬುತ್ತಿಯನ್ನು ಅಕ್ಷಯ ಮಾಡುವುದು ಎಂಬುದು ಹೀಗೆ ಜನರ ಪೌರಾಣಿಕ ಭಾವಕೋಶದಲ್ಲಿ ಉಳಿದುಕೊಂಡು ಬೇರೆ ಬೇರೆ ಮಹಿಮಾನ್ವಿತರ ಜೀವನದಲ್ಲಿ ನಡೆದ ರೀತಿಯಲ್ಲಿ ಪುನರಾವರ್ತನೆಗೊಂಡಿರುವುದನ್ನು ನೋಡಬಹುದಾಗಿದೆ. ಇದೊಂದು ಅನಾದಿಯ ಅಪೇಕ್ಷೆ. ಬಡತನದಲ್ಲಿದ್ದ, ಅನ್ನ, ಆಹಾರ ಕೊರತೆ ಎದುರಿಸುತ್ತಿದ್ದ ಜನಸಮೂಹಗಳಿಗೆ ಅನ್ನ ಅಕ್ಷಯವಾಗುವಂತೆ ಮಾಡುವ ಅವತಾರ ಪುರುಷರ ನಿರೀಕ್ಷೆ ಇರುತ್ತದೆ. ಹಾಗಾಗಿ ಇಂತಹ ಪವಾಡಗಳು ಸಂಭವಿಸಲು ಅವರ ಮನೋಸ್ಥಿತಿಯ ಪ್ರಬಲ ಹಾರೈಕೆ ಇರುತ್ತದೆ. ಹಾಗಾಗಿ ಇಂತಹ ಪವಾಡಗಳು ಸಂಭವಿಸುತ್ತವೆ. ಅದು ನಿಜವಾಗಿದ್ದಲ್ಲಿ ಅದಕ್ಕೆ ಇರುವ ಭೌತಿಕ ಕಾರಣಗಳನ್ನು ಊಹಿಸುವುದು ಕಷ್ಟಕರವೇನಲ್ಲ. ಅಥವಾ ಆ ರೀತಿ ಆಯಿತಂತೆ ಎಂಬ ವದಂತಿ ಹುಟ್ಟಿ ಹರಡುತ್ತಾ ಹೋಗಿದ್ದರೆ ಅದಕ್ಕಿರುವ ಮಾನಸಿಕ ಕಾರಣಗಳನ್ನು ಕೂಡ ಅರಿತುಕೊಳ್ಳುವುದು ಕಷ್ಟವಲ್ಲ.

ಈ ಬಗೆಯ ವಿವರಣೆಗಳನ್ನು ಇನ್ನೂ ಹಲವಾರು ಪವಾಡಗಳಿಗೆ ಸಂಬಂಧಿಸದಂತೆ ಕೂಡ ಹೇಳಬಹುದಾಗಿದೆ ಸತ್ತ ಎಮ್ಮೆಯಿಂದ ಹಾಲು ಕರೆಯುವುದು ಕೂಡ ಹಲವು ಸಂತರ ಪವಾಡ ಕಥೆಗಳಲ್ಲಿ

ಬಂದಿದೆ. ಸತ್ತವರಿಗೆ ಜೀವ ನೀಡುವುದು, ಕಣ್ಣು ಹೋಗಿಸುವುದು ಅಥವಾ ಬರಿಸುವುದು ಕೂಡ ಇದೇ ಸಾಲಿಗೆ ಸೇರುತ್ತದೆ. ಮಹಾಭಾರತದಲ್ಲಿ ಧೃತರಾಷ್ಟ್ರನಿಗೆ ಅವನ ಬೇಡಿಕೆಯಂತೆ ಕಣ್ಣು ಬರಿಸಿ ನಂತರ ಮತ್ತೆ ಅವನ ಮನವಿಯಂತೆ ದೃಷ್ಟಿ ಶಕ್ತಿ ಹೋಗಲಾಡಿಸುವ ಪವಾಡವನ್ನು ಕೃಷ್ಣ ಮಾಡಿದ್ದು ಲೋಕವಿಖ್ಯಾತವಾಗಿದೆ. ದೈವಾಂಶ ಸಂಭೂತಿ ಇರುವ ವ್ಯಕ್ತಿಗಳೆಂದು ಜನರು ಯಾರನ್ನು ಭಾವಿಸುತ್ತಾರೋ ಅಂತಹವರಿಗೆ ಈ ಬಗೆಯ ನಿಸರ್ಗಾತೀತ ಶಕ್ತಿಗಳಿರುತ್ತವೆಂಬುದು ಜನರ ಭಾವನೆ ಹಾಗೂ ನಂಬಿಕೆ. ಇವುಗಳನ್ನು ಅಕ್ಷರಶಃ ವಾಸ್ತವ ಬದುಕಿನ ಅನುಭವಗಳ ಜೊತೆ ತಾಳೆ ಹಾಕಿ ನೋಡಲು ಪ್ರಯತ್ನಿಸಬೇಕಾಗಿಲ್ಲ. ಕವಿಸಮಯ ಹಾಗೂ ಕಾವ್ಯ ಸತ್ಯಗಳ ಹಾಗೆ ಇವು ಅನುಭಾವಿಕ ಲೋಕದ ಸಂಕೇತಗಳು. ಈ ಸಂಕೇತಗಳನ್ನು ಘಟನಾವಳಿಗಳ ರೀತಿಯಲ್ಲಿ ಅರ್ಥೈಸುವ ಬದಲು ಒಂದು ಶ್ರದ್ಧೆಯ ಜಗತ್ತು ತನ್ನ ಅನುಭವಲೋಕದಲ್ಲಿ ನಿಜವಾಗಿಸಿ ಕೊಂಡಿರುವ ಸಾಧನಾಸಿದ್ಧಿಗಳು ಎಂದುಕೊಂಡರೆ ಹೆಚ್ಚು ಉಪಯುಕ್ತ.

ಈ ಪವಾಡಗಳನ್ನು ನಡೆಸುವವರು ಸ್ವತಃ ಹಾಗೆ ಮಾಡಿದವೆಂದು ಹೇಳಿಕೊಂಡರೆ ಜನ ಅವುಗಳನ್ನು ಮಾನ್ಯ ಮಾಡುವುದು ಕಮ್ಮಿ. ಆ ಬಗೆಯಲ್ಲಿ ಸಂಭವಿಸಿತು ಎಂದು ಬೇರೆಯವರು ಹೇಳಿದಾಗಲೂ ಮಹಿಮಾನ್ವಿತರು ತಮ್ಮಿಂದ ಹಾಗೆ ಸಂಭವಿಸಿತೆಂದು ಒಪ್ಪಿಕೊಳ್ಳುವುದಿಲ್ಲ. ಅದಕ್ಕೆ ಕಾರಣ ಭಗವಂತನೇ ಎಂದು ಅವರು ಸೂಚಿಸುವ ಕಥೆಗಳು ಬೇಕಾದಷ್ಟಿವೆ. ಆ ಶಕ್ತಿಗಳೆಲ್ಲಾ ಭಗವಂತನಿಗೆ ಮೀಸಲಾದವುಗಳು. ಅಂತಹ ಭಗವಂತನ ಸ್ವರೂಪಿಯಾಗಿ ಭೂಮಿಗೆ ಬಂದು ತಮ್ಮೆದುರಲ್ಲಿ ದರ್ಶನವೀಯುತ್ತಿರುವ ಈ ಪಂಚಗಣಾಧೀಶ್ವರರು ಆ ಬಗೆಯ ಅಲೌಕಿಕ ಶಕ್ತಿ ಸಂಪನ್ನರಾಗಿದ್ದರು ಎಂದು ಜನ ಭಾವಿಸುತ್ತಾರೆ. ಕೆಲವು ಸಲ ಪವಾಡ ಸದೃಷವಾಗಿ ಪರಿಹಾರ ಪಡೆಯುತ್ತಾರೆ. ಇಚ್ಛಿಸಿದ ಪರಿಹಾರ ತಮಗೆ ದೊರೆಯದಿದ್ದಲ್ಲಿ ಪವಾಡಪುರುಷನ ಶಕ್ತಿಯನ್ನು ಅವರು ಶಂಕಿಸುವುದಿಲ್ಲ. ಬದಲಾಗಿ ತಮ್ಮ ಭಕ್ತಿಯಲ್ಲೇನೋ ಕೊರತೆಯಿದೆ ಎಂದು ಹೇಳಿಕೊಳ್ಳುತ್ತಾರೆ. ಈ ಬಗೆಯ ಮನೋಸ್ಥಿತಿಯ ಆವರಣದಲ್ಲಿ ಪವಾಡಗಳು ನಿಜಗೊಳ್ಳುತ್ತವೆ ಎಂಬುದನ್ನು ನೆನಪಿನಲ್ಲಿಟ್ಟುಕೊಂಡು ಜನಸಾಮಾನ್ಯರ ಭಕ್ತಿ ಲೋಕವನ್ನು ಅಧ್ಯಯನಕಾರರು ಪ್ರವೇಶಿಸುವುದು ಹೆಚ್ಚು ಉಪಯುಕ್ತಕರವಾಗಿದೆ.

ಪಂಚಗಣಾಧೀಶರು ಜನಸಮುದಾಯದ ಬದುಕನ್ನು ಕಟ್ಟುವಲ್ಲಿ, ಜನತೆಯ ಕಷ್ಟ, ಸುಖಗಳಿಗೆ ನೆರವಾಗಲು ಪವಾಡ ಮಾಡಿದವರು. ಲೋಕಕಲ್ಯಾಣಕ್ಕಾಗಿ ಬದುಕಿದವರು. ಜನರ ಅಜ್ಞಾನ, ಅಂಧಕಾರ, ಅಹಂಕಾರ, ವರ್ಗ, ವರ್ಣ, ಜಾತಿ, ಅಸಮಾನತೆಯನ್ನು ಹೊಡೆದೋಡಿಸಲು ಪವಾಡಗಳ ಮೂಲಕ ಪ್ರೇರಣೆ ನೀಡಿದವರು. ಆಧುನಿಕ ಪವಾಡ ಪುರುಷರಿಗಿಂತ ಭಿನ್ನವಾದ ಆಲೋಚನೆಯುಳ್ಳವರಾಗಿದ್ದರು. ಹಾಗಾಗಿ ಜನತೆಯ ದೃಷ್ಟಿಯಲ್ಲಿ ಇಂದಿಗೂ ದೇವರಾಗಿ ಭಾವಿತರಾಗಿದ್ದಾರೆ. ಅದರ ಅಂಗವಾಗಿಯೇ ಇವರಿಗೆ ಸಂಬಂಧಿಸಿದ ಹಬ್ಬ, ಜಾತ್ರೆ, ಆಚರಣೆ ಅತ್ಯಂತ ವೈಭವವಾಗಿ ನಡೆಯುವುದನ್ನು ಕಾಣಬಹುದಾಗಿದೆ.

**ಅಡಿಟಿಪ್ಪಣಿ**

೧. ಮಂಟೇಸ್ವಾಮಿ ಕಾವ್ಯ:ಸಾಂಸ್ಕೃತಿಕ ಮುಖಾಮುಖಿ., ವೆಂಕಟೇಶ ಇಂದ್ವಾಡಿ, ಪುಟ.೧೬೨

೨. ವೀರಶೈವ ಸಾಹಿತ್ಯದಲ್ಲಿ ಪವಾಡ ಕಥೆಗಳು., ವ್ಹಿ.ಜಿ.ಪೂಜಾರ, ಪುಟ.೮

೩. ಕರ್ನಾಟಕ ನಾಥ ಪಥ., ರಹಮತ್ ತರೀಕೆರೆ, ಪುಟ.೧೬೪

೪. ವಿಶ್ವಕೋಶ. ಸಂ.೩, 'ಧರ್ಮ', ಪುಟ.೨೦೩

೫. ಅದೇ, ಪುಟ.೨೦೩

೬. ಸ್ಥಳನಾಮಗಳ ಅಧ್ಯಯನ ಮತ್ತಿತರ ಪ್ರಬಂಧಗಳು., ಕೆ.ಜಿ.ಗುರುಮೂರ್ತಿ, ಪುಟ.೨೭

೭. ಪಂಚಗಣಾಧೀಶ್ವರರು., ಎಸ್.ಎಸ್.ಹಿರೇಮಠ, ಪುಟ.೧೬೧.

೮. ಹರಿಹರನ ಬಸವ ಪರಿಸರ., ಶಂಕರಯ್ಯ ಮಠದ, ಪುಟ.೪೪

೯. ಮಂಟೇಸ್ವಾಮಿ ಕಾವ್ಯ:ಸಾಂಸ್ಕೃತಿಕ ಮುಖಾಮುಖಿ., ವೆಂಕಟೇಶ ಇಂದ್ವಾಡಿ, ಪುಟ.೨೩೧.

೧೦. ಬಸವಣ್ಣನವರ ವಚನಗಳು ಪೀಠಿಕೆ., ಬಸವರಾಜ ಎಲ್ ಸಂ, ಪುಟ.೧೭

೧೧. ಪಂಚಗಣಾಧೀಶ್ವರರ: ಒಂದು ಅಧ್ಯಯನ., ಸತೀಶ ಪಾಟೀಲ, ಪುಟ.೧೬ ಮತ್ತು ೧೭

# ಅಧ್ಯಾಯ - ಏಳು

# ಪಂಚಗಣಾಧೀಶ್ವರರ ಸಾಹಿತ್ಯ

೭.೧. ಕಥನಕಾವ್ಯ, ಗೀತೆಗಳು, ಲಾವಣಿ ಶತಕ

೭.೨. ಕೋಲಾಟ ಪದಗಳು, ಗಾದೆ, ಒಗಟು, ಸ್ವರವಚನಗಳು

೭.೩. ಐತಿಹ್ಯ, ಕಥೆ

# ಅಧ್ಯಾಯ ಏಳು

# ಪಂಚಗಣಾಧೀಶ್ವರರ ಸಾಹಿತ್ಯ

ಕನ್ನಡದ ಜನಪದ ಗೀತೆಗಳು ಮೌಖಿಕ ಸಂಸ್ಕೃತಿಯ ಮೂಖೇನ ರೂಪಪಡೆದಂತಹವು. ಜನಪದ ಗೀತೆಗಳು ನಾಗರೀಕ ಮನಸ್ಸಿನ ಅಭಿವ್ಯಕ್ತಿಯಲ್ಲ. ಗ್ರಾಮೀಣ ಬದುಕನ್ನು ಕುರಿತು ಹಾಡುವಂತಹ ಮೌಖಿಕ ಕಾವ್ಯ ಪ್ರಕಾರವಾಗಿದೆ. ಜನಪದ ಗೀತೆಗಳು ಧ್ಯೇಯ ಆದರ್ಶಗಳು ಜೀವನದ ದೃಷ್ಟಿ ಧೋರಣೆಗಳನ್ನು ಪ್ರತಿಬಿಂಬಿಸುವ ಕನ್ನಡಿಯಾಗಿದೆ. ಜನಪದ ಗೀತೆಗಳು ಜೀವನದ ಮೌಲ್ಯದ ಮೇಲೆ ಬೆಳಕು ಚೆಲ್ಲುತ್ತದೆ. ಆದ್ದರಿಂದಲೇ ಜನಪದರ ಗೀತೆಗಳು ಜನಪದ ಜೀವನದರ ಉಸಿರಾಗಿದೆ. ಬದುಕಿನ ಬೆಳಕಾಗಿದೆ. ಜನಪದರು ಬದುಕಿನಲ್ಲಿ ಕಂಡುಂಡ ಅನುಭವಗಳನ್ನು ಸಾಹಿತ್ಯದ ಮೂಖೇನ ಕಟ್ಟಿದವರು. ಗ್ರಾಮೀಣ ಜೀವನದ ಬದುಕು ಮಡುಗಟ್ಟಿ ನಿಂತಿದೆ. "ಶ್ರೀಸಾಮಾನ್ಯ ಜನ ಬದುಕಿನಲ್ಲಿ ಕಂಡುಂಡ ಅನುಭವಕ್ಕೆ ಕಲಾತ್ಮಕ ರೂಪ ತೊಡಿಸಿ. ಪ್ರತಿಭಾ ಬಲದಿಂದ ಹಾಡಿಕೊಂಡಾಗ, ತೋಡಿಕೊಂಡಾಗ, ಕಥೆ ಕಟ್ಟಿ ಹೇಳಿದಾಗ, ಕೇಳಿದಾಗ, ಒಗಟು, ನುಡಿಗಟ್ಟು, ನಾಣ್ಣುಡಿಗಳನ್ನು ನಿರಾಯಸವಾಗಿ ಬಳಸಿದಾಗ ಈ ಸಾಹಿತ್ಯ ಒರತೆಯ ಸೆಲೆ ಹುಟ್ಟಿ ಬತ್ತದೆ ಚಿಮ್ಮುತ್ತಲೇ ಇದೆ. ಹೊಟ್ಟೆಯೊಳಗಿನ ಹಾಡು, ಕಥೆಗಳು ಮೊದಲಾದುವುಗಳನ್ನು ಬಿಟ್ಟುಬಿಡದೆ ಹಾಡಿದವರು ನಮ್ಮ ಹಳ್ಳಿಯ ಮುಗ್ಧ ಜನಪದರು."[೧]

ಜನಪದ ಸಾಹಿತ್ಯ ಶಿಷ್ಟ ಸಾಹಿತ್ಯಕ್ಕೆ ಹಾಲೆರೆದು ಪೋಷಿಸಿಕೊಂಡು ಬಂದ ಕಾಮಧೇನು. ಜನಪದ ಗೀತೆಗಳು ತೀರ ಸರಳವಾದುದು, ಸಾಮಾನ್ಯವಾಗಿ ಚಿಕ್ಕ ರೂಪಗಳಲ್ಲಿ ಬಳಕೆಯಲ್ಲಿದೆ. ಬಹುತೇಕ ಗೀತೆಗಳು ತ್ರಿಪದಿಯ ರೂಪದಲ್ಲಿರುವುದನ್ನು ಕಾಣಬಹುದು. ಗೀತೆಗಳು ನೆರೆಹೊರೆಯ ಜನ ಆತ್ಮೀಯವಾದ ಸಂಪರ್ಕ ಸೇತುವಾಗಿರುತ್ತವೆ. "ಜನಪದ ಸಾಹಿತ್ಯ ಸಾಮಾನ್ಯ ಜನ ಜೀವನದ ಸಂಹಿತೆ. ಜೀವನದ ನೋವು-ನಲಿವು, ಸೊಗಸು-ಸುಮ್ಮಾನ, ದುಗುಡು-ದುಮ್ಮಾನ, ಆಸರಿಕೆ-ಬೇಸರಿಕೆ, ರೀತಿ-ನೀತಿ, ಕಳವಳ-ಕನವರಿಕೆ, ಉಲ್ಲಾಸ ಉನ್ಮಾದ, ತಾಯಿ ಮಕ್ಕಳ ಪ್ರೀತಿ, ವಾತ್ಸಲ್ಯ, ಮಮತೆ, ಗಂಡ-ಹೆಂಡಿರ ಪ್ರೀತಿ-ಪ್ರೇಮ, ಸಿಟ್ಟು-ಸೆಡುವು ಅತ್ತೆಯ ಅಟ್ಟಹಾಸ, ಸೊಸೆಯ ಸಂಕಟ, ಅತ್ತಿಗೆ, ಭಾವ-ಮೈದುನ, ಅತ್ತೆ-ಮಾವ, ಸೊಸೆ, ತಾಯಿ-ಮಕ್ಕಳು, ಅಣ್ಣ-ತಮ್ಮ, ಅಕ್ಕ-ತಂಗಿ ಮೊದಲಾದವರ ಸರಸ-ವಿರಸ, ಸಮರಸ ಅಲ್ಲದೆ ಹಬ್ಬ ಹರಿದಿನ, ಜಾತ್ರೆ ಉತ್ಸವಗಳಲ್ಲಿ ನಡೆಯುವ ದೈವಭಕ್ತಿ, ನಂಬಿಕೆ, ಮೂಢನಂಬಿಕೆ, ಆಚಾರ-ವಿಚಾರ, ರೂಢಿ ಸಂಪ್ರದಾಯ ಇವೆಲ್ಲವನ್ನು ಚಿತ್ರಿಸಿದೆ"[೨] ಜನಪದ ಸಾಹಿತ್ಯ.

ಜನಪದರು ಗೀತೆಯ ಮೂಲಕ ಹಳ್ಳಿಯ ಸಮಗ್ರ ಚಿತ್ರಣವನ್ನು ಕಟ್ಟಿಕೊಡುತ್ತಾರೆ. ಗೀತೆಯ ಸೊಗಡು, ಸೊಬಗು ತುಂಬಾ ಸೊಗಸಾದುದು. ಗೀತೆಗಳನ್ನು ಕಟ್ಟುವ ಚಮತ್ಕಾರಿಕ ವಿದ್ಯೆ ಗ್ರಾಮೀಣ ಜನರಲ್ಲಿ

ಕಾಣಬಹುದು. ಸಂಪ್ರದಾಯದ ಹಾಡುಗಳು, ಲಾಲಿಯ ಹಾಡುಗಳು, ಕೊಲಾಟ ಪದಗಳು, ಭಜನೆ ಪದಗಳು, ಮಂಗಳಾರತಿ ಪದಗಳು ಹುಟ್ಟಿಕೊಂಡವು. ಜನಪದ ಕಥೆ ಸಾಹಿತ್ಯಿಕ ಸಣ್ಣಕಥೆಗೆ, ಜನಪದ ಲಾವಣಿ ಸಾಹಿತ್ಯಿಕ ಕಥನ ಗೀತೆಗೆ, ಜನಪದ ಗೀತೆ ಸಾಹಿತ್ಯಿಕ ಭಾವಗೀತೆಗೆ ಹಾಗೂ ಜನಪದ ಕಾವ್ಯ ಸಾಹಿತ್ಯಿಕ ಕಾವ್ಯಗಳಿಗೆ ಪ್ರೇರಣೆಯನ್ನು ಒದಗಿಸಿದವು.

ಜನಪದ ಸಾಹಿತ್ಯದ ಮುಖೇನ ಹುಟ್ಟಿ ಬೆಳೆದ ಗೀತೆಗಳು, ಕಥೆಗಳು, ಲಾವಣಿಗಳು, ಗಾದೆ, ಒಗಟುಗಳು, ಪಂಚಗಣಾಧೀಶ್ವರರ ಸುತ್ತ ಹುಟ್ಟಿ ಬೆಳೆದವು. ಪಂಚಗಣಾಧೀಶ್ವರರ ಸಾಹಿತ್ಯ ಮೌಖಿಕವಾಗಿ ಹೆಚ್ಚು ಪ್ರಚಲಿತದಲ್ಲಿದೆ. ಅ ಭಾಗದ ಜನರು ತಮ್ಮ ಆರಾಧ್ಯ ದೈವವನ್ನು ಕುರಿತು ಗೀತೆ, ಹಾಡು, ಕಥೆ, ಲಾವಣಿಗಳ ಮೂಲಕ ಹಾಡಿ ಹೊಗಳಿದವರು. ಪಂಚಗಣಾಧೀಶ್ವರರು ನೆಲೆ ನಿಂತಿರುವ ಭಾಗದಲ್ಲೆಲ್ಲ ವಿಪುಲವಾಗಿ ಗೀತೆಗಳು, ಕಥೆಗಳು ಕಂಡುಬರುತ್ತವೆ. ಜನರು ಕಷ್ಟ, ಕೊಟಲೆಗಳಿಗೆ, ಸುಖ-ಶಾಂತಿ, ನೆಮ್ಮದಿಗೆ ದೇವರ ಮೊರೆ ಹೋಗುತ್ತಿದ್ದರು. ಪಂಚಗಣಾಧೀಶ್ವರರು ಪವಾಡಗಳ ಮೂಲಕ ಜನರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದವರು ಅವರ ಸಮಾಧಿಯ ನಂತರ ಅವರು ಬದುಕಿ ಬಾಳಿದ ರೀತಿಯನ್ನು ಕಥೆಗಳ ರೂಪದಲ್ಲಿ, ಗೀತೆಗಳ ರೂಪದಲ್ಲಿ ಕಟ್ಟಿ ಹಾಡಿ ಮನಸ್ಸಿಗೆ ಆನಂದವನ್ನುಂಟು ಮಾಡುತ್ತಿದ್ದರು. ಹೀಗೆ ಸಾಹಿತ್ಯವನ್ನು ಕಟ್ಟಿ ಹಾಡುವುದರ ಜೊತೆಗೆ ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ಕೊಂಡ್ಯೊಯಲು ಜನಪದರಿಗೆ ನೆರವಾದದ್ದು ಮೌಖಿಕ ಸಾಹಿತ್ಯ. ಆರಾಧ್ಯ ದೈವದ ಸುತ್ತ ಕಥೆ ಗೀತೆ, ಒಗಟು, ಲಾವಣಿ ಚರಿತ್ರೆಯನ್ನು ಕಟ್ಟಿ ಹಾಡಿ ಹೋಗಳುತ್ತಿದ್ದರು. ಪಂಚಗಣಾಧೀಶ್ವರರ ಸುತ್ತಲು ಜನರು ಗೀತೆ, ಐತಿಹ್ಯ, ಕಥೆಗಳನ್ನು ಕಟ್ಟಿ ಜಾತ್ರೆ ಉತ್ಸವಗಳನ್ನು ಗೀತೆಯ ಮೂಲಕ ಹಾಡಿ ಹೊಗಳಿದ್ದರೆ. ಪಂಚಗಣಾಧೀಶ್ವರರ ಸಾಹಿತ್ಯ ಮೌಖಿಕ ಸಾಹಿತ್ಯದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ನಾಯಕನಹಟ್ಟಿ ತಿಪ್ಪೇಸ್ವಾಮಿ ಮತ್ತು ಗೋಣಿಬಸವರು ಹೆಚ್ಚು ಜನಪದೀಕರಣಕ್ಕೆ ಒಳಗಾದ ದೈವಗಳಾಗಿದ್ದಾವೆ. ಕೊಟ್ಟೂರೇಶ್ವರರು ಮೌಖಿಕ ಸಾಹಿತ್ಯದ ಜೊತೆಗೆ ಲಿಖಿತ ಸಾಹಿತ್ಯದ ಪ್ರಭಾವಕ್ಕೆ ಒಳಗಾದವರು. ಉಳಿದ ಗಣಾಧೀಶ್ವರರ ಕುರಿತು ಹೆಚ್ಚು ಮಾಹಿತಿ ದೊರಕುವುದು. ಮೌಖಿಕ ಸಾಹಿತ್ಯದಲ್ಲಿ ಇದು ಜನಪದರ ಬದುಕಿನಲ್ಲಿ ಬೆರೆತು ಗ್ರಾಮೀಣ ಬದುಕಿನ ಚಿತ್ರಣವನ್ನು, ಉತ್ಸವ, ಆಚರಣೆ, ಜಾತ್ರೆ, ಸಂಪ್ರದಾಯಗಳೆಲ್ಲವು ದೈವದ ಸುತ್ತ ನೆಲೆನಿಂತಿವೆ. ಅವುಗಳಿಗೆ ಜನಪದರು ತಮ್ಮದೇ ಆದ ರೀತಿಯಲ್ಲಿ ಸರಳವಾಗಿ ಗೀತೆ, ಕಥೆಗಳನ್ನು ಕಟ್ಟಿ ಹಾಡಿ ಹೊಗಳಿರುವುದನ್ನು ಕಾಣಬಹುದು.

**ಗೋಣಿ ಬಸವೇಶ್ವರನ ಕಥನ ಕಾವ್ಯ**

ಬಸವ ಬಾರಯ್ಯ ಚನ್ನಬಸವಯ್ಯ
ನಮ್ಮೂರ ದೇವರೆ ನಮ್ಮಯ ದೇವರೆ
ಬಸವ ಬಾರಯ್ಯ ಚನ್ನಬಸವಯ್ಯ

ಅನಾದಿ ಕಾಲದಿ ಬಸವಣ್ಣ ನೀನಾಗಿ
ಬಾಳಿಗೆ ಬಂಗಾರ ತಂದವನು ನೀನಯ್ಯ

ಆದಿ ಕಾಲದಲ್ಲಿ ಚನ್ನಬಸವಣ್ಣನಾದೆ

ಆದಿ ಅನಾದಿಗಳ ಮೀರಿ ಬೆಳೆದೆಯ್ಯ

ಗೋಣಿ ಬಸವಾನೆಂಬ ಹೆಸರೀಲೆ

ರಾಜರ ರಾಜಯ್ಯ ಬಸವ ರಾಜಯ್ಯ

ನಿನಗುಂಟು ಶಿವನೆ ಅರಮನೆ

ನಿನಗುಂಟು ಶಿವನೆ ಅರಮನೆ

ರಾಜಣ್ಣ ನಮಗೆ ಕೋಡೋದರುಶಾನ

ಕೂಲಹಳ್ಳೀಲಿ ಕುಂಕುಮ ಸುರಿದೆಯ್ಯ

ಉಜ್ಜಿನಿ ಊರಲ್ಲಿ ಬಂಡಾರ ಚಲ್ಲೀದೆ

ಗೋಣೀಲೆ ವಿಷವು ಹಿಡಿದಿಟ್ಟೆ

ನೀನಯ್ಯ ಅವರಿಂದಾಲೇ ವಿಷಕಂಠನಾದೆ

ರಾಜಯ್ಯ ಬಾರೋ ಗೋಣಿಬಸವಯ್ಯ

ಶಿವನೆ ಚನ್ನಯ್ಯು ಚನ್ನಬಸವಯ್ಯ

ಬಾಲಬಸವರು ಹಾಡುವಂತ ಕಾವ್ಯದಲ್ಲಿ ೧೨ನೇ ಶತಮಾನದ ಬಸವಣ್ಣನನ್ನು ಕೇಂದ್ರಿಕರಿಸಿ ಅವರ ಜೊತೆ ಸುತ್ತುವರಿದು ಚನ್ನಬಸವಣ್ಣನನ್ನು ಹೊಗಳುತ್ತಾ ಗೋಣಿಬಸವ ಜೊತೆ ಸಮೀಕರಿಸಿದ್ದನ್ನು ಕಾವ್ಯ ಹೇಳುತ್ತದೆ.

**ಗೋಣಿಬಸವೇಶ್ವರನ ಜನಪದ ಗೀತೆ**

"ಗೋಣಿಬಸವಣ್ಣಾ ಬಂದಾ

ಶಿವಾ ಎಂಬ ಶಬ್ದವ ತಂದಾ

ಕನಕವ್ವನ ಹೊಟ್ಯಾಗ ಹುಟ್ಟೀ

ಕಾವಿಯ ಬಟ್ಟೆ ಧರಿಸೀಕೆಂಡಾ"[1]

"ಮದ್ವಾನ ಸ್ವಾಮಿ ಮಠದಾ ಮುಂದೆ

ಉಪ್ಪರಿಗೀ ಬಲೂ ಚೆಂದಾ

ಗಾಡಿಕಾರ ಗೋಣೀಬಸವಾ

ಮೋಡಿಕಾರ ಗೋಣಿಬಸವಾ

ಸಿದ್ದರ ಕೂಡಾ ಆಡಾ

ಆ ಸಿದ್ಧರ ಕೂಡ ಆಡಿ

ಸಿದ್ಧ ವಿದ್ಯೆ ಕಲತಾನಲ್ಲಾ"[೪]

"ಸೋಮವಾರ ಗೋಣಿಬಸವಾ

ಹುಲಿಯ ಬೇಸಾಯ ಹೊಡೆದ

ನೂಲಿನಾವು ಮಿಣಿಯಾ ಮಾಡಿ

ನಾಗರಾವು ಬಾರ್‌ಕೋಲು ಮಾಡಿ"[೫]

"ಗೋಣಿ ಬಸವಣ್ಣಾ ಬಂದಾ

ಶಿವ ಎಂಬ ಶಬ್ದವ ತಂದಾ

ಚಿಗಟೇರಿ ಶಿವನಯ್ಯ ನಿನ್ನ

ಪರಾ ಪರಾ ಕಾಡಿದನಲ್ಲಾ

ಕಲ್ಲು ಗಾಣಕಾಕಿದನಲ್ಲಾ

ಮುಳ್ಳು ಗಾಣಕಾಕಿದನಲ್ಲಾ

ಎದ್ದು ಎದ್ದು ಬಂದೂ ಶರಣಾ"[೬]

"ಗೋಣಿಬಸವಣ್ಣಾ ಬಂದಾ

ಶಿವ ಎಂಬ ಶಬ್ಧವ ತಂದಾ

ಅಳಿಲು ಗೊಂಗಡಿ ಗದ್ದಿಗಿ ಮಾಡೀ

ದಾಟ್ಯಾನು ಹಮ್ಮಿಗಿ ಹೊಳೆಯಾ

ಗುಮ್ಮಗೋಳಕ ಹೋಗ್ಯಾನಲ್ಲಾ

ಶಿಲಾಮೂರ್ತಿ ಯಾಗಾನಲ್ಲಿ

ಗೋಣಿಬಸವಣ್ಣಾ ಬಂದಾ

ಶಿವಾ ಎಂಬ ಶಬ್ದವ ತಂದಾ"[೭]

ಗೋಣಿಬಸವಣ್ಣಾ, ಕೂಲಹಳ್ಳಿಯ ಮದ್ದಾನಸ್ವಾಮಿ ಮಠದಲ್ಲಿ ನೆಲೆನಿಂತಿರುವುದನ್ನು ಹೇಳುತ್ತದೆ. ಗೋಣಿಬಸವಣ್ಣಾ ಮಾಡಿದಂತಹ ಪವಾಡಗಳನ್ನು ಗೀತೆಯ ರೂಪದಲ್ಲಿ ಹಾಡಲಾಗಿದೆ. ಹುಲಿಯ ಬೇಸಾಯ ಮಾಡಿದ್ದು, ಹಾವನ್ನು ಬಾರ್‌ಕೋಲು ಮಾಡಿಕೊಂಡ ವಿಷಯಗಳು ಗೋಣಿ ಬಸಪ್ಪ ಮಹಿಮಪುರುಷ ಎಂಬುದನ್ನು ಕಟ್ಟಿಕೊಡುತ್ತದೆ. ಚಿಗಟೇರಿ ಶಿವನಯ್ಯ ಮಾಡಿದಂತಹ ತಂತ್ರಗಳು ಅವುಗಳಿಂದ ಗೋಣಿ ಬಸಪ್ಪ ಪಾರಾಗಿದ್ದನ್ನು ವಿವರಿಸುತ್ತದೆ. ಶಿವನಯ್ಯನ ಕಾಟದಿಂದಾಗಿ ಕೂಲಹಳ್ಳಿ ಬಿಟ್ಟು ಅಳವಂಡಿಗೆ ಹೋಗಿ ಅಲ್ಲಿ ದೀಕ್ಷೆ ಗುರುವನ್ನು ಪಡೆದು ಗದ್ದುಗೆ ಸ್ಥಾಪಿಸಿ ಅಲ್ಲಿಂದ ಮುಂದೆ ಗುಮ್ಮಗೋಳಕ್ಕೆ ಹೋಗಿ ನೆಲೆನಿಂತ ಎಂಬುದನ್ನು ಕಾವ್ಯದಲ್ಲಿ ಹಾಡಿ ಹೊಗಳಿದ್ದಾರೆ.

**ಕೊಟ್ಟೂರೇಶ್ವರನ ಜನಪದ ಗೀತೆ**

ಅಪ್ಪ ಕೊಟ್ರಯ್ಯ ಕಪ್ಪೇಲಿ ಕಡು ಚೆಲುವ
ಇಟ್ಟು ಬಂಗಾರಕ ಹೊಳೆದಾನ ಕೊಟ್ರಯ್ಯ
ಗಚ್ಚೀನ ಪವಳ್ಯಾಗ ನೆನದಾನ.

ಎಲ್ಲಾ ದೇವರ ಪೂಜೆ ಕಲ್ಲಕಟ್ಟೆಯ ಮ್ಯಾಲ
ಕೊಟ್ರಯ್ಯನ ಪೂಜೆ ಮರಡೀಲಿ | ಕೊಟ್ರಯ್ಯ
ಅಪ್ಪಾ ನಿನ್ನ ಪೂಜೆ ಅರ್ತಿಲಿ

ಕುಂತರ ನಿಮಧ್ಯಾನ ನಿಂತರ ನಿಮಧ್ಯಾನ
ನಿದ್ರಿಗಣ್ಣೇಲಿ ನಿಮಧ್ಯಾನ ಕೊಟ್ಟೂರ
ಸ್ವಾಮಿ ನಿಮಧ್ಯಾನ ಮನದಾಗ.

ಕೊಟ್ರಯ್ಯ ಹೋಗಾಕ ಮಲ್ಲಿಗಿ ಹೂ ಬೇಕ
ಬಾಳಿಗೊನಿ ಬೇಕ ಎರಡು ಕೊಟ್ಟೂರು
ಕೊಟ್ರಯ್ಯಗೆ ಹೋಗಿ ಬರುವೇನ.

ಊರ ಜನರಲ್ಲಿ ನಡದಾರ ಕೊಟ್ಟೂರು ಜಾತ್ರೀಗಿ
ನಾ ಏನ ಒಯ್ಲಿ ಹಡದವ್ವ ನಾನು
ಹಿಡಿಯಲ್ಲಿ ಒಯ್ಯಿತಿನಿ ಹಿಡಿ ಹೊನ್ನ.

ಕೊಟ್ಟೂರು ಬಸವಣ್ಣನ ತೇರೆಳಿಯುತಿರುವಾಗ
ತೀರಲಿಲ್ಲ ನನ್ನ ಮನಿಗೆಲಸ | ಹಾಡದವ್ವ
ಇಲ್ಲಿಂದ್ಲೆ ನಾ ಕೈ ಮುಗದೇನ

ಗುರುವಿನ ಮಠದಾಗ ತಿರುಗಾಡುವವರ್ಯಾರೆ
ರೇಷ್ಮೆ ದೋತರದ ದೊರೆಮಗ ಕೊಟ್ರಯ್ಯ
ಗುರು ಸೇವೆ ಮಾಡಿ ಬರುತಾರ.

ಹಂಪಿ ಹೋಳಿ ಚಂದ ಪಂಪನ ಗುಡಿ ಚಂದ
ಕೊಟ್ಟರು ಚಂದ ಪರಸಿಗೆ | ಕೊಟ್ರಯ್ಯನ
ಧ್ಯಾನ ಚಂದ ಪ್ರಜೆಗಳಿಗೆ.

ಕುಂಬಳ ಹೂವ ಚೆಂದ ಕುಂಬಳದ ಕಾಯಿ ಚಂದ
ಈಭೂತಿ ಚಂದ ಹಣೆಮ್ಯಾಲ ಕೊಟ್ರಯ್ಯ

ಲಿಂಗಯ್ಯ ಚೆಂದ ಊರಾಗ

(ಕೊಟ್ಟೂರು ದಲಿತ ಮಹಿಳೆ ದುರುಗಮ್ಮ ಅವರಿಂದ ಸಂಗ್ರಹಿಸಿದ್ದು)

ಕೊಟ್ಟೂರು ಗುರುಬಸವನ ಪೂಜೆಗೆ ಹೋಗಲಿಕ್ಕೆ ಜನಪದ ಮಹಿಳೆಗೆ ಸಾಧ್ಯವಾಗುವುದಿಲ್ಲ. ಬಿಡುವಿಲ್ಲದ ಮನೆಯ ಕೆಲಸದ ಮಧ್ಯೆ ಆಕೆ ಮನೆಯಿಂದ ದೇವರಿಗೆ ಪೂಜೆ ಸಲ್ಲಿಸುವಂತಹದ್ದನ್ನು ಹಾಡಿಹೊಗಳಿದ್ದಾರೆ. ಹಳ್ಳಿಯ ಹೆಣ್ಣುಮಗಳು ಬಡತನದಿಂದ ಸ್ವಾಮಿಯ ಪೂಜೆಗೆ ಹಣ್ಣುಕಾಯಿ ತೆಗೆದುಕೊಂಡು ಹೋಗುವುಕ್ಕೂ ಆಗುವುದಿಲ್ಲ. ಆಕೆ ಏನ ಹೊಯ್ಲಿ ಪೂಜೆಗೆ ಎಂಬುದನ್ನು ಗೀತೆಯ ರೂಪದಲ್ಲಿ ಕಟ್ಟಿಕೊಟ್ಟಿದ್ದಾರೆ.

**ತಿಪ್ಪೇರುದ್ರಸ್ವಾಮಿ ಕುರಿತ ಜನಪದ ಗೀತೆ**

ಹಟ್ಟಿಯ ತಿಪ್ಪಯ್ಯ ಸತ್ತೇ ವುಳ್ಳೋನು
ಫಣಿಯಪ್ಪಗೆ ಬಲುದಾನು ತಿಪ್ಪಯ್ಯ
ಭಿಕ್ಷಾಕೆ ಮನಿ ಮನಿಯ ತಿರುಗ್ಯಾನು
ರಾಯದುರುಗದ ಸಂತೆ ಇಬ್ಬಾರು ಮಾಡ್ಯಾರು
ಬಾಳನ್ನು ಬಡುವ ಫಣಿಯಪ್ಪನಲ್ಲೀಗ
ಯೋಗಿ ಜಂಗಮ ಅವನಲ್ಲಿ ||
ಫಣಿಯಪ್ಪ ತಿಪ್ಪಯ್ಯ ಇಬ್ಬಾರು ಅವರಾಗೆ
ಇಬ್ಬಾರು ಕಪ್ಲೆ ಹೊಡೆದಾರು ಅವರೀಗೆ
ಬಾನಿ ಹರಿದಾತು ಗಳಿಗೇಲಿ
ಬಾನಿಯ ಹೊತ್ತು ಫಣಿಯಪ್ಪ ನಡೆದಾನು
ಹರಳಯ್ಯನ ಮನಿಗೆ ತಿಪ್ಪಯ್ಯ ಇರುವೊನೆ
ಸಿವು ಪೂಜೆಗಲ್ಲಿ ಕುಂತವ್ನ
ಮಾದಿಗರ ಮನಿಯಾಗೆ ಸಿವು ಪೂಜೆ ಮಾಡಿದ್ದು
ಸಿವು ಪೂಜೆಗೆ ನಾನು ಕರಿಬ್ಯಾಡ ನಮಿಗೆ
ತಕ್ಕಾದ ಸಿವುನಲ್ಲ ಅವನಾಗ
ಅಯ್ಯೋ ನನ ಸ್ವಾಮಿ ಎಂತಾ ಮಾತಾಡುತೀಯ
ಒಳಗೆ ಸಿವು ಪೂಜೆಗೆ ಕುಂತವ್ರೆ ಏ ಸಿವನೆ

ಫಣಿಯಪ್ಪನ ಮನೆಯಲ್ಲಿ ತಿಪ್ಪೇಸ್ವಾಮಿಯಿರುವಾಗ ಕಪ್ಲೆಬಾನಿ ಹರದು ಹೊದಂತಹ ಸಂದರ್ಭದಲ್ಲಿ ಹೋಲಿಸಿಕೊಂಡು ಬರಲು ತಿಪ್ಪೇಸ್ವಾಮಿ ಬೇಗಾರಹಟ್ಟಿಗೆ ಬರುತ್ತಾರೆ. ಅಲ್ಲಿ ಹಳ್ಳಯ್ಯನ ಮನೆಯಲ್ಲಿ ಶಿವಪೂಜೆಗೆ ಕುಳಿತಿರುವ ಸ್ವಾಮಿಯನ್ನು ಕಂಡು ಫಣಿಯಪ್ಪನಿಗೆ ಸಿಟ್ಟು ಬರುತ್ತದೆ. ಮನೆಗೆ ಬಂದು ಹೆಂಡತಿಗೆ ಹೇಳುತ್ತಾರೆ. ಸ್ವಾಮಿಗೆ ಬಂದರೆ ಮನೆಗೆ ಸೇರಿಸಬೇಡ ನಮಗೆ ತಕ್ಕದ ಶಿವನಲ್ಲ ಎಂದು ಹೇಳುತ್ತಾರೆ.

ಎಂತಾನೆ ನುಡಿಯ ನುಡಿತಿಯೊ

ಫಣೆಯಪ್ಪ ಎಂತಾ ಮಾತು ನಾ ಆಡಿದ್ಯೊ

ಎಲ್ಲರಿಗೆ ನಾನು ಮೆಲ್ಲಾಕೆ ಬಗುತ ಫಣೆಯಪ್ಪ

ನಿನ್ನ ಮನಿಯಲ್ಲಿ ಇರುಲಾರೆ

ಬಾಳೆಕಾಯಿ ಚಂದ ಬಾಳಿಹೂವು ಚಂದ

ಬಜಾರ ಚಂದಾ ಹಟ್ಯಾಗೆ ಊರಾ ಮುಂದ್ಲ

ಯೋಗಿ ತಿಪ್ಪಯ್ಯ್ನ ಮಠ ಚಂದ

ಮಾರೀಯ ಗುಡಿ ಚಂದ ಅಟ್ಟ್ಯಾಗ ತಿಪ್ಪೇಸ್ವಾಮಿ

ತಾವೊಳ್ಳೇದೆಂದು ನೆಲೆನಿಂತ

ನಾಯಕನಹಟ್ಟಿಗೆ ತಿಪ್ಪೇಸ್ವಾಮಿ ಬರುವುದಕ್ಕೆ ಮೊದಲು ಇಲ್ಲಿ ವಡ್ನಳ್ಳಿ ಮಾರಮ್ಮ ನೆಲೆಸಿದ್ದಳು. ಸ್ವಾಮಿಗಳು ಬಂದು ಬೆತ್ತ ಜೋಳಿಗೆಯನ್ನು ಗುಡಿಯೊಳಗೆ ಇಟ್ಟಾಗ ದೇವಾಲಯವೆಲ್ಲ ಬೆತ್ತ ಜೋಳಿಗೆಯಿಂದ ತುಂಬಿ ಹೋಗಿರುವುದನ್ನು ಕಂಡ ಮಾರಮ್ಮ ಇಳಿ ನನ್ನ ಪ್ರಭಾವ ಕಡಿಮೆಯಾಗಿದೆ. ನೀನು ಇಲ್ಲೆ ಇರು ಎಂದು ಸ್ವಾಮಿಗೆ ಹೇಳಿ ಮಾರಮ್ಮ ಒಡ್ನಳ್ಳಿಗೆ ಹೋಗಿ ನೆಲೆಸಿದಳು. ಮಾರಮ್ಮ ನೆಲೆಸಿರುವ ಗುಡಿಯಲ್ಲಿ ತಿಪ್ಪೇಸ್ವಾಮಿ ನೆಲೆನಿಂತಿರುವುದು.

ಹಳ್ಳಿ ಎನ್ನದಾರಿ ದಿಳ್ಳಿ ನಾಯ್ಕನಹಟ್ಟಿ

ಆರು ಸಾವಿರದ ಎಲಿತ್ವಾಟ ತನುವೀಗೆ

ಸ್ವಾಮಿ ತಿಪ್ಪಯ್ಯ ನೆಲೆ ನಿಂತ

ಕಲ್ಲೇನೆ ಕಟುಗಾರು ಕುಲದಲ್ಲಿ ಪಂಚಚಾರ

ಕಲ್ಲೇನ ತಿಪ್ಪಯ್ಯ್ನ ಸಿಕರವೇ ಕಟವ್ಯಾರೆ

ನಿಲಿಸ್ಯಾರೆ ತಿಪ್ಪಯ್ಯ್ನ ಗುಡಿಮ್ಯಾಲೆ

ಮಠದ ಬಾಗಿಲ ಮುಂದೆ ನಂದಿಯ ಕೋಲು

ಮಾತುವುದೇನೆ ತಂಗಿ ಮಠದಾಗೆ ತಿಪ್ಪೇಸ್ವಾಮಿ

ಬಲಕೈತಿ ಬಾಳಿ ಎಳಿದೋಟ

ಅಣ್ಣಾನ ಗುಡಿ ಮುಂದೆ ಇನ್ನೇನು ಬೆಳೆದಾವು

ಸಣ್ಣಾರುದ್ರಾಕ್ಷಿ ಕಿರುನಲ್ಲಿ ಕಿತ್ತಾಳೆ

ಅಣ್ಣಾನ ಗುಡಿಸುತ್ತ ಬೆಳೆದಾವು

ಅಂತ ಅಂತರಕೆ ನಿಂತಾವು ನಾಕು ಕಂಬ

ಎಂತ ಭಿನ್ನಣವೀ ಕಟ್ಟುವ್ಯಾರೆ ನಾಯ್ಕನಹಟ್ಟಿ

ಸಂತೋಸವಾ ಸಿಗುದಾವು

ನಾಯಕನಹಟ್ಟಿಗೆ ತಿಪ್ಪೇಸ್ವಾಮಿ ಬಂದು ನೆಲೆನಿಂತ ಮೇಲೆ ಜನರಿಗೆ ನೀರಾವರಿ ವ್ಯವಸ್ಥೆ ಕಲ್ಪಿಸಿದನು. ಆ ಭಾಗದ ಸುತ್ತಮುತ್ತ ಜನರೆಲ್ಲ ಸಮೃದ್ಧಿ ಬೆಳೆಯನ್ನು ಬೆಳೆದು ಹಚ್ಚ ಹಸಿರಿನ ಪರಿಸರದಿಂದ ಕೂಡಿರುತ್ತದೆ. ನಾಯಕನಹಟ್ಟಿಯಲ್ಲಿ ವ್ಯಾಪಾರ ವ್ಯವಹಾರಗಳೆಲ್ಲವನ್ನು ಹೊಂದಿರುವ ಸಮೃದ್ಧವಾದ ಪರಿಸರ ತಿಪ್ಪೇಸ್ವಾಮಿ ದೇವಾಲಯದ ಸುತ್ತ ದೇವರ ಪೂಜೆಗೆ ಬೇಕಾಂದತಹ ಹೂ, ಎಲೆ, ಪತ್ರೆ ದೇವಾಲಯದ ಸುತ್ತ ಬೆಳೆಯುತ್ತಾರೆ ಎಂಬುದನ್ನು ಗೀತೆಯಲ್ಲಿ ಹಾಡಿದ್ದಾರೆ.

ತೂಗು ಮಂಚದ ಲಿಂಗ ಸಿವಯೋಗ ಮಹಾಲಿಂಗ
ತೂಗು ಮಂಚದ ಮಹಲಿಂಗ ನಿಜ ಕರುಣೆ
ಸಿವಯೋಗಿ ತಿಪ್ಪಯ್ನ ನಿಜಲಿಂಗ

ಹತ್ತು ಸಾವಿರದ ಲಿಂಗವೊತ್ತಲಿ ಮನು ಮತಲಿಂಗ
ಹತ್ತೇ ಸಾವಿರದ ನವರತ್ನ ಐದಾವು
ಸ್ವಾಮಿ ತಿಪ್ಪಯ್ಯ್ನ ಮಠದಾಗೆ

ಅಯ್ತುವಾರಗಳಲೆಲ್ಲ ಸೋಮ್ವಾರದಿರುಳೆಲ್ಲ
ಸ್ವಾಮಿ ತಿಪ್ಪಯ್ಯ ಮದುಮಗ ನಾಯಕನಹಟ್ಟಿ
ಬೀದಿಗಳಲ್ಲಿ ಮೆರವಣಿಗೆ

ಹೊನ್ನು ಮಾರುವ ಸಾಲು ಚಿನ್ನಾ ಮಾರುವ ಸಾಲು
ಹೆಣ್ಣು ಮಕ್ಕಳಿಡುವಂತ ಬಳೆಸಾಲು ಆದಾವೆ
ತಂದೆ ತಿಪ್ಪಯ್ಯ ಗಿರಿ ಮ್ಯಾಲೆ

ಫಣೆಯಪ್ಪ ತಿಪ್ಪೇಸ್ವಾಮಿ ಕಪ್ಲೆ ಹೋಡೆಯುವುದು ಮಾದಿಗರ ಮನೆಯಲ್ಲಿ ಶಿವ ಪೂಜೆ ಮಾಡುವಂತಹದ್ದು ಈ ಊರಿನ ಸುತ್ತಮುತ್ತ ಹಚ್ಚ ಹಸಿರಿನ ವಾತಾವರಣವನ್ನು ಕಟ್ಟಿಹಾಡಿ ಹೊಗಳಿದ್ದಾರೆ. ನಾಯಕನ ಹಟ್ಟಿಯಲ್ಲಿ ಪ್ರತಿ ಸೋಮವಾರ ಉತ್ಸವ ನಡೆಯುವಾಗ ತಿಪ್ಪೇಸ್ವಾಮಿಯ ಉತ್ಸವ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಮೆರವಣಿಗೆ ಹೋಗುವಾಗ ಬೀದಿಯ ತುಂಬ ಬಳೆಗಾರರು ಸಾಮಾನುಗಳನ್ನು ಮಾರುವ ವ್ಯಾಪಾರಿಗಳನ್ನು ಕಾಣುವಂತಹದ್ದು.

ಬಂದೀಯ ಬೋರಮ್ಮ ಬಂದಾಳೆ ಸೀರಿಗೆ
ಜಂಬಾರವೇನೆ ಮಠದಾಗೆ ತಿಪ್ಪೇಸ್ವಾಮಿ
ಒಂಭತ್ತು ದಿನದಾ ಮದುಮಗನು
ತೇರು ಕಟ್ಟುವಾಗ ಯ್ಯಾರ‍್ಯಾರು ಇರಬೇಕು
ಗ್ರಾಮದ ಗೌಡ ದೊರಿಮಗ ಮಲ್ಲಣ್ಣ

ತೇರೀಗೆ ಎಣ್ಣೆ ಎರಿಸ್ಯಾನು

ತಂದೆ ತಿಪ್ಪಣ್ಣ ಬೆವತಾನು ಬಸವೇರು

ಮಳೆಗಾಲಕ್ಕೆ ಇಲ್ಲಿಗೆ ಸೆಳಿಗಾಲಕೆ ಕೇದಿಗೆ

ಬೆಟ್ಟ ಬ್ಯಾನಿಗೆಗೆ ದವನಾವೆ

ಆಚೆ ವಾಲಗದೋರು ಈಚೆ ಪಾತ್ರದೋರು

ಬಾಕೊರು ತೋಳ ಬಸವೇರು ಬರುವಾಗ

ಬೂಪ ತಿಪ್ಪಯ್ಯ ಬೆವತಾನೆ

ತಿಪ್ಪೇಸ್ವಾಮಿ ಜಾತ್ರೆಗೆ ಒಂಭತ್ತು ದಿನದ ಮೊದಲು ಮದುಮಗನು ಅಲ್ಲಿಂದ ನಂತರ ರಥೋತ್ಸವದ ಸಿದ್ಧತೆಗಳು ನಡೆಯುತ್ತವೆ. ರಥೋತ್ಸವದ ಗಾಲಿಗೆ ಗೌಡ್ರ ಮಲ್ಲಣ್ಣ ಎಣ್ಣೆ ಹಾಕಿದ್ದಾನೆ ಎಂಬುದನ್ನು ಹಾಡುತ್ತಾರೆ. ರಥೋತ್ಸವ ನಡೆಯುವಂತಹ ಸಂದರ್ಭದಲ್ಲಿ ತಿಪ್ಪೇಸ್ವಾಮಿ ಮಲ್ಲಿಗೆ, ಕೇದಿಗೆ, ದವಸಗಳಿಂದ ಸಿಂಗರಿಸುತ್ತಾರೆ. ಹೂ ಶೃಂಗಾರದಿಂದ ಬೆವತು ಹೋಗುತ್ತಾನೆ. ಸ್ವಾಮಿಗೆ ಬಸವಿಯರು ಗಾಳಿಬೀಸುವುದನ್ನು ಗೀತೆಗಳಲ್ಲಿ ಜನಪದರು ಕಟ್ಟಿ ಹಾಡಿದ್ದಾರೆ.

ಅಪ್ಪಾನ ತೇರು ಮತ್ತೆ ಹಸುನಾದಾವು

ಹನ್ನೆಲ್ಡಿ ಎಲಿಯೆ ಅವನೀಗೆ ಹಸುನಾದಾವು

ಹರತಿ ಗೌಡರನ ಬರಹೇಳೋ

ಒಳಮಠಕ್ಕೆ ಜಂಗಮರು ಹೊರಮಠಕೆ ಭಕ್ತಾರು

ಕುಲವನ್ನೆಲ್ಡೇ ಜಾತಿ ಕಲೆಯಾಲಿ ಹೊರಮಠದಾಗೆ

ಅಣ್ಣಾ ನಿಮತೇರು ಬಣ್ಣವಾಗ್ಯದಾವೆ

ಅನ್ನೊಂದು ನೂರು ಪಟವೇರಿ ತಿಪ್ಪೇಸ್ವಾಮಿ

ಗೊಂಬೀಯ ತೇರು ನಗುತಾವೆ

ತೇರನ್ನೆಳಿಯಾಕ ತೆಂಗೀನಗ್ಗಾ ಬೇಕು.

ವೊಂಬಾಳೆ ಬೇಕು ಕಳಸಾಕೆ ತಿಪ್ಪೇಸ್ವಾಮಿ

ಗೊಂಬೀಯ ತೆರು ಎಳಿಯಾಕೆ

ತೇರು ಸುಂಗಾರವಾಗಿ ಏಳಟ್ಟಿಯ ರುದ್ರ

ತೇರಿನ ಮ್ಯಾಲಿರುವ ಕಳಸ ಸುಂಗಾರವಾಗಿ

ಸೂಳೇರ ಬೋಗಿರತವೇನು

ರುದ್ರ ನಿಮತೇರು ಬಗ್ಗುತ್ತ ಬಳಕುತ್ತ

ರುದ್ರಾಕ್ಷಿ ಕಣಿಯುದುರುತ ಶಿವಯೋಗಿ

ರುದ್ರ ಬಂದ ತೇರು ವೊಸತೇರು

ಸ್ವಾಮಿ ತಿಪ್ಪಣ್ಣನ ಗಾಜೀನ ಮಠದಲ್ಲಿ
ತೇರುಗಳು ಸಾಗಿ ಬರವಲ್ಲಿ ಅಕ್ಕಾ ನಾವು
ಯಾಲಕ್ಕಿ ಸೂರೆ ಬಿಡುವಾನು

ತೇರನು ಎಳಿದಾಗ ಸುರಬೆಲ್ಲದ ಬಿಟ್ಟು
ತೇರೆಳಿದು ನೆಲಿಗೆ ನಿಲುವಾಗ ನಿವ್ವಾಳಿಸಿ
ಆರತಿಯ ಬೆಳುಗೇರು ನೀರಾರು

ರಥೋತ್ಸವದ ಆರಂಭದಿಂದ ಮುಕ್ತಾಯದ ವರೆಗಿನ ಸಡಗರವನ್ನು ಸಂಭ್ರಮ ಜನಪದರು ಗೀತೆಯ ಮೂಲಕ ಜಾತ್ರೆಯ ಸಡಗರವನ್ನು ಹೊಗಳಿದ್ದಾರೆ. ಯಾರು ತೇರನ್ನು ಕಟ್ಟಬೇಕು, ಜಾತ್ರೆಗೆ ಯಾರ್‍ಯಾರು ಬರಬೇಕು, ಜಾತ್ರೆಯಲ್ಲಿ ನಡೆಸುವಂತಹವರು ಯಾರು ಯಾವ ಯಾವ ಕೆಲಸ ಮಾಡಬೇಕು ಎಂಬುದನ್ನು ಗೀತೆಯಲ್ಲಿ ಹಾಡಿ ಹೊಗಳಿದ್ದಾರೆ. ಜನರು ಹರಕೆಯ ರೂಪದಲ್ಲಿ ತೂರುವ ಸುರಬೆಲ್ಲದ ಸಂಭ್ರಮವನ್ನೆಲ್ಲ ತ್ರಿಪದಿಯ ಮೂಲಕ ಕಟ್ಟಿಕೊಟ್ಟಿದ್ದಾರೆ.

ಯಾಕೆ ತಿಪ್ಪೇಸ್ವಾಮಿ ಕೋಪಾವು ನನ ಮ್ಯಾಲೆ
ಬೇಕೆಂದರೆ ಬೆಳ್ಳಿ ಸಿಕುರಾವೆ ಮಾಡಿಸುವೆ
ಸಾಕು ಮಾಡಯ್ಯ ಬಡತಾನ

ಬಡತಾನ ಬಯಲಾಗಿ ನಮ ಕೈಯಿ ಮೇಲಾಗಿ
ಅಂಬಾರ ಬಾಯಿ ಅಡಿಯಾಗಿ ತಿಪ್ಪಯ್ಯ
ನಂದಾದೀವಿಗೆ ಮರಿಸ್ಯೇವು

ಎಸರಾನೆ ಇಡುವಾಗ ದೇಸವಂತ ಕಂದಮ್ಮ
ಸುತ್ತಿಟ್ಟು ಬಾರೋ ತಾಳೀಯ ಮುಂದೆ
ಬಿಚ್ಚಮ್ಮ ಮಗನ ಕಿರುಜಡೆಯ

ದೇವಾನು ನೆನೆದರೆ ದಾವುತಿ ನಮಗಿಲ್ಲ
ಹಾವೆ ಕಚ್ಚಿದರೂನು ಇಸವಿಲ್ಲ ತಿಪ್ಪೇಸ್ವಾಮಿ
ಸ್ಯಾವಿಯ ಮಾಡಿದರೆ ದಣಿವಿಲ್ಲ

ಸ್ವಾಮವಾರ ದೈಯ್ಯ ನೇಮ ನಿತ್ಯಾದಾಯ್ಯ
ಮಹಾರುದ್ರ ನಿಮ್ಮ ಮಗಳಾಗಿ ಬಂದೇನಾ
ಹಾಲು ತಂದೇನು ಸಲಿಸಯ್ಯ

ಅಪ್ಪಾ ತಿಪ್ಪಯ್ಯಗ ಒಪ್ಪಾದ ಮಗಳು ನಾನು
ತುಪ್ಪಾದ ಮೀಸಲು ಕಳುವೇನು ಮಠದಾಗೆ
ಮತ್ತೆ ಸೂರಿಟ್ಟು ಬರುವೇನು

ಜನಪದ ಗೀತೆಗಳಲ್ಲಿ ಗರತಿ ದಿನದ ಬದುಕಿನ ಜಂಜಾಟದ ನಡುವೆ ಸ್ವಾಮಿ ಸೇವೆಗೆ ಹೋಗಲಾಗುವುದಿಲ್ಲ. ಆಕೆ ಯಾಕೆ ಕೋಪ ಸ್ವಾಮಿ, ನಾನು ದೇವಾಲಯಕ್ಕೆ ಬರದಿದ್ದು ತಪ್ಪಾಯಿತು. ಕ್ಷಮಿಸು ನಮಗೆ ಬಂದಿರುವಂತಹ ಬಡತನದಿಂದ ನಮ್ಮ ಕುಟುಂಬವನ್ನು ಪಾರುಮಾಡು ಜನರ ಕಿಡು ನುಡಿಗಳಿಂದ ನಮ್ಮನ್ನು ರಕ್ಷಿಸು ನಮ್ಮ ಬಡತನ ದೂರಾದರೆ ನಿನಗೆ ಬೆಳ್ಳಿ ಶಿಖರ ಮಾಡಿಸಿಕೊಡುತ್ತೇನೆ. ನನ್ನ ಮಗಳನ್ನು ರಕ್ಷಿಸು ಎಂದು ತಂದೆ ಮಗಳ ಪ್ರೀತಿಯ ವಾತ್ಸಲ್ಯ ಎಷ್ಟು ಆತ್ಮೀಯವಾಗಿರುತ್ತದೆ ಎಂಬುದನ್ನು ಗೀತೆಯಲ್ಲಿ ಹಾಡಿದ್ದಾರೆ. ಸ್ವಾಮಿಯನ್ನು ನೆನೆಯುತ್ತಾ ಜನಪದರಲ್ಲಿರುವ ದೈವತ್ವ ಬಗೆಗಿನ ನಂಬಿಕೆ ಎಷ್ಟು ಗಾಢವಾಗಿ ಅವರ ಬದುಕಿನಲ್ಲಿ ಅಳವಡಿಸಿಕೊಂಡಿದ್ದಾರೆ ಎಂಬುದು. ಸ್ವಾಮಿಯನ್ನು ನೆನೆದರೆ ಕಷ್ಟ ಪರಿಹಾರವಾಗುತ್ತದೆ. ಶ್ರೀಮಂತಿಕೆ ದೊರೆಯುತ್ತದೆ ಆರೋಗ್ಯ ಭಾಗ್ಯ ಸಂತಾನಗಳು ಲಭಿಸುತ್ತವೆ ಎಂಬ ನಂಬಿಕೆಯಿಂದ ಸೋಮವಾರದ ಪೂಜೆ ಪುನಸ್ಕಾರಗಳನ್ನು ಚಾಚುತಪ್ಪದೆ ಪಾಲಿಸುವಂತಹ ಕ್ರಮವನ್ನು ಜನಪದರ ಗರತಿಯ ಬದುಕಿನಲ್ಲಿ ಕಾಣಬಹುದು.

"ಉದ್ದನೆ ಮುಖದೋರು ರುದ್ರಾಕ್ಷಿ ಕೊರೆಲೋರು
ಇದ್ದಾರೆ ನಮ್ಮೂರ ಮಠದಾಗೆ ತಿಪ್ಪೇಸ್ವಾಮಿ
ಗುದ್ದುಗೆ ಕಾಯಿ ಕೆಳುವೇರು ||ಪದ||

ತಿಪ್ಪಯ್ಯಗ ಮುಪ್ಪಂಬುದೆ ಇಲ್ಲ
ಒಪ್ಪವಾದ ಗಡ್ಡ ಉರಿಮೀಸೆ ನನ್ನಯ್ಯ
ಕೊಪ್ಪಳಿಗೆ ಹೊದ್ದು ಹೊರ ನಡೆದ"[೮] ||೧||

ಮಳೆಬಂದ ಮರುದಿನ ಸಿರಿಕಾಣೆ ನಾಯಕನಹಟ್ಟಿ
ಮದುಕೆರಡು ಕೋತಿ ಹರಿದಾವೆ ತಿಪ್ಪೇಸ್ವಾಮಿ
ಮದುಭೂಪ ಹೊರಟ ಕೆರೆಯಾಗ

"ಹಟ್ಟಿಯ ತಿಪ್ಪಯ್ಯ ಜಗಳೂರು ಪಾಪಯ್ಯ
ಚಿಕ್ಕೇರಿ ಕೋಡಿ ಬಸರವಯ್ಯ ಜೊತೆಗೂಡಿ
ಲಿಕ್ತವಾಡೇರ ಕೆರೆಯಾಗ"[೯] ||೨||

ತುಂಬಿದ ಕೆರೆಯಾಗೆ ತೂಗುಮಂಚದ ಮೇಲೆ
ವಾಲ್ಯಾಡಿ ವಿಭೂತಿ ಧರಿಸ್ಯಾನ
ವಾಲ್ಯಾಡಿ ವಿಭೂತಿ ಧರಿಸಿದ
ತಿಪ್ಪೇರುದ್ರಯ್ಯಗೆ ಮೇಲಾಗಿ ಕೈಯ್ಯ ಮುಗಿದ್ಯಾರೇ

"ಕೆರೆಯ ಕಟ್ಟೆಯ ಮೇಲೆ ಕೆಂದೂಳು ಎದ್ದಿದಾವೆ
ನಂದಿ ಕೋಲಾಡಿ ನವಿಲಾಡಿ ತಿಪ್ಪೇಸ್ವಾಮಿ
ಚಂಡಾಡಿ ಮಠಕೆ ಹೊರಡತಾನೆ"[೧೦] ||೩||

ಮಳೆ ಬಂದಾಗ ಕೆರೆಗಳು ತುಂಬಿಹರಿಯುತ್ತವೆ. ಇಡೀ ವಾತಾವರಣ ಹಸಿರಿನಿಂದ ಕಣ್ಣು ಕುಕ್ಕುತ್ತದೆ. ಕಣ್ಣಿಗೆ ಮುದವನ್ನುಂಟುಮಾಡುತ್ತದೆ. ಚೆನ್ನಾಗಿ ಮಳೆ ಬಂದರೆ ಕೆರೆ ತುಂಬಿ ಹಿರೇಕೆರೆ ಕೋಡಿ ಬೀಳುತ್ತದೆ. ಕೋಡಿ ಬಿದ್ದಾಗ ಜನರೆಲ್ಲ ಸೇರಿ ತೆಪ್ಪಬಿಡುತ್ತಾರೆ. ಅಲ್ಲಿ ನೆರೆದಿರುವ ಜನರನ್ನು ನೋಡುವುದೇ ಸಂಭ್ರಮ. ಜಾತ್ರೆಗೆ ಎಷ್ಟು ಜನ ಸೇರುತ್ತಾರೋ ಅಷ್ಟೇ ಜನ ತೆಪ್ಪೋತ್ಸವಕ್ಕೆ ಬರುತ್ತಾರೆ. ಹಬ್ಬದ ವಾತಾವರಣ ತುಂಬಿ ತುಲುಕುತ್ತದೆ. ಹಟ್ಟಿಯ ತಿಪ್ಪಯ್ಯ, ಜಗಳೂರು ಪಾಪಯ್ಯ, ಕೋಡಿ ಬಸವ ಮೂರು ಜನ ಸೇರಿ ಕೋಡಿ ಬಿದ್ದಾಗ ತಿಪ್ಪಯ್ಯ ಮದುಮಗನ ಹಾಗೆ ಸಿಂಗರಿಸಿಕೊಂಡು ತಪ್ಪೋತ್ಸವದಲ್ಲಿ ಭಾಗಿಯಾಗುವುದನ್ನು ಗೀತೆಯಲ್ಲಿ ಹಾಡಿದ್ದಾರೆ.

**ಗೋಣಿ ಬಸವೇಶ್ವರನ ಗೀತೆಗಳು**

ಅಕ್ಕ ತಂಗೇರು ಕೂಡಿಕೊಂಡು
ಅಣ್ಣ ತಮ್ಮರು ಕರೆದುಕೊಂಡು
ತಾಯಿ ತಂದೆ ಬಂಧು ಬಳಗ
ಕೊಂಟೇವು ನಾವು ಜಾತ್ರೆಗೆ
ಜಾತ್ರೆಗೆ ಕೂಲಹಳ್ಳಿ ಜಾತರಿಗೆ ಕೂಲ್ಹಳ್ಳಿ
ಗೋಣಿ ಬಸವನ ತೇರಿಗೆ

ಬಸವಾನೆಂದರೆ ದೆಶಗೆಟ್ಟೊಗ್ವರು ಪಾಪ
ಜಾತ್ರೆಗ್ಹೋದರೆ ಬಿಟ್ಟೊಡ್ವದು ಭವದ ತಾಪ
ಗೋಣಿ ಬಸವಗೆ ಕರ್ಮಹೆದರೊಡ್ವದು
ಕೇಳೋ ಭೂಪ

ಹಾರ್‍ಯಾಡಿ ತೂರ್‍ತಾರ ಸೂರ್‍ಬೆಲ್ಲ ಮೆಣಸ
ಕೂಡ್ಯಾಡಿ ಹೊಡಿತಾರ ತೇರ್‍ಗಾಲಿಗೆ ಕಾಯ
ಸೂರ್‍ಬೆಲ್ಲ ಮೆಣಸು ತೂರಿ
ತೇರ್‍ಗಾಲಿಗೆ ಕಾಯಿ ಹೊಡೆದು

ಮಕ್ಕಳ ಮರಿ ಕಾಯೋ
ಕಷ್ಟನೆಲ್ಲ ಗುತ್ತಿಗೆ ಹಿಡಿದ ಗೋಣಿ ಬಸವಾ
ಹಣ್ಣು ಕಾಯಿ ಧೂಪ, ದೀಪ ಮಾಡುವೆವೋ
ಕಷ್ಟ, ಪರಿಹರಿಸೆಂದುಕೇಳುವೆವೋ

ಹಾಕುತೀವಿ ದೀಡ ನಮಸ್ಕಾರ
ಪಡೆಯತೀವಿ ಹಿರಿ ಸಂಸ್ಕಾರ
ಉರುಳು ಸೇವೆ ನಾವು ಮಾಡುವೆವು

ನೀಡು ಬಸವ ಮನಕೆ ಆನಂದ

ಗೋಣಿಬಸವನ ಹೆಸರೇ ಮಹಾದಾನಂದ (ಪಿ.ಬಿ.ಶಾಲಿಮನೆ)

ಗೋಣಿ ಬಸವೇಶ್ವರನ ಜಾತ್ರೆಗೆ ಹಳ್ಳಿಯ ಕುಟುಂಬದ ಎಲ್ಲ ಸದಸ್ಯರು ಸೇರಿ ಅಣ್ಣ, ಅಕ್ಕ, ತಂಗಿ, ತಮ್ಮ, ಅಕ್ಕ, ಅಮ್ಮ, ಬಂಧು-ಬಳಗಗಳೆಲ್ಲ ಸೇರಿ ಗೋಣಿ ಬಸವೇಶನ ಜಾತ್ರೆಗೆ ಬರುವಂತಹ ಉತ್ಸಾಹ, ಸಡಗರ, ಸಂಭ್ರಮವನ್ನು ಕುರಿತು ಹೇಳುವಂತಹದ್ದು. ಬಸವನ ನೆನೆದರೆ ಪಾಪವೆಂಬುದಿರುವುದಿಲ್ಲ. ಸ್ವಾಮಿದರ್ಶನ ಪಡೆದು ಕುಟುಂಬದ ಸದಸ್ಯರು ಹರಕೆ, ದೀಡ ನಮಸ್ಕಾರ, ಪೂಜೆ ಪುನಸ್ಕಾರ ಮಾಡಿ ಸುರಬೆಲ್ಲ ಮೆಣಸನ್ನು ತೂರಿ, ಬಸವನಿಗೆ ಜನರು ಸ್ವಾಮಿ ನಮ್ಮ ಕುಟುಂಬವನ್ನು ಕಾಪಾಡು ನಮ್ಮ ಕಷ್ಟಗಳನ್ನು ದೂರಮಾಡಿ ಒಳ್ಳೆಯ ಬದುಕನ್ನು ರೂಪಿಸಿಕೊಡೆಂದು ದೇವರಲ್ಲಿ ಪ್ರಾರ್ಥಿಸುವುದನ್ನು ಹಾಡಿ ಗೀತೆಯಲ್ಲಿ ಕಟ್ಟಿಕೊಟ್ಟಿದ್ದಾರೆ.

**ಕೊಟ್ಟೂರ ಗುರುಬಸವನ ಕುರಿತ ಬಿಡಿ ಪದಗಳು**

"ಮೂರೇ ಕಲ್ಲಾಗೇ ಮೂಡ್ಯಾನ ಬಸವಣ್ಣ

ನೋಡಾಲು ಜಂಗಾಮರೇ ನೆರುದಾರೆ

ನೋಡಾಲು ಜಂಗಮರೆ ನೆರುಕೇ ಕಲ್ಪಿಸಿದಾರೆ

ಸಾದೀನ ಚಡುಗಾ ಮರುಗಾಳು

ಗಚ್ಚಿನ ಮಠದಾಗೇ ಹುಟ್ಯಾನೇ ಬಸುವಣ್ಣ

ಸುತ್ತಲು ಜಂಗಮರೇ ನೆರುತಾರೆ

ಸುತ್ತಲು ಜಂಗಮರೇ ನೆರುತಾರೆ

ಸುತ್ತಲು ಜಂಗಮರೇ ನೆರುತು ಕಟ್ಟಿಸಿದಾರೆ

ಮುತ್ತೀನ ಚಡುದಾ ಮಠಗಳೂ

ಮುತ್ತೀನ ಚಡುದಾ ಮಠಗಳು

ಆಗುಮನೆ ಜಗುಮ ಜಂಬೇ ಜಾತರು ಮನೆ

ಜಗಮುನೆ ಮ್ಯಾಲೇ ಬಸುವಣ್ಣ

ಜಗಮುನೇ ಸಾಲೆ ಬಸುವಣ್ಣಾರುಳ್ಳೆನೋರೇ

ಮಗಳೇ ಹೇಳ್ಯಾಳ ಶಿವಗತಿಯು

ಮಗನೀಗರುಳ್ಳೆನೊರೆ ಮಗಳೆದ್ದೇ ಬರುವಾಗ

ತೊಲೀನ ಚೀಲ ಬಲುಗೈ

ತೋಗಲಾನ ನೊತ್ತಿಗೀ ಬಲುಗೈ ಅರುಳ್ಳೆನೋರೆ

ಮಗಳು ಹೇಳ್ಯಾಳೆ ಶಿವಗತಿಯು

ಮುಂಚೇಗರುಳ್ಳೆನರೊ ಕೆಂಚೆದ್ದೇ ಬರುವಾಗ

ಕಂಚಿನೊತ್ತೀಗೆ ಬಲುಗೈ

ಕಂಚೀನೊತ್ತೀಗಿ ಬಲುಗೈ ಅರಳೈನೋರೆ

ಕೆಂಚಿ ಹೇಳ್ಯಾಳೇ ಶಿವಗತಿಯು

ಕಾವೇಧರಿಸಿ ಕೈಲಾಸಾದಾ ಸ್ವಾಮಿ ಬಂದು

ಅವರಿ ಇವರೆ ಅಂದ ಏರಿ ನುಡಿಯಲು ಬ್ಯಾಡ

ಅವರಿ ಕಟ್ಟಿಗೀಯ ಬಡುವೊರೆ ನನ್ನಯ್ಯನಾ

ಶಿವರಿ ಶೃಂಗಾರ ನೋಡಿ"[19]

ಗುರುಬಸವನನ್ನು ಕುರಿತು ಹರಿಜನ ಕೇರಿಯ ಹೆಣ್ಣು ಮಕ್ಕಳು ಗುರುಬಸವರು ಕೊಟ್ಟೂರಿಗೆ ಬಂದು ಮೂರು ಕಲ್ಲು ಮಠದಾಗೆ ನೆಲೆಸಿರುತ್ತಾರೆ. ಜನರೆಲ್ಲ ಅವರನ್ನು ನೋಡಲು ಜಂಗಮರೆಲ್ಲ ಸೇರಿ ಸ್ವಾಮಿಗೆ ಮಠವನ್ನು ಕಟ್ಟಿದ್ದಾರೆ ಅದನ್ನು ಜನಪದರ ಹಾಡುಗಳಲ್ಲಿ ಮುತ್ತು, ರತ್ನ, ಪದಗಳು ಹೇರಳವಾಗಿ ಕಂಡುಬರುತ್ತವೆ. ಹಾಗೆಯೇ ಇವರು ಗೀತೆಯಲ್ಲಿ ಮುತ್ತಿನ ಅಚ್ಚಡದ ಮಠವನ್ನು ವೈಭವೀಕರಿಸಿ ಗೀತೆಯಲ್ಲಿ ಕಟ್ಟಿ ತಮ್ಮದೇ ಆದ ರೀತಿಯಲ್ಲಿ ಭಕ್ತಿಯಿಂದ ಸ್ವಾಮಿಯನ್ನು ಕುರಿತು ಹಾಡುತ್ತಾರೆ. ಅರಳಯ್ಯನ ವಂಶಜರನ್ನು ಅಥವಾ ಕೆಳವರ್ಗದ ಹೆಣ್ಣುಮಕ್ಕಳಾದ ಕೆಂಚಿ ಶಿವರಥೆಯನ್ನು ಹಾಡಿ ಹೊಗಳುವುದನ್ನು ಜನಪದರು ಗೀತೆಯ ಮೂಲಕ ಕಟ್ಟಿಕೊಟ್ಟಿದ್ದಾರೆ.

"ಅವರೀನ ಕಟ್ಟೀಗಿ ಬಡುವೊನರುಳ್ಳೆನೋರೆ

ಅವಳಾದಾರತಿಯ ಕರಿಯಾರೆ ನನ್ನಯ್ಯನಾ

ಶಿವರಿ ಶೃಂಗಾರಾ ನೋಡಿ

ಪಕ್ಕ ಬ್ಯಾಡಾರಂದ ಹೆಚ್ಚು ನುಡಿಯ ಬ್ಯಾಡ

ಕಚ್ಚೆ ಕಟ್ಟೀಗಿಯ ಬಿಡುವೋರೆ

ಕಾವೇಧರಿಸಿ ಕೈಲಾಸಾದ ಸ್ವಾಮಿ ಬಂಧು

ಪಕ್ಕ ಬ್ಯಾಡರಂದ ಹೆಚ್ಚು ನುಡಿಯ ಬ್ಯಾಡ

ಕಚ್ಚೆ ಕಟ್ಟೀಗೇಯ ಬಿಡುವೋರೆ

ಕಾವೇಧರಿಸಿ ಕೈಲಾಸಾದ ಸ್ವಾಮಿ ಬಂದ

ಪಕ್ಕ ಬ್ಯಾಡರಂದ ಹೆಚ್ಚು ನುಡಿಯಲಿ ಬ್ಯಾಡ

ಕಚ್ಚೆ ಕಟ್ಟಿಗೇಯ ಬಡುವೋರೆ ನನ್ನಯ್ಯನಾ

ತೆವರಿ ಶೃಂಗಾರವ ನೋಡೆ

ಕಚ್ಚೇನೆ ಕಟ್ಟೀಗಿ ಬಡುವೋರೊಳ್ಳೆನೋರೆ

ಮುತ್ತೀಗಾರುತಿಯ ತರಿಯೋಳೆ ನನ್ನಯ್ಯನ

ತಿವರಿ ಶೃಂಗಾರವ ನೋಡೆ"[ಉ]

ಕಾವಿಧರಿಸಿರುವಂತಹ ಸ್ವಾಮಿಯನ್ನು ನೋಡಲು ಬಂದಂತಹ ಜನರು ಮುತ್ತಿನ ಅರತಿ ಹವಳದ ಅರತಿಯನ್ನು ಮಾಡಿ ಭಕ್ತಿಯನ್ನು ಅರ್ಪಿಸುವ ಪರಿಯನ್ನು ಜನರು ಹಾಡಿ ಸಂಭ್ರಮಿಸುತ್ತಾರೆ.

"ಕಚ್ಚೇನೆ ಕಟ್ಟೀಗಿ ಬಡುವೋರೊಳ್ಳೆನೋರೆ

ಮುತ್ತೀನಾರುತಿಯ ತರಿಯೋಳೆ ನಲುದಾಡಿದಾರೆ

ಕ್ಯಾದಿಗಿ ಗರಿಯ ಮ್ಯಾಲೆ

ಮುತ್ತೀನಾಮರಕೆ ತಂಗಾಳೀ ಬೀಸಿದಂಗೆ

ಜಾಂಡೇವ್‌ಕ ಮುತ್ತ ಬಿಗುದಂಗೇ

ಸೆಂಪೀಗೆ ರಾಯರಂತೆ ಬಣ್ಣೋ

ಹೊಂಗೇ ಕಾಯಿ ಮತ್ತು ಬಿಗುದಂಗೇ ಬಸವಣ್ಣ

ಜಂಗಾಮರ ನಡುವೆ ಬರುತಾರೆ

ಸೇಂಪೀಗೆ ರಾಯರಂತೆ ಬಣೋ

ಮಾವೀನ ಮರಕೆ ಮ್ಯಾಗುಳಿ ಬೀಸಿದಂಗೆ

ಜ್ಯಾವಳಕೆ ಮುತ್ತ ಬಿಗುದಂಗೆ

ಸೆಂಪೀಗೆ ರಾಯರಂತೆ ಬಣ್ಣೋ

ಜ್ಯಾವಳಕೇ ಮುತ್ತ ಬಿಗುದಂಗ್ಹೇ ಬಸುವಣ್ಣ

ದೇವರ ನಡುವೆ ಬರುತಾರೆ

ಸಂಪೀಗೆ ರಾಯರಂತೆ ಬಣೋ

ಆರಿದ್ವಾ ತಿಂಬ್ಯೋರೆ ಚೂರೀಯ ಮಸುವೋರೆ

ಊರಿಂದ ಹೊರಗೆ ಇರುವೋರೇ

ಸಂಪೀಗೆ ರಾಯರಂತೆ ಬಣೋ

ಊರಿಂದಾ ಹೊರಗೆ ಇರುವೋ ಅರುಳ್ಳೆನೋರೆ

ಬಾವುಕ ಬಸುವಣ್ಣ ಬಲುದಾರೆ

ಸಂಪೀಗೆ ರಾಯರಂತೆ ಬಣೋ

ಸಂಪೀಗೆ ರಾಯರಂತೆ ಬಣೋ

ಸತ್ತೀದ್ದ ತಿಂಬೋರೆ ಕತ್ತೀಯ ಮಸುವೋರೆ

ಹಟ್ಟಿಂದ ಹೊರಗೆ ಇರುವೋರೆ

ಸಂಪೀಗೆ ರಾಯರಂತೆ ಬಣೋ

ಸಂಪೀಗೆ ರಾಯರಂತೆ ಬಣೋ

ಹಟ್ಟೀಂದಾವ ಹೊರಗೆ ಇರುವೋ ಅರುಳೈನೋರೆ

ಬೆತ್ತಕ ಬಸವಣ್ಣ ಒಲುದಾರೆ"[೨]

ದಲಿತ ಸಮುದಾಯ ಬದುಕನ್ನು ಕೇಂದ್ರೀಕರಿಸಿ ಹೇಳಿದ್ದಾರೆ. ದಲಿತರು ಮದ್ದು ಮಾಂಸ ತಿನ್ನುವುದರಿಂದ ಹಟ್ಟಿಯಿಂದ ಹೊರಗೆ ಇರುವುದನ್ನು ಅವರು ಗೀತೆಯಲ್ಲಿ ಹಾಡಿದ್ದಾರೆ. ಹಟ್ಟಿಯಿಂದ ಹೊರಗೆ ಇದ್ದರೇನು ಅವರ ಭಕ್ತಿಗೆ ಬಸವಣ್ಣ ಒಲಿದಾನೆ ಎಂಬುದನ್ನು ಹಾಡಿಹೊಗಳಿದ್ದಾರೆ.

ಸಂಪೀಗೆ ರಾಯರಂತೆ ಬಣೋ

ಸಂಪೀಗೆ ರಾಯರಂತೆ ಬಣೋ

....ಮ್ಯಾಲೆ ನೀಲದ ಗದ್ದುಗೆ ಮಾಡಿ

ದೇವರು ಬಸುವಣ್ಣ ಕೋಳಲೂದಿ ಸೋಗಿನವಲೆ

ಸುವ್ವಯ್ಯೋ....

ದೇವಾರು ಬಸುವಣ್ಣ ಕೊಳಲೂಡಿ ಕರುದಾನೆ

ದೂರಾಲು ನಾಡಾ ಪರಸೀಮೆ ಸೋಗಿನವಲೆ ಸುವ್ವಯ್ಯೋ

ಎತ್ತಿನ ಕೋಡಿನ ಮ್ಯಾಲೆ ಮುತ್ತಿನ ಗದ್ದಗಿ ಮಾಡಿ

ಅಪ್ಪಾ ಬಸುವಣ್ಣಾ ಕೊಳಲೂಡಿ ಕರುದಾನೆ

ಸುತ್ತಾಲ ನೋಡೋ ಪರುಸೀಮೆ ಸೋಗನವಲೆ ಸುವ್ವಯ್ಯೋ

ಏರೀದ ಎಮ್ಮೇಯ ಪಾದ ಬಡುದೆಬ್ಬೀಸಿ

ಬೇಗನೆ ಮನಿಯಾಲ ಕರದೊಯ್ಯೋ ಸೋಗಿನವಲೆ ಸುವ್ವಯ್ಯೋ

ಬೇಗನೆ ಮನಿಯಾಲ ಕರದೊಯ್ಯ ನನ್ನ ಕೊಟ್ಟುರ

ನೆರವಣಿ ಸತ್ಯೆವ ನಿಗಾ ಮರುದೆ ಸೋಗಿನವಲೆ ಸುವ್ವಯ್ಯೋ

ಸತ್ತಿದ್ದ ಎಮ್ಮೇಯ ಪಕ್ಕೆ ಬಡುದೆಬ್ಬೀಸಿ

ಗಕ್ಕನ ಮಗಿಯಾಲ ಕರದೋಯ್ಯೇ ಸೋಗಿ ನವಲೆಸುವ್ವಯ್ಯೋ

ಗಕ್ಕನ ಮಗಿಯಾಲ ಕರದೊಯ್ಯ ನನ್ನ ಕೊಟ್ಟೂರ

ಹುಚ್ಚ ಸತ್ಯೇವಾ ನೀ ಮೆರುದೇ ಸೋಗಿ ನವಲೆ ಸುವ್ವಯ್ಯೋ

ನಾರೀಯ ಸೀರೆಯ ಕೌಪಿನವ ಧರಿಸಿದಾತ ಎಂಬುದನ್ನು ಆತನ ಮಹಿಮೆಯನ್ನು, ಗುರುಬಸವನು ಸತ್ತ ಎಮ್ಮೆಯನ್ನು ಬಡಿದು ಎಬ್ಬಿಸಿ ಸತ್ಯವನ್ನು ಜನತೆಗೆ ಮೆರೆದಾತ ಸತ್ತ ಎಮ್ಮೆ ಬದುಕಿಸಿದ ಪುರಾಣ ಕಥೆಯನ್ನು ಗೀತೆಯಲ್ಲಿ ಹಾಡಿದ್ದಾರೆ.

"ಒಂದೇನೇ ನೆಲಿಗೆ ಒಂದಾ ಕೀಲಾ ಜಡಾದೆ

ಒಂದಾ ನೆಲಿಗಾಳೊ ಸ್ಯಾರೆ ಸೋಗಿನವಲೆ ಸುವ್ವಯ್ಯೋ

ಒಂದಾ ನೆಲಿಗಾಳೊ ಸ್ಯಾರೆ ಸೋಗಿನವಲೆ ಸುವ್ವಯ್ಯೋ

ಎರಡನೇ ನೆಲಿಗೆ ಎರಡಾ ಕೀಲಾ ಜಡುದೆ

ಎರಡಾ ನೆಲಿಗಾಳೊ ನೆಲಿಸ್ಯಾರ ಸೋಗಿ ನವಲೆ ಸುವ್ವಯ್ಯೋ

ಎರಡಾ ನೆಲಿಗಾಳೊ ನಿಲಿಸ್ಯಾರ ಸೋಗಿ ನವಲೆ ಸುವ್ವಯ್ಯೋ

ಮೂರಾಸೇ ನೆಲಿಗಿ ಮೂರಾ ಕೀಲಾ ಜಡುದೆ

ಮೂರಾ ನೆಲಿಗಾಳೊ ನಿಲಿಸ್ಯಾಕ ಸೋಗಿ ನವಲೆ ಸುವ್ವಯ್ಯೋ

ನಾಕೇನೇ ನೆಲಿಗಿ ನಾಕಾ ಕೀಲಾ ಜಡುದೆ

ನಾಕಾ ನೆಲಿಗಾಳ ನಿಲಿಸ್ಯಾರ ಸೋಗಿ ನವಲೆ ಸುವ್ವಯ್ಯೋ

ನೆಲಿ ಬಂದೆ ನೆಲಿ ಎರಡೆ ನೆಲಿಮೂರೆ ನೆಲಿನಾಕೆ

ನೆಲಿ ಐದೇ ಕಂಚು ಕಳೂಸಾವೆ

ಕಾವೇಧರಿಸಿ ಕೈಲಾಸದ ಸ್ವಾಮಿ ಬಂದು

ನೆಲಿ ಐದೇ ಪಾಂಚಾಕಳ ಸಾದಾರತಿ ಹೊತ್ತು

ಅರುಳಯ್ಯನ ಮಗಳು ಬೆಳಿಗ್ಯಾಳೆ ನನ್ನಯ್ಯೋನ

ತಾರೆ ಶೃಂಗಾರ ನೋಡೆ

ಮುತ್ತೀನಾರತಿ ಹೊತ್ತೇ ಮತ್ಯಾರಿ ಬರುವೋರೆ

ಮತ್ತೆ ಕೊಟ್ಟುರ ಬಗುತಾರೆ ನನ್ನಯ್ಯನಾ

ತೇರೆ ಶೃಂಗಾರ ನೋಡೆ"[೧೯]

ದಲಿತರ ಮನೆಯಿಂದ ದೀಪದ ಆರತಿ ಬರುವುದನ್ನು ಪ್ರತಿವರ್ಷ ದಲಿತ ಮಹಿಳೆ ಬೆಳಗುವುದನ್ನು ಗೀತೆಯಲ್ಲಿ ಹಾಡಿ ಅದೊಂದು ಸಂಪ್ರದಾಯವಾಗಿ ಹಾಗೆಯೇ ಉಳಿದು ಬಂದಿದೆ ದುರುಗಮ್ಮ ಎಂಬ ಮಹಿಳೆ ಆರತಿ ಬೆಳಗುತ್ತಾಳೆ.

"ಮತತ್ತೇನೆ ಕೊಟ್ಟೂರ ಬಗುತಾರೆ ಕರಿಯವ್ವ

ಮುತ್ತೀನಾರುತಿಯಾ ಕಳಿವ್ಯಳೆ ನನ್ನಯ್ಯನ

ತೇರೆ ಶೃಂಗಾರ ನೋಡೆ

ಅವಳಾದ ರತಿಯೊತ್ತಿ ಅವಳ್ಯಾರೆ ಬರುವೋಳೆ

ಅವರೆ ಕೊಟ್ಟುರ ಬಗುತಾರೆ

ಕಾವೀಧರಿಸಿ ಕೈಲಾಸದ ಸ್ವಾಮಿ ಬಂದು

ಮತ್ತೇನೆ ಕೊಟ್ಟೂರು ಬಗುತಾರೆ ಉಡುಸವ್ವ

ಮುತ್ತೀನಾರುತಿಯಾ ಕಳಿವ್ಯಾಳೆ ನನ್ನಯ್ಯನಾ

ತೇರೆ ಶೃಂಗಾರ ನೋಡೆ

ಅಣ್ಣಾ ನಿನ ತೇರಿಗೆ ಅನ್ನುಂದ ದೀಪ ಹಚ್ಚಿ

ಬಣ್ಣದೊಸ್ತುರವಾ ಪಟನೇರಿ ದೇವೂರು

ಹರನೇ ಬಣ್ಣಾದೂಸ್ತುರವಾ ಪಟನೇರಿ

ಬಗ್ಣಾದ ವಸ್ತುರುವಾ ಪಟನೇರಿ ತೇರಿಗೆ

ಅಣ್ಣಾ ಬಂದೊರೆ ಹೊಸರಥವ ದೇವೂ

ಅತ್ತಾ ನಿನತೇರಿಗೆ ಇಪ್ಪತ್ತ ಮಿಣಿಯಚ್ಚಿ

ಪಟ್ಟೇದೋಸ್ತುರವಾ ಪಟನೇರಿ ದೇವೊ

ಪಟ್ಟೇದಾ ವಸ್ತುರುವಾ ಪಟನೇರಿ ತೇರಿಗೆ

ಅಪ್ಪಾ ಬಂದೇರ ಹೊಸರಥವ ದೇವೊ

ಅಣ್ಣಾ ಕೊಟ್ಟೇಶಾನ ಬಣ್ಣದ ಗುದ್ದುಗಿ ಮ್ಯಾಲೆ

ಹನ್ನೊಂದ ಮಂದಿ ದುರಿಗ್ಯಾರೋ ದೇವೊ ಹರನೇ

ಅಣ್ಣಾನ ರಥವ ಉಳಿಸ್ಯಾರೆ ದೇವೂಯಿ

ಹನ್ನೊಂದ ಮಂದಿದುರಿಗ್ಯಾರೋ ದೇವೊ

ಹನ್ನೊದಾ ಮಂದಿ ದುರಿಗ್ಯರೆ ಕೂಡಾ ಕಂಡೆ

ಅಣ್ಣಾನ ರಥವ ಉಳಿಸ್ಯಾರೆ ದೇವೂಯಿ ಹರನೆ

ಅಪ್ಪಾ ಕೊಟ್ಟೇಶಾನ ಮುತ್ತಿನ ಗದ್ದುಗಿ ಮ್ಯಾಲೆ

ಇಪ್ಪತ್ತು ಮಂದಿ ದುರಿಗ್ಯಾರೆ ದೇವೂಯಿ

ಇಪ್ಪಾತ್ತಾ ಮಂದಿ ದುರಿಗ್ಯಾರೆ ಕೂಡಿಕಂಡು

ಅಪ್ಪಾನ ರಥವ ಉಳಿಸ್ಯಾರೆ ದೇವೂಯಿ ಹರನೇ

ಅಪ್ಪಾನ ರಥವಾ ಎಳಿಸ್ಯಾರೆ ದೇವೂಯಿ”[39]

ಜಾತ್ರೆಯ ಸಡಗರ ಸಂಭ್ರವನ್ನು ಕುರಿತು ಹಾಡಿದ್ದಾರೆ. ಜಾತ್ರೆಯಲ್ಲಿ ರಥವನ್ನು ಶೃಂಗರಿಸುವುದು, ಪಟವನ್ನು ಕಟ್ಟುವುದು, ನೀಲಿ ಪಟವನ್ನು ಹಿಡಿಯುವುದು, ಸ್ವಾಮಿ ರಥದಲ್ಲಿ ಕುಳಿತಿರುವಾಗ ದುರುಗಿಯರು ಜೊತೆಯಲ್ಲಿರುವಂತಹದ್ದು, ಸ್ವಾಮಿ ಗದ್ದುಗೆ ಮ್ಯಾಲೆ ಕುಳಿತಾಗ ಹನ್ನೊಂದು ದೀಪವನ್ನು ಹಚ್ಚಿ ಪೂಜಿಸುವುದು ಕಂಡುಬರುತ್ತದೆ. ಗಾಲಿಗೆ ಮಿಣಿಯನ್ನು ಕಟ್ಟಿ ಹಾಗೂ ದುರುಗೀಯರು ದೀಪವನ್ನು ಬೆಳಗುವುದರ ಮೂಲಕ ಊರಿನ ಎಲ್ಲ ಜನರು ಸೇರಿ ಕೊಟ್ಟೂರಿನ ರಥೋತ್ಸವದಲ್ಲಿ ಭಾಗಿಯಾಗಿರುವುದನ್ನು ಕುರಿತು ಗೀತೆಯಲ್ಲಿ ಹಾಡಿ ಹೊಗಳಿದ್ದಾರೆ.

೨. ಶ್ರೀ ತಿಪ್ಪೇಶನ ಚರಿತ್ರಾ ಲಾವಣಿ ಶತಕವು

"ಶ್ರೀಘನ ಮಹಿಮಾಗಾರ ಸುಶಾಂತಿಯ ಸಾಗರ ಚಂದ್ರನು ತಿಪ್ಪೇಶ |
ಶ್ರೀಗುರುದೇವನ ತಿಪ್ಪೇಶ ವೈರಾಗ್ಯದ ಮೂರುತಿ ತಿಪ್ಪೇಶ
ರಾಗದಲೀತನ ಚರಿತೆಯು ಕೇಳಲ್ಕಾಗುವುದೈ ಸಂಸ್ಕೃತಿ ನಾಶ ||೧||

ಮುಲ್ಲೋಕಾಧಿಪ ಶಿವಾಜ್ಞೆಯಿಂದಲಿ ಕಲ್ಯಾಣೆಂಬುವ ಪುರದಲ್ಲಿ
ಉಲ್ಲಾಸದಿ ಪುಟ್ಟಿದನಲ್ಲಿ |ಜನ| ರೆಲ್ಲಾ ಸಂತಸದಿರಲಲ್ಲಿ
ನಿಲ್ಲದೆ ತಿಪ್ಪೇರುದ್ರನು ಹೊರಟನು ನೋಡುತ ಕ್ಷೇತ್ರಗಳಲಲ್ಲಿ ||೨||

ಮರುಳನ ಪರಿಯಲಿ ಚರಿಸುತ ಬಂದನು ಹರುಷದಿಂದ ರಾಯ್ದುರ್ಗಕ್ಕೆ |
ಪುರದಲಿ ಚರಿಸುತ್ತಿರಲಿಕ್ಕೆ |ಜನ| ರೆರಗಿದರಾತನ ಪಾದಕ್ಕೆ
ಶರಣನಾದ ಕೆಂಪಯ್ಯಗೆ ತತ್ವ ನರುಪುತ ನಡೆದನು ಮುಂದಕ್ಕೆ ||೩||

ಫಣಿಯಪ್ಪೆಂಬುವ ತ್ರಿಣಯನ ಭಕ್ತನ| ಘನ ಗುರು ತಿಪ್ಪೇಶನು ನೋಡಿ
ಅನುದಿನವಿವನನ್ನೊಡಕೂಡಿ |ಜನ| ಕನುಕೂಲಾಗುವ ಕೃತಿ ಮಾಡಿ
ತನುವನ್ನಳಿಯುತ ಸುಖಿಸುವುದೆನ್ನುತ ಮನದೊಳು ಯೋಚನೆಯನು ಮಾಡಿ ||೪||

ಬುತ್ತಿಯನಕ್ಷಯ ಮಾಡುತ ಮಹಿಮೆಯ ಬಿತ್ತರಿಸಿದ ಫಣಿಯಪ್ಪನಿಗೆ
ಉತ್ತಮ ಶರಣನೆ ಅಹುದಿವಗೆ |ನಾ| ಭಕ್ತನಪ್ಪೆ ನೆಂದೊಳಗೊಳಗೆ
ಗೊತ್ತು ಮಾಡಿಕೊಂಡಾ ಫಣಿಯಪ್ಪನು ಮಣಿದನು ತಿಪ್ಪೇರುದ್ರನಿಗೆ ||೫||

ಮೈಯಂಬಾಗಿಸಿ ಕೈಯಂ ಜೋಡಿಸಿ ಬೇಡಿಕೊಂಡನವ ನಿಂತೆಂದು
ಜೀಯನೆ ಭೋ ಕರುಣಾ ಸಿಂಧು |ನ| ನಯ್ಯನು ನಿನಹುದಹುದೆಂದು
ಪ್ರಿಯದಿಂದ ನುತಿಗೈಯುತ ಬಾ ರುದ್ರಯ್ಯನೆ ಸ್ವಗ್ರಾಮಕ್ಕಿಂದು |೬|

ಭಕ್ತನು ಕರೆದುದ ಕೊಪ್ಪುತ ನಾಯ್ಕನಹಟ್ಟಿಗೆ ತಿಪ್ಪೇಶನು ನಡೆದ
ಅತ್ತಮಾರ್ಗದಲಿ ಮರೆಯಾದ ಆ ಭಕ್ತನದಕ್ಕಂ ಬೆರಗಾದ
ಇತ್ತು ವಚನವಂ ತಪ್ಪಿದ ಸ್ವಾಮಿಯು ಎನ್ನುತ ಖೇದದೊಳವನಡೆದ |೭|

ಮೊದಲೇ ನಾಯ್ಕನಹಟ್ಟಿಗೆ ಚರಿತ್ರೆಯಧಿಪನು ಮೈದೋರದೆ ಬಂದು |
ಇದಿರು ನೋಡುವಂದಿದಿ ನಿಂದು ಸಂ ಮುದದಿಂದಿರೆ ಫಣಿಯನು ಬಂದು|
ಸದಯನ ನೋಡುತ್ತಚ್ಚರಿ ಪಡುತಂ ತನ್ನಯ ಸದನಕೆ ಕರೆತಂದು |೮|

ಗುದ್ದಿಗೆ ಮಾಡುತ ಸ್ವಾಮಿಯ ಕೂಡ್ರಿಸಿ ಬಿದ್ದದಿವ್ಯ ಪದಪದ್ಮಕ್ಕೆ
ಎದ್ದು ಪೇಳಿದಂ ಗೃಹಜನಕೆ| ಈ ಸಿದ್ಧಿಪುರುಷನೀ ಲೋಕಕ್ಕೆ
ಸದ್ಗುರು ಮೂರ್ತಿಯೆ ಆಗಿಹನೀತನು ಸಿಕ್ಕನು ನಮ್ಮಯ ಪುಣ್ಯಕ್ಕೆ"[೨೬] ||೯||

ಮುಲ್ಲೋಕಾಧಿಪನಾದ ಶಿವನ ಆಜ್ಞೆಯ ಮೇರೆಗೆ ಕಲ್ಯಾಣದಿಂದ ತಿಪ್ಪೇರುದ್ರ ಸ್ವಾಮಿ ಹೊರಟು ರಾಯದುರ್ಗಕ್ಕೆ ಬರುತ್ತಾರೆ. ಹೀಗೆ ಬಂದಂತಹ ಸಂದರ್ಭದಲ್ಲಿ ಕೆಂಪಯ್ಯನವರು ಅದ್ದೂರಿಯಾದ ವೈಭವದ ಮೆರವಣಿಗೆಯಲ್ಲಿ ಭಾಗಿಯಾಗಿರುವುದನ್ನು ಕಂಡು ತಿಪ್ಪೇರುದ್ರರು ದೂರದಿಂದಲೇ ನಿಂತು ನೋಡಿ ನಗುತ್ತಾರೆ. ಹುಚ್ಚನ ರೀತಿಯಲ್ಲಿ ತಿಪ್ಪೆಯ ಮೇಲೆ ಕುಣಿದಾಡುತ್ತಿರುವಾಗ ಮೆರವಣಿಗೆಯಲ್ಲಿರುವಂತಹ ಕೆಂಪಯ್ಯ ಅವರನ್ನು ಗಮನಿಸಿ ಯಾಕೆ ಹೀಗೆ ಮಾಡುತ್ತೀರುವೆ ಬಾ ಎಂದು ಕರೆದಾಗ ಪಲ್ಲಕ್ಕಿ ಆಸೆ, ವೈಭವದ ಬದುಕು ನಮ್ಮದಲ್ಲ ನಾವು ಬಂದೀರುವಂತಹ ಉದ್ದೇಶವನ್ನು ಮರೆತಿರುವೆ ಎಂದು ತಿಳಿ ಹೇಳಿ ಎಂದು ತಿಳಿಹೇಳಿ ಜ್ಞಾನದ ಕಣ್ಣನ್ನು ತೆರೆಸುತ್ತಾರೆ. ಅಲ್ಲಿಂದ ಫಣಿಯಪ್ಪನೆಂಬ ಭಕ್ತನಿಗೆ ಬುತ್ತಿಯನ್ನು ಅಕ್ಷಯ ಮಾಡಿದ್ದು ಕಂಡು ಆಶ್ಚರ್ಯವಾಗುತ್ತದೆ. ಇದೆಲ್ಲವನ್ನು ಗಮನಿಸಿದಂತಹ ಫಣಿಯಪ್ಪ ಸ್ವಾಮಿಯನ್ನು ನಾಯಕನಹಟ್ಟಿಗೆ ಕರೆತರುತ್ತಾನೆ. ಫಣಿಯಪ್ಪ ತಿಪ್ಪೇರುದ್ರರ ಸೇವೆಯನ್ನು ಶ್ರದ್ಧೆ, ಭಕ್ತಿಯಿಂದ ಮಾಡುತ್ತಿದ್ದರು.

"ಈತನ ಸೇವೆಯ ಬಲದಿಂ ನಮ್ಮಯ ಪಾತಕ ಪರಿಹರವಾಗುವುದು
ಭೀತಿಯು ನಿಲ್ಲದೆ ಪೋಗುವುದ ಸ| ತ್ಯಾತಿಶಯದ ಸುಖವಾಗುವುದು
ಈತನ ಮನವಂ ನೋಯಿಸದಂದದಿ ಪ್ರೀತಿಲಿ ಸೇವೆಯ ಗೈಯುವುದು ||೧೦||

ಈ ವಿಧ ಪೇಳುತ ಫಣಿಯಪ್ಪನು ಸದ್ ಭಾವದಿ ಸೇವೆಯಗೈಯುತಿರಿ
ದೇವನು ತನ್ನಯ ಮನೆಯೊಳಿರೆ ಆ ದೇವರು ನೀತಿಯನುಸುರುತಿರೆ |
ಸಾವು ನೋವ್ಗಳಿಂದೆಲ್ಲರು ಕ್ರಮದಿಂ ಮಾರಾರಿಯ ಪುರಕೈದುತಿರೆ ||೧೧||

ಬೆದರದೆ ಫಣಿಯಪ್ಪೋರ್ವನೆ ಉಳಿದನು ಕದಲದಂತೆ ದೃಢ ಚಿತ್ತದಲಿ |
ಸದಯನಾದ ತಿಪ್ಪೇಶನಲಿ ಸಂ ಮುದವಂ ಬೀರುತ ಸೇವೆಯಲಿ |
ವಿಧ ವಿಧ ಸ್ತೋತ್ರವ ಮಾಡುತಲಿದ್ದನು ಅನುದಿನ ತನ್ನಯ ಮನದಲ್ಲಿ ||೧೨||

ಕಾಣುತ ತಿಪ್ಪೇಶನು ಫಣಿಯಪ್ಪನ ಜ್ಞಾನಕೆ ಸಂತಸದಿಂತೆಂದ
ಜಾಣನೆ ಲಗ್ನವ ಮತ್ತೊಂದ |ನಿನ| ಗಾನು ಮಾಡುವೆನು ಜವದಿಂದ
ಮಾಣದೆ ಕನ್ಯೆಯ ಪುಡುಕುವೆನೆನ್ನುತ ನುಡಿಯಲು ಫಣಿಯಪ್ಪಿಂತೆಂದ ||೧೩||

ನಿಶಿಯಲ್ಲುರುಳಿದ ಹಾಳುಕೂಪದಲ್ಲಿ ಬಿಸಿಲಲ್ಲುರುಳುವರೇ ಗುರುವೆ
ಕೆಸರಿನ ಸಂಗವು ಹಿತಕರವೇ |ನಾ| ವ್ಯಸನದಿಂದ ದೂರಾಗಿರುವೆ
ಕುಸಿದ ಪ್ರಾಯದಲಿ ರಸಿಕದ ಹೆಣ್ಣನು ಮಾಡಿಕೊಳ್ಳುದೆಂತಾಮದುವೆ ||೧೪||

ನನ್ನಂಥವನಿಗೆ ಕನ್ಯೆಯ ನಾಯುವ ರಿನ್ನಾರಿರುವರು ಬುವಿಯೊಳಗೆ
ಪುಣ್ಯಪುರುಷ ನೀನಿರಲೆನಗೆ ನಿ ನ್ನನ್ನು ನಂಬಿದೆನು ಮನದೊಳಗೆ
ಅನ್ಯ ವಸ್ತುಗಳ ನಿಚ್ಚಿಸಿ ಪುನರಪಿ ಬೀಳಲಾರೆ ಸಂಸ್ಕೃತಿ ಬಲೆಗೆ ||೧೫||

ಇಂತು ನುಡಿಯೆ ತಿಪ್ಪೇಶನು ಸಂತಸ ವಂತರಂಗದೊಳು ತಾಲಿದನು
ಮಂತಣವನು ನೆರೆ ಮಾಡಿದನು ಆ ನಂತರ ವಿಂತೆಂದು ಸಿರಿದನು
ಕಾಂತೆಯು ನಿನಗಿರೆ ನಮ್ಮಗಳಿಗೆ ಬಿಡದಂತೆ ಮಾಡುವಳು ಅಡಿಗೆಯನು ||೧೬||

ನಡುವಿನ ಪ್ರಾಯದಲಿರುತಿಹ ನಿನಗಂ ಹುಡುಗಿಯ ಕೊಡದಂತಿರುತಿಹರೆ
ಮಡದಿಯು ಕೆಡಕೆಂದೆನ್ನುವರೆ |ಜಗ| ದೊಡೆಯರು ಹೆಂಡರ ಬಿಟ್ಟಿಹರೆ
ಮಡದಿ ಮಕ್ಕಳೇ ಸಂಸ್ಕೃತಿಯಲ್ಲ ಜ್ಞಾನವೆ ಸಂಸ್ಕೃತಿಯಹುದು ಖರೆ ||೧೭||

ಗೃಹಸ್ಥ ಧರ್ಮವು ಪ್ರಶಸ್ತವೆನ್ನುತ ಸಮಸ್ತ ಶಾಸ್ತ್ರಗಳು ಸುರುವವು
ಗೃಹಸ್ಥರಿಂದಿಹುದೀಜಗವು |ನೀಂ| ಗೃಹಸ್ಥನಪ್ಪುವುದತಿ ಸುಖವು
ಗೃಹಿಣಿಯರಿರೆ ಪುರುಷಾರ್ಥ ಚತುಷ್ಟಯ ಸಾಧಿಸಲವುಕ್ಕೆ ಸೇರುವವು"[೨೭] ||೧೮||

ತಿಪ್ಪೇಸ್ವಾಮಿಯನ್ನು ಫಣಿಯಪ್ಪ ನಾಯಕನಹಟ್ಟಿಗೆ ಕರೆತಂದ ಮೇಲೆ ಫಣಿಯಪ್ಪನ ಮನೆಯಲ್ಲಿಯೇ ಉಳಿದುಕೊಳ್ಳುತ್ತಾರೆ. ಕೆಲ ಸಮಯದಲ್ಲಿ ಫಣಿಯಪ್ಪನ ಹೆಂಡತಿ ಸಾವನ್ನಪ್ಪಿದಳು. ಆದರೂ ಫಣಿಯಪ್ಪ ಸ್ವಾಮಿಯ ಜೊತೆಯಲ್ಲಿ ನೇಮಗಳನ್ನು ಅನುಸರಿಸುತ್ತಾ ಹೆಂಡತಿ ಚಿಂತೆಯಲ್ಲಿರುವಾಗ ತಿಪ್ಪೇಸ್ವಾಮಿ ಯೋಚಿಸಬೇಡ ಕನ್ಯೆಯನ್ನು ಹುಡುಕು. ನಾನು ಮದುವೆಯನ್ನು ಮಾಡಿಸುತ್ತೇನೆ ಎಂದರು. ಫಣಿಯಪ್ಪ ನನಗೆ ಯಾರು ಕನ್ಯೆಯನ್ನು ಕೊಡುತ್ತಾರೆ ಸ್ವಾಮಿ. ನನ್ನಂತಹ ಮುದುಕನಿಗೆ ಹರೆಯದ ಹುಡುಗಿಯನ್ನು ಮದುವೆ ಮಾಡಿಕೊಂಡರೆ ಸರಿಯಾಗುವುದಿಲ್ಲ ಬೇಡ ಎಂದು ನುಡಿದರು. ಆದರೂ ಫಣಿಯಪ್ಪನ ಮಾತನ್ನು ಕೇಳದೆ ಸ್ವಾಮಿಗಳು ಹೆಣ್ಣು ಹುಡುಕಿ ಮದುವೆ ಮಾಡಲು ಮುಂದಾದರು. ಪಂಚಗಣಾಧೀಶ್ವರರು ಸಂಸಾರಿಯಲ್ಲದಿದ್ದರು ವೈವಾಹಿಕ ಜೀವನ ನಡೆಸುವುದಕ್ಕೆ ಪ್ರೋತ್ಸಾಹ ನೀಡುತ್ತಾರೆ. ಇದಕ್ಕೆ ತಿಪ್ಪೇಸ್ವಾಮಿ ಹೊರತಲ್ಲ. ಫಣಿಯಪ್ಪನಿಗೆ ಮದುವೆ ಮಾಡಿಸುವ ಮೂಲಕ ಸಂಸಾರಿಕ ಬದುಕನ್ನು ಒಪ್ಪಿಕೊಂಡವರು. ಮದ್ದಾನೇಶ್ವರ ಸ್ವತಃ ತಾನೇ ಮದುವೆಯಾಗುವಂತಹದ್ದು ಕಂಡುಬರುತ್ತದೆ. ಸನ್ಯಾಸಿಗಳಾದರು ಸಂಸಾರಿಕ ಬದುಕನ್ನು ಒಪ್ಪಿಕೊಂಡವರಾಗಿದ್ದರು.

"ತಿಪ್ಪೇಶನು ಫಣಿಯಪ್ಪನಿಗಿಂತೆಂದೊಪ್ಪಿಸಿ ಕನ್ಯೆಯ ಪುಡುಕುತಿರೆ |
ಒಪ್ಪುವ ಕನ್ಯೆಯು ಚಳ್ಳಕೆರೆ ಯ ಲ್ಲಿರ್ಪುದರಿತು ತಾನಲ್ಲಿಗುರೆ |
ತಪ್ಪದೆ ಪೋಗುತ ಕನ್ಯೆಯ ಪಿತನನ್ನೊಪ್ಪಿಸಿದನು ತಿಪ್ಪೇಶನುರೆ ||೧೯||

ಬೇಗನೆ ಪಿಳ್ಳೆಯ ಪ್ರಸ್ತವನಾಗಲೆ ಸಾಗಿಸಿಬಿಟ್ಟನು ತಿಪ್ಪೇಶ |
ಆಗಲೆ ವಿವಾಹದಾದಿವಸ |ಸರಿ| ಯಾಗಿ ಪೇಳಿದನು ಗುಣಕೋಶ |
ರಾಗದೊಳಾದಿನ ಬರುವೆನೆನ್ನುತಲಿ ಅಪ್ಪಣೆ ಕೇಳಿದ ವಿಶ್ವೇಶಾ ||೨೦||

ಕನ್ಯಾಪಿತನಾ ತಿಪ್ಪೇಶಗೆ ನಾವ್ ನಿರ್ಣಯ ಮಾಡಿದ ದಿವಸಕ್ಕೆ |
ಬನ್ನಿರಿ ತಪ್ಪದೆ ಲಗ್ನಕ್ಕೆ |ನಾಂ| ನನ್ನಯ ಬಂಧೂ ಬಳಗಕ್ಕೆ |

ನನ್ನಿಯಿಂದ ಪತ್ರಗಳನ್ನು ಬರೆಯುವೆ ಬನ್ನಿರೆನ್ನತಾ ಕಾರ್ಯಕ್ಕೆ ||೨೧||

ಇಂತು ಪೇಳಿ ತಿಪ್ಪೇಶನು ಮನದೊಳು ಸಂತಸಪಡುತಂ ಒಪ್ಪುತ್ತಾ
ಕಂಡು ವೈರಿಯನು ಸ್ಮರಿಸುತ್ತ |ಭಗ| ವಂತನೆ ಪೊರೆಯುವುದೆನ್ನುತಾ
ಶಾಂತಭಾವದಿಂ ನಾಯ್ಕನಹಟ್ಟಿಗೆ ಬಂದನು ಬೇಗನೆ ನಡೆಯುತ್ತ ||೨೨||

ಇತ್ತ ಕಡೆ ಮತ್ತೊಬ್ಬರು ಬರುತಂ ಕನ್ಯೆಯ ಕೇಳಲ್ಕಾಗವನು |
ವಿತ್ತದಾಶೆಯಿಂದೊಪ್ಪಿದನು ಜನ ಕಿತ್ತ ಪೀಳ್ಯೆಯಂ ಜನಕವನು |
ಮುತ್ಯನಾದ ಫಣಿಯಪ್ಪಗೆ ಕನ್ಯೆಯ ನಿತ್ತೊಡೆ ಫಲವೇನೆಂಬುವನು ||೨೩||

ಕನ್ಯಕೈವರಾಗಲೆ ಲಗ್ನದ ನಿರ್ಣಯ ಮಾಡಿದರಾದಿನವೆ |
ಪುಣ್ಯಾತ್ಮನು ಹೇಳಿದ ದಿನವೆ |ನಾ| ವಿನ್ನು ಬರುನವಂದಿನ ದಿನವೆ
ಎನ್ನುತ್ತವರಿಂದನುಜ್ಞೆ ಪಡೆಯುತ ಹೊರಟರು ಯೋಚಿಸಲಿದು ತರವೆ ||೨೪||

ಮದುವೆ ಹತ್ತಿರಕೆ ವದಗಿ ಬಂದಿತೆಂದದಕೆ ವಸ್ತುಗಳ ನಿತ್ತ ಕಡೆ |
ಸದಯನು ಬಿಡದಂತಣಿ ಮಾಡೆ| ಆ ಮದುವೆಯ ದಿನ ಬಂದಿತು ಕೂಡೆ |
ಮುದದಿಂದಲಿ ಫಣಿಯಪ್ಪನ ಜೊತೆಯಲಿ ಚೆಳ್ಳಕೆರೆಗೆ ಪಯಣವ ಮಾತೆಡೆ ||೨೫||

ಇತ್ತಲಿವರು ಮತ್ತತ್ತಲವರು ಕೂಡುತ್ತಲೆ ಬಂದರು ಲಗ್ನಕ್ಕೆ |
ಇತ್ತೆರ ಜನರಾ ಕನ್ಯಕ್ಕೆ ಮುಖ ವಿತ್ತು ನಿಂತರಾ ಸಮಯಕ್ಕೆ |
ಮುತ್ಯನಾದ ಫಣಿಯಪ್ಪಗೆ ಪುತ್ರಿಯ ನಿತ್ತುದಿಲ್ಲವೆಂದೆನಲಿಕ್ಕೆ"[೨೯] ||೨೬||

ಫಣಿಯಪ್ಪನಿಗೆ ಚಳ್ಳಕೆರೆಯಲ್ಲಿ ಕನ್ಯೆಯನ್ನು ನೋಡಿ ವಿವಾಹದ ಮಾತು ಕತೆ ಮುಗಿಸಿಕೊಂಡು ಬಂದರು. ಸ್ವಲ್ಪ ಸಮಯದ ನಂತರ ವಿವಾಹದ ಎಲ್ಲಾ ಸಿದ್ಧತೆಗಳನ್ನು ಮಾಡಿಕೊಂಡು ಬಂಧು-ಬಳಗ ಎಲ್ಲರನ್ನು ಕರೆದುಕೊಂಡು ವಿವಾಹಕ್ಕೆ ಹೋದಾಗ ಕನ್ಯೆಯ ತಂದೆ ಹೆಂಡತಿ ಕಳೆದುಕೊಂಡು ವಿಧುರನಾದವನಿಗೆ ಮಗಳನ್ನು ಕೊಟ್ಟು ವಿವಾಹ ಮಾಡುವುದಿಲ್ಲ ಎಂದು ನಿರಾಕರಿಸುತ್ತಾರೆ.

"ಕನ್ಯಾಪಿತನಿಂತೆನ್ನಲು ಸ್ವಾಮಿಯು ಮುನ್ನವೆ ನಮಗೆ ಮಾಲಿತ್ತು |
ಭಿನ್ನ ಮಾತುಗಳ ನಾ ಹೊತ್ತು |ನೀ| ನೆನ್ನದೆ ಕೊಡು ಮುನ್ನಿನ ತುತ್ತು |
ನನ್ನಿವಾಕ್ಯವಂ ತಪ್ಪಲತ್ಕುಳಿವುದೆ ನಿನ್ನಗಿರುವ ಈ ಸಂಪತ್ತು ||೨೭||

ಈಪರಿ ತಿಪ್ಪೇರುದ್ರನು ಪೇಳಲ್ಕಾಪುರುಷನು ಪೇಳಿದನಲ್ಲ |
ಈ ಫಣಿಯಪ್ಪನು ಮುದಿಮಲ್ಲ |ಸುತೆ| ಗೋಪನಪ್ಪುವುದು ಸರಿಯಲ್ಲ |
ಕೋಪಿಸಿಕೊಂಡರು ನಿಮ್ಮಗೆ ಮಗಳಂ ಖಂಡಿತದಿಂದಾಯುವುದಿಲ್ಲ. ||೨೮||

ಈ ಮಾತುಗಳಂ ಕೇಳುತ ತಿಪ್ಪೇಸ್ವಾಮಿಯು ಮೌನವ ತಾಳಿದನು |
ಕಾಮ ವೈರಿಯನು ಸ್ಮರಿಸಿದನು |ಬಳಿ| ಕಾ ಮದುವೆಯ ಜನರೂಟವನು |
ನೇಮದಿ ಮಾಡುತ್ತಾ ನಂತರದಲಿ ಮಾಡಿದರಾಯಿತು ಲಗ್ನವನು ||೨೯||

ಎಂದು ಬಗೆಯುತಂ ಲಿಂಗಾರ್ಚನೆಯಂ ಚಂದದಿ ಮಾಡುವೆವೆನ್ನುತಲಿ |
ಬಂದು ಕುಳಿತರೊಂದೆಡೆಯಲ್ಲಿ |ಆ| ನಂದವ ಪಡುತಂ ಮನದಲ್ಲಿ |
ಅಂದು ತಮ್ಮಗಳ ಲಿಂಗಗಳೆಲ್ಲವು ಪೋದವು ಸ್ವಾಮಿಯ ಮಹಿಮೆಯಲಿ ||೩೦||

ಲಿಂಗಗಳೆಲ್ಲವು ಮಾಯವಾಗಲಾ ಲಿಂಗಗಳಿಲ್ಲದೆ ಭೋಜನವಂ |
ಹಿಂಗುತಲವರತಿ ಸೋಜಿಗವಂ |ಪಡು| ತಂಗಲಾ ಪದಿಂದಿರಲೋರ್ವಂ|
ಜಂಗಮನಹ ತಿಪ್ಪೇಶನ ಜರಿದುದಕುಣ್ಣಬೇಕು ನೀವೀ ಫಲವಂ ||೩೧||

ವಚನವ ಕೊಡುತಂ ವಂಚನೆ ಮಾಳ್ಪರಿಗುಚಿತ ಮಾದುದೀ ಕೃತಿಯೆಂದು |
ವಚಿಸಿದ ನುಡಿಯಾಲಿಸುತಂದು |ಆ| ಸುಚರಿತ ಸ್ವಾಮಿಯೆ ನಮಗಿಂದು |
ರಚಿಸಿದನಿಂಥಾ ವ್ಯಥೆಯನ್ನುತ ಜನ ನಿಚಯವು ಮನದೊಳು ಬಹುನೊಂದು ||೩೨||

ಬರುತಂ ಸರ್ವರು ಸ್ವಾಮಿಯ ಬಳಿಗಂ ಚರಣಕ್ಕೆರಗುತ ಭಕ್ತಿಯಲಿ |
ಕರಗಳ ಜೋಡಿಸುತಿದಿರಿನಲಿ |ನಾಂ| ಕರುಣವ ಬೀರುತ ನಮ್ಮಲ್ಲಿ |
ಹರಲಿಂಗಗಳಂ ಕೊಡುತಂ ನಮ್ಮಯ ಹರಣವನುಳಿಸೈ ಜಗದಲ್ಲಿ ||೩೩||

ಕನ್ಯಾರ್ಪಿತನಾ ಸ್ವಾಮಿಗೆ ನಮಿಸುತ ನಿನ್ನ ಭಕ್ತಗೀಯುವೆ ಮಗಳಂ |
ಮನ್ನಿಸು ನನ್ನಯ ತಪ್ಪುಗಳಂ |ನೀ| ವಿನ್ನು ಕೊಡುವುದೈ ಲಿಂಗಗಳಂ |
ಎನ್ನುತ ಮಗುಳೆರಗಲ್ಕಾ ಶರಣನು ಕರುಣಿಸಿದನು ಶಿವಲಿಂಗಗಳು ||೩೪||

ಧನ್ಯತೆ ಪೊಂದುತ ಸರ್ವರು ಭೋಜನವನ್ನು ಮಾಡುತಾ ಕನ್ಯೆಯಗಂ |
ಮಾನ್ಯನಾದ ಫಣಿಯಪ್ಪನಿಗಂ |ಬಹ| ಳೋನ್ನತಿಯಿಂ ಗೈದರು ಲಗ್ನಂ |
ಚೆನ್ನಿಗ ಸ್ವಾಮಿಯು ಹರಿಸಿದ ಶ್ರೀ ಮುಕ್ಕಣನು ಸುಖಮೀಯಲಿ ನಿಮಗಂ ||೩೫||

ಸತಿಪತಿಗಳಿಗಿಂತೆಂದು ಹರಸಿ ತಾಂ ಸಂತಸದಿದ್ದನು ತಿಪ್ಪೇಶ |
ಯತಿಯಂ ನುಡಿಸುತ ಸಂತೋಷ |ದಂ| ಪತಿಗಳು ಪೊಂದಿದ ರಾದಿವಸ |
ಸತಿಪತಿಗಳು ಸ್ವಗ್ರಾಮಕೆ ಬರುತಿರೆ ಜೊತೆಯಲಿ ಬಂದನು ವರಪುರುಷ"[೯] ||೩೬||

ತಿಪ್ಪೇರುದ್ರರಿಗೆ ಕನ್ಯೆಯ ತಂದೆಯ ಮಾತನ್ನು ಕೇಳಿ ಮನಸ್ಸಿಗೆ ನೋವುಂಟಾಗುತ್ತದೆ. ಅದರು ಸಹಿತ ಸಮಾಧಾನ ಚಿತ್ತದಿಂದ ಯೋಚಿಸಿ ಕಾದು ವೈರಿಯನು ಸ್ಮರಿಸಿದರು. ಲಿಂಗಗಳೆಲ್ಲವು ಮಾಯವಾದವು.

ಲಿಂಗ ಪೂಜೆಯಿಲ್ಲದೆ ಭೋಜನ ಮಾಡುವ ಹಾಗಿಲ್ಲ ಎಂದು ಆಲೋಚಿಸಿದರು. ಯಾಕೆ ಹೀಗಾಯಿತಲ್ಲ ಎಂದು ಯೋಚಿಸಿದಾಗ ಇದೆಲ್ಲ ತಿಪ್ಪೇರುದ್ರರ ಮಹಿಮೆ ಎಂದು ಅರಿತು ಅಲ್ಲಿ ನೆರೆದಿರುವ ಎಲ್ಲಾ ಬಂಧು-ಬಳಗದವರು ಕನ್ಯೆಯ ತಂದೆ-ತಾಯಿಗಳು ಸ್ವಾಮಿಯ ಬಳಿ ಬಂದು ನಾವು ತಪ್ಪುಮಾಡಿಬಿಟ್ಟೆವು ನಮ್ಮನ್ನು ಕ್ಷಮಿಸು ಎಂದು ಬೇಡಿಕೊಂಡರು. ನಂತರ ಫಣಿಯಪ್ಪನಿಗೆ ಮಗಳನ್ನು ಕೊಟ್ಟು ಮದುವೆ ಮಾಡಿಕೊಟ್ಟರು.

"ಒಂದು ದಿನದಿ ತಿಪ್ಪೇಶನು ದಂಪತಿಗಳನು ಕುರಿತು ತಾನಿಂತೆಂದ|
ಇಂದು ಶೇಖರನ ಮುದದಿಂದ |ನೀ| ವೊಂದೆ ಮನದಿ ಧ್ಯಾನಿಸಿರೆಂದ |
ಬಂದ ಕಷ್ಟಗಳ ಹಿಂದೆ ಮಾಡಿ ಜವದಿಂದ ಕೊಡುವ ಶಿವನಾನಂದ ||೩೭||

ಅತಿಥಿಗಳನು ಸತ್ಕರಿಸಿ ನೀತಿಯ ಪಥವನು ಬಿಡದಾಚರಿಸುತ್ತ |
ಮತಿವಂತರ ನುಡಿಯಾಲಿಸುತ |ಸ| ದ್ಗತಿ ಪಥವನು ದಿನ ಪುಡುಕುತ್ತ |
ಶ್ರುತಿಮತವನು ಸಂಮತಿಸುತ ಪರೋಪಕಾರದಲಿರಿಸಿರಿ ದೃಢಚಿತ್ತ ||೩೮||

ಕುಟಿಲರ ಕುಹಕರ ತಂಟಕ ಕಪಟಿಯ ಜನರ ಸಂಗವನು ಬಿಡಬೇಕು |
ಸಟೆಯನು ನುಡಿಯದಲಿರಬೇಕು |ಮನೆ| ಮಠಗಳ ರಕ್ಷಿಸುತಿರಬೇಕು |
ಘಟದೋಲೀತನು ವಸ್ಥಿರವೆಂಬುದು ದಿಟ ಮಾಗುರೆ ತಿಳಿಯಲು ಬೇಕು ||೩೯||

ಇಂತು ಬೋಧಿಸುತ ಸ್ವಾಮಿಯು ಬೇಗನೆ ಸಂತೆಗೆ ಫಣಿಯಪ್ಪನ ಕರೆದು |
ನಿಂತು ವಸ್ತುಗಳ ಬೆಲೆಗೈದು |ಅ| ನಂತರ ವವಕ್ಕೆ ಕೃಪೆಗೈದು |
ಶಾಂತಭಾವ ದಿಂದೋಡೆಗಳಲಿ ಹಾಕುತ್ತ ಮೇಲೆ ಮೆತ್ತಿಗೆಗೈದು ||೪೦||

ಬಳಿಕಾ ಫಣಿಯಪ್ಪನ ಮಡದಿಯಳನು ಕರೆಯುತ ನೀನಾ ಓಡೆಗಳ |
ಕೆಳಗಿನ ಕಂಡಿಲಿ ಕಾಳುಗಳ |ಕೈ| ಗೊಳುತಿರು ಮೇಲಿನ ಮೆತ್ತುಗಳ |
ಬಳಿಗಂ ಕೈ ಹಾಕದೆ ಕೀಳದಲಿರೆ ಜೀವನ ಸುಖಮಹುದನಗಾಲ ||೪೧||

ಮೇಲಿನ ಮೆತ್ತುಗಳೆಂದಿಗು ಕೇಳದೆ ಕಾಳುಗಳನು ನಾಂ ಬಳಸಮ್ಮ |
ಆಲಿಸು ನನ್ನೀ ನುಡಿಯಮ್ಮ |ಬರ| ಗಾಲ ನಿಮಗಿಹದಿಲ್ಲಮ್ಮ |
ಮಾಳಮ್ಮಗೆ ಕಟ್ಟಪ್ಪಣೆಯಾ ವಿಧ ಮಾಡಿದ ನಮ್ಮಯ ಘನ ಮಹಿಮ ||೪೨||

ಸ್ವಾಮಿಯು ಪೇಳಿದ ನೇಮದಂತೆ ಬಿಡದಾಚರಿಸುತ್ತಿಲೋಡೆಗಳು |
ಕಾಮಿನಿದಂದದಿ ಕಾಳುಗಳು |ಕೊಡ| ಲೀ ಮಹಿಮೆಯ ತಾಂ ನೋಡಿದಳು |
ಕಾಮಿನಿಯರ ಮತಿ ಚಂಚಲವೆಂಬುದು ಸಹಜವಲ್ಲವೇ ಯೋಚಿಸಲು ||೪೩||

ವರುಷ ಮೂರು ಗೆಳೆದರಸಿಯು ಚಂಚಲ ಮತಿಯಿಂದಲಿ ಒಂದೋಡೆಯನು |
ಪರಿಕಿ ಪೆನ್ನೆನ್ನುತ ಮೆತ್ತನ್ನು |ತಾಂ| ಹರುಷದಿ ಕೀಳುತ ಚಕಿತವನು |

ಭರದಿ ಪೊಂದಿದಳು ಒಡೆಗೆಳೆಲ್ಲವು ಬರಿದಾಗಲ್ಕತಿ ಖೇದವನು ||೪೪||

ಶಿಷ್ಯರ ವಾಕ್ಯದಿ ನಿಷ್ಠೆಯ ಬಿಟ್ಟೆಡ ನಿಷ್ಟದ ದುಃಖವು ಬರದಿಹುದೆ |
ಕಷ್ಟವು ಚಿತ್ತಕೆ ಸಮನಿಸದೆ? |ಎ| ಳೃಷ್ಟು ಸೌಖ್ಯಮದು ದೊರಕುವುದೆ |
ದುಷ್ಟಕೌರವನು ಸುಖಮಂ ಪಟ್ಟನೆ ಕೃಷ್ಣನ ವಾಕ್ಯಗಳಾಲಿಸದೆ"[೨೦] ||೪೫||

ತಿಪ್ಪೇರುದ್ರರು, ಮಾಳಮ್ಮ ಮತ್ತು ಫಣಿಯಪ್ಪನನ್ನು ಕರೆದು ಸತ್ಯದ ಹಾದಿಯಲ್ಲಿ ನಡೆಯುವಂತೆ, ಗುರು ಹಿರಿಯರನ್ನು ಗೌರವಿಸುವಂತೆ ಸಲಹೆಯನ್ನು ನೀಡುತ್ತಾರೆ. ಕುಟಿಲ, ಕಪಾಟಿಗಳ ಸಂಗವನ್ನು ಬಿಟ್ಟು ಒಳ್ಳೆಯ ನಡೆ-ನುಡಿಗಳಿಂದ, ಒಳ್ಳೆಯ ರೀತಿಯಲ್ಲಿ ಬದುಕನ್ನು ಸಾಗಿಸಿರಿ ವ್ಯಾಪಾರದಲ್ಲಿ ಯಾರಿಗೂ ಮೋಸ ಮಾಡಬೇಡ, ಲಾಭದ ಆಸೆಯನ್ನು ಪಡಬೇಡ ಎಂದು ಫಣಿಯಪ್ಪನಿಗೆ ಸತ್ಯಮಾರ್ಗವಾಗಿ ನಡೆದುಕೋ ಎಂದು ಸಲಹೆಯನ್ನು ಕೊಡುತ್ತಾರೆ. ಮಾಳಮ್ಮನನ್ನು ಕರೆದು ವಾಡೇವಿಗೆ ಮಂತ್ರ ಪಠನೆ ಮಾಡಿ ಅಕ್ಷಯ ನಿಧಿಯನ್ನು ಕರುಣಿಸಿದರು. ವಾಡೇವಿನಲ್ಲಿ ಯಾವಾಗಲೂ ಧಾನ್ಯದ ಕಣಜವೇ ಅದರಲ್ಲಿದೆ ಅದನ್ನು ಯಾವತ್ತೂ ಕಿತ್ತು ನೋಡಬೇಡ ಹಾಗೇನಾದರು ನೋಡಿದರೆ ಅದು ಕ್ಷಯವಾಗುತ್ತದೆ ಎಂಬ ಸೂಚನೆಯನ್ನು ಕೊಟ್ಟರು. ಮಾಳಮ್ಮನಿಗೆ ವಾಡೇವಿನಲ್ಲಿ ಯಾವಾಗಲೂ ರಾಶಿ ರಾಶಿ ಧಾನ್ಯ ಬರುತ್ತದೆ ಇನ್ನು ಎಷ್ಟಿರಬಹುದು. ಎನ್ನುವ ಕುತೂಹಲದಿಂದ ಅದನ್ನು ತೆಗೆದು ನೋಡಿದಾಗ ಧಾನ್ಯದ ರಾಶಿಯೆಲ್ಲ ನಶಿಸಿ ಹೋಗಿ ಹೊಗೆ ಬರಲು ಆರಂಭವಾಯಿತು. ಈಗಲೂ ಫಣಿಯಪ್ಪನ ಮನೆಯಲ್ಲಿ ಎರಡು ವಾಡೇವುಗಳಿಗೆ ಆದರೆ ಅವು ಕಾರ್ಯನಿರತವಾಗಿಲ್ಲ.

"ಮಿತಿಗಂ ಮೀರಿದ ದುಃಖಮದಾಯಿತು ಸತಿಯಳಾದ ಮಾಳಮ್ಮನಿಗೆ |
ಯತಿಯು ಪತಿಯು ನನ್ನೀ ಕೃತಿಗೆ |ಕಡು| ವ್ಯಥೆಯನು ಕೊಡದಲೆ ಬಿಡರೆನಗೆ |
ಗತಿಯೇಂ ಮುಂದಕ್ಕೆನ್ನುತ ಶಿವನಂ ನುಡಿಸುತ ನಿಂತಳು ಮನೆಯೊಳಗೆ ||೪೬||

ಮನೆಗಂ ಬಂದಾ ತಿಪ್ಪೇರುದ್ರಗೆ ಮಣೆದಿಂತೆಂದಲು ಕೈ ಮುಗಿದು |
ನನಗೆ ಮಾಯ ಮೋಹವು ಕವಿದು |ಈ| ಅನುಚಿತ ವಾಗಿಹ ಕೃತಿಗೈದು |
ಘನತರ ದ್ರೋಹವ ಮಾಡಿದೆ ನನ್ನಯ ತಪ್ಪನು ಕರುಣದಿ ಮನ್ನಿಪುದು ||೪೭||

ಬೋಳೈಸುತ ಮಾಳಮ್ಮನ ಮನ್ನಿಸಿ ಮೌನದಲಿದ್ದನು ತಿಪ್ಪೇಶ |
ಮಾಳಿಯು ಮಾಡಿದ್ದೇ ಕೆಲಸ |ಶಿವ| ಲೀಲೆಯೆಂದು ನೆರೆ ಸಂತೋಷ |
ತಾಳಿದ ಮನದೊಳು ಫಣಿಯಪ್ಪನು ಈ ಭಾವಕೆ ಮೆಚ್ಚನೆ ಜಗದಾಶ ||೪೮||

ಇನ್ನು ಮುಂದೆ ವ್ಯವಸಾಯಾದಿ ಜೀವನವನ್ನುರೆ ಸಾಗಿಸಬೇಕೆಂದು|
ತನ್ನ ಮನಸಿನಲಿ ತಿಳಿದಂದು | ಹೊಲ |
ವನ್ನು ಗೆಳತಿಯನು ನಾನಿಂದು |

ಎನ್ನುತ ನಿಶ್ವೈಸುತ ಫಣಿಯಪ್ಪನು
ತನ್ನುತ ನಿಶ್ವೈಸುತ ಫಣಿಯಪ್ಪನು
ತನ್ನಯ ಕೆಲಸಕೆ ನಡೆದಂದು ||೪೯||

ತಿಪ್ಪೇರುದ್ರನದನ್ನು |ಕಂಡು| ಫಣಿಯಪ್ಪಗೆ ಸಹಾಯವಾಗುತಲಿ |
ಕಪ್ಪಲೆಯನ್ನೇ ಹೊಡೆಯುತಲಿ ನೆಲ ತಪ್ಪದೆ ನೀರಂ ಕಟ್ಟುತಲಿ |
ಒಪ್ಪಿ ಕೆಲಸಗಳ ನೀವಿಧಗೈಯುತಲಿರ್ದನು ಭಕ್ತನ ಜೊತೆಯಲ್ಲಿ ||೫೦||

ಕೆಲದಿನ ಕಳೆಯುತ್ತೊಂದು ದಿನದಿ ಕಪ್ಪಲೆ ಬಾನೆಯು ಹರಿದ್ಹೋಗೆ |
ಹೊಲಿಯಲಿದನು ನಮ್ಮೊಕ್ಕಲಿಗೆ |ಜವ| ದಲಿ ಕೊಡುತಾಂ ಬಹೆ ಮನೆಗೆ |
ಘಳಿಲನೆ ಮನೆಗಂ ಊಟಕೆ ಪೋಗೈಯೆಂದನು ತಿಪ್ಪೇರುದ್ರನಿಗೆ ||೫೧||

ತಿಪ್ಪೇರುದ್ರನ ಮನೆಗೆ ಕಳುಹಿ ಫಣಿಯಪ್ಪನು ಬೇಗಾರನ ಮನೆಗೆ |
ಕಪ್ಪಲೆ ಬಾನೆಯ ಪಿಡಿದೊಳಗೆ |ಅವ| ನಿರ್ಪನೆಂದು ನಾನುರೆ ಕೂಗೆ |
ಅಪ್ಪಾಯೆನ್ನುತ ಬೇಗಾರನ ಸತಿ ಇಂತೆಂದಳು ಒಳಮನೆಯೊಳಗೆ ||೫೨||

ಎಲ್ಲಿಗೆ ಪೋದನ ನನ್ನಯ ನಲ್ಲನು ಮನೆಯೊಳಗಿಲ್ಲೆರ ನೀನದನು |
ಅಲ್ಲೆ ಇಟ್ಟುಬಿಡು ನಾನದನು |ಜವ| ದಲ್ಲಿಯೆ ಹೊಲಿಸುತ ಕಳುಹುವೆನು |
ಪುಲ್ಲನೇತ್ರೆಯಾ ಸೊಲ್ಲಂ ಕೇಳುತ ಬಾನೆಯ ಕೆಳಗಿಟ್ಟುಸಿರದನು ||೫೩||

ಬಾನೆಯ ಹರಿದಿಹ ತಾಣದ ಗುರ್ತನು ಕಾಣಲು ಹೊರಗಡೆ ಬಾರಮ್ಮ |
ನಾನದ ತೋರಿಪೆ ನಿನಗಮ್ಮ |ಆ| ತಾಣವ ನಿನ್ನಯ ಪತಿಗಮ್ಮ |
ನಾನೇ ತೋರಿಸಲ್ ಬರುವುದು ಅದರಿಂದಿಲ್ಲಿಗೆ ಬೇಗನೆ ಬಾರಮ್ಮ ||೫೪||

ಎನ್ನಲು ತಿಪ್ಪೇರುದ್ರನಿಗೂಟಕೆ ಅನ್ನವ ಬಡಿಸುವೆ ನಾನೊಳಗೆ |
ಇನ್ನು ಬರುವುದೆಂತಾಂ ಹೊರಗೆ |ಫಣಿ| ಯಣ್ಣನೆ ಎನ್ನುತ ಮುಗುಳುನಗೆ |
ಯನ್ನು ತೋರುತಾ ಸಾಧ್ವಿಯು ನುಡಿಯಲು ಧಾವಿಸಿ ಬಂದನು ಮನೆಯೊಳಗೆ”[೨೧] ||೫೫||

ಮಾಳಮ್ಮ ಮಾಡಿದ ತಪ್ಪಿಗೆ ತುಂಬಾ ಪ್ರಾಯಶ್ಚಿತ್ತ ಅನುಭವಿಸುತ್ತಾಳೆ. ತಿಪ್ಪೇರುದ್ರರನ್ನು ಪರಿಪರಿಯಾಗಿ ಬೇಡುತ್ತಾಳೆ ಸ್ವಾಮಿ ನನ್ನ ತಪ್ಪಿನಿಂದ ಇಂತಹ ಅನಾಹುತ ನಡೆದು ಹೋಯಿತು ಮನ್ನಿಸು ಸ್ವಾಮಿ ಎಂದು ಬೇಡಿದಳು. ಮಾಡಿದ ತಪ್ಪಿಗೆ ಶಿಕ್ಷೆ ಅನುಭವಿಸುತ್ತಾಳೆ. ತಿಪ್ಪೇರುದ್ರರು ಫಣಿಯಪ್ಪ ದಂಪತಿಗಳಿಗೆ ವ್ಯವಸಾಯದಿಂದ ಜೀವನ ನಡೆಸುವಂತೆ ಸಲಹೆ ನೀಡಿದರು. ಕಷ್ಟಪಟ್ಟು ದುಡಿಯಬೇಕು ಎಂದು ಹೇಳಿದರು. ಅಂದಿನಿಂದ ಹೊಲದಲ್ಲಿ ಕೆಲಸ ಮಾಡಲು ಫಣಿಯಪ್ಪನ ಸಹಾಯಕ್ಕೆ ನೆರವಾಗುತ್ತಿದ್ದರು. ಒಂದು ದಿನ ಕಪಿಲೆ ಬಾನೆ ಹರಿದು ಹೋಗುತ್ತದೆ. ಅದನ್ನು ಹೊಲಿಸಿಕೊಂಡು ಬರಲು ತಿಪ್ಪೇರುದ್ರರು ಬೇಗಾರರ ಹಟ್ಟಿಗೆ

ಬರುತ್ತಾರೆ. ಅಲ್ಲಿ ಕಪಿಲೆಬಾನೆ ಹೊಲೆಯುವ ಬೇಗಾರನಿರಲಿಲ್ಲ. ಹೆಂಡತಿಯನ್ನು ಕರೆದು ಕಪ್ಪಿ ಬಾನಿ ಹರಿದಿರುವ ಗುರುತನ್ನು ತೋರಿಸುತ್ತೀನಿ ಬಾರಮ್ಮ ನಿನ್ನ ಸತಿಗೆ ಹೇಳು ಎಂದಾಗ ಆಕೆ ಸ್ವಾಮಿ ಮನೆಗೆ ಬಂದೀರಿ ಶಿವಪೂಜೆ ಮುಗಿಸಿ ಪ್ರಸಾದ ಸ್ವೀಕರಿಸಿ ಎಂದು ಕೇಳಿದಳು. ಸ್ವಾಮಿ ಅದಕ್ಕೆ ಒಪ್ಪಿಗೆ ಸೂಚಿಸಿ ಬೇಗಾರನ ಮನೆಗೆ ಶಿವ ಪೂಜೆಗೆ ಕುಳಿತರು. ಶಿವ ಪೂಜೆಗೆ ಕುಳಿತಿರುವ ಸ್ವಾಮಿಯನ್ನು ಕಂಡು ಫಣಿಯಪ್ಪನಿಗೆ ಕೋಪ ಉಕ್ಕಿ ಬರುತ್ತದೆ.

"ಉಣ್ಣುತ್ತಲ್ಲಿಹ ತಿಪ್ಪೇರುದ್ರನ ಕಣ್ಣು ತುಂಬ ನೋಡಿದನಾಗ
ಭಿನ್ನ ಭಾವನೆಯ ತಳೆದು ಮೊಗ |ವತಿ| ಖಿನ್ನ ಮಾಡಿಕೊಳ್ಳುತ್ತಾಗ
ಉಣ್ಣುವನಿವ ಚಂಡಾಲರ ಮನೆಯೊಳಗೇನಿದು ಕೆಡುತನದುದ್ಯೋಗ ||೫೬||

ಎನ್ನುತ ಗರ್ರನೆ ಹಿಂದಕೆ ತಿರುಗುತ ತನ್ನ ಮನೆಗೆ ಕೋಪದಿ ಬಂದ
ತನ್ನಗೆ ನೀರಂ ಕೊಡುಯೆಂದ |ಇಂ| ತೆನ್ನಲು ಮಾಳಮ್ಮೊಳಗಿಂದ |
ಸಣ್ಣ ತಂಬಿಗೆಯಲ್ಲುದಕವ ತಂದಳು ನಿಧಾನದಿಂದಭ ನಡೆಯಿಂದ ||೫೭||

ತಡಮಾಡಲ್ಕೇಂ ಕಾರಣವೆನ್ನುತ ದುಡುಕುತ ಕೇಳಿದ ಸಿಟ್ಟಿನಲಿ |
ಮಡದಿಯು ಶಾಂತ ಸ್ವಭಾವದಲಿ |ಪತಿ| ಯಡಿಗಳ ತೊಳೆಯುತ ಪ್ರೇಮದಲಿ |
ನುಡಿದಳು ಸ್ವಾಮಿಗೆ ಊಟಕ್ಕೆಡೆಯನು ಬಡಿಸುತಿದ್ದೆ ಕ್ಷಮಿಸೆನ್ನುತಲಿ ||೫೮||

ಯಾವ ಸ್ವಾಮಿಯೆಂದೊಳ ಮನೆಯೊಳಗಂ ಧಾವಿಸಿ ಬರುತಂ ನೋಡುತಿರೆ |
ಭಾವಕಿಯಿದು ಏನೆನ್ನುತಿರೆ |ಆ| ದೇವನು ಕುಳಿತಲ್ಲುಣ್ಣುತಿರೆ |
ಭಾವದೊಳಗೆ ಬೆರಗಾಗುತ ಫಣಿಯನು ಪಾವನಾತ್ಮನಡಿ ಗೆರಗುತಿರೆ ||೫೯||

ಮಾಳಮ್ಮಾಗಲೆ ನೀವೇದಿನದಲಿ ತಾಳಿದ್ದೇತಕೆ ಕೋಪವನು |
ಪೇಳೆನೆ ಭಯ ಭ್ರಾಂತಿಯನವನು |ನೆರೆ| ತಾಳುತ ಹೀಗೆಂದುಸಿರಿದನು |
ಪೇಳಲ್ಕಳವೇ ಸ್ವಾಮಿಯ ಮಹಿಮೆಯ ನೆನ್ನುತೆಲ್ಲವನ್ನರುಪಿದನು"[೨೨] ||೬೦||

ಬೇಗಾರನ ಹಟ್ಟಿಯಿಂದ ಮನೆಗೆ ಬಂದ ಫಣಿಯಪ್ಪ ಮಾಳಮ್ಮನಿಗೆ ನೀರು ತರಲು ಹೇಳಿದಾಗ ಆಕೆ ನೀರು ತರುವುದು ತಡವಾಗುತ್ತದೆ ಫಣಿಯಪ್ಪ ಕೋಪದಿಂದ ಹೆಂಡತಿಯನ್ನು ಬೈಯುತ್ತಾನೆ. ಯಾಕೆ ತಡವಾಗಿದ್ದು ಎಂದು ಕೇಳಿದಾಗ ಮಾಳಮ್ಮ ಸ್ವಾಮಿಗಳು ಒಳಗೆ ಊಟಕ್ಕೆ ಕುಳಿತಿದ್ದಾರೆ ಅದಕ್ಕೆ ತಡವಾಯಿತು ಎಂದು ನುಡಿದಳು. ಯಾವ ಸ್ವಾಮಿ ಅವರು ಬೇಗಾರನ ಮನೆಯಲ್ಲಿದ್ದಾರೆ ಎಂದು ಪರೀಕ್ಷಿಸಿ ನೋಡಲು ಬಂದಾಗ ತಿಪ್ಪೇರುದ್ರರು ಒಳಗೆ ಊಟಕ್ಕೆ ಕುಳಿತಿರುವುದನ್ನು ಕಂಡು ಫಣಿಯಪ್ಪನಿಗೆ ಆಶ್ಚರ್ಯವಾಯಿತು. ಸ್ವಾಮಿ ನೀವು ಮಹಾಮಹಿಮ ಪುರುಷರು ನಾನು ನಿಮ್ಮನ್ನು ನಿಂದಿಸಿದ್ದು ತಪ್ಪಾಯಿತು ಸ್ವಾಮಿ ನನ್ನನ್ನು ಕ್ಷಮಿಸಿ ಎಂದು ಫಣಿಯಪ್ಪ ಬೇಡಿಕೊಂಡನು.

“ಮಾಳಮ್ಮನು ಕೇಳುತ್ತಂ ಚಿಕಿತಂ ತಾಳುತ್ತಾ ಮಾಹಿಮಾತ್ಮನಲಿ |
ಮೇಲೆನಿಸುವ ನಿಜ ಭಕ್ತಿಯಲಿ |ಸುವಿ| ಶಾಲಮಾದ ವರಚಿತ್ತದಲಿ |
ಕಾಲೋಚಿತ ಸೇವೆಗಳನ್ನೆಸಗುತ ಕಾಲವ ಕಳೆದಳು ಸೌಖ್ಯದಲಿ ||೬೧||

ಒಂದು ದಿನವು ತಮ್ಮೆಮ್ಮೆಯು ಹಾಲನು ಒಂದು ಬಿಂದ ಸಹ ಕೊಡದಿರಲು |
ಅಂದು ಕೋಪದಿಂದಿರಲವಳು |ಅ| ಚಂದವನರಿಯದೆ ಸ್ವಾಮಿಗಳು |
ಅಂದಿನ ದಿನದಲ್ಲೂಟಕೆ ಹಾಲಂ ನೀಡೆನ್ನಲ್ಕಿಂತುಸಿರಿದಳು ||೬೨||

ಸಾವಿನ ರೋಗವು ಬಂದಿದೆ ಎಮ್ಮೆಗೆ ಈ ಹೊತ್ತಿನ ದಿನ ತಿಪ್ಪೇಶ |
ಈ ವಿಧ ನುಡಿಯಲ್ಕಾಪುರುಷ |ಮಹಿ| ಮಾವಲಂಬ ಸದ್ಗುಣ ಕೋಶ |
ಸಾವಿನ ರೋಗವು ಎಮ್ಮೆಗೆ ಬಂದಿತೆ ಅಯ್ಯೋ ಶಿವ ಶಿವ ಪರಮೇಶ ||೬೩||

ಎನ್ನುತ ಸ್ವಾಮಿಯು ನುಡಿಯಲ್ಕಾಗಲೆ ಎಮ್ಮೆಯ ಚಟಪಟವದ್ದಾಡಿ |
ತನ್ನ ಜೀವ ಬಿಡಲದು ನೋಡಿ |ಫಣಿ| ಯಣ್ಣ ನರಸಿಯಳು ಭಯಗೂಡಿ |
ನನ್ನ ಮಾತು ನನಗಾಯಿತು ಮೃತ್ಯುವು ಎನ್ನುತ ಪರಿಪರಿ ಗೋಳಾಡಿ ||೬೪||

ನಮ್ಮಯ ಚರಿತ್ರೆನಾಯಕ ನಡಿಗಳಿಗೊಮ್ಮನದಿಂದಲಿ ನಮಿಸುತ್ತ |
ಎಮ್ಮೆಯ ಬದುಕಿಪುದೆನ್ನುತ |ಮಾ| ಳಮ್ಮನು ಪ್ರಾರ್ಥಿಸಿ ಕೊಳ್ಳುತ್ತ |
ಸಮ್ಮುಖದಲಿ ಕೈ ಜೋಡಿಸಿ ನಿಂತಿರಾ ನಮ್ಮ ಸ್ವಾಮಿಯದ ಕಾಣುತ್ತ ||೬೫||

ಸತ್ತ ಎಮ್ಮೆಯನ್ನೆಬ್ಬಿಸಿ ಪಾಲ್ಕರೆದಿತ್ತನು ಮೂತಂಬಿಗೆ ತುಂಬ |
ಭಕ್ತ ನರಸಿಯಳು ಕಣ್ತುಂಬ |ನೋ| ಡುತ್ತ ಲರಳಿತಾನನಬಿಂಬ |
ಮತ್ತೆ ನಮಿಸುತಾ ಸ್ವಾಮಿಯ ಪಾದಕೆ ಮತ್ತು ನುಡಿಸಿದಳು ಬಾಯ್ತುಂಬ ||೬೬||

ಚರಿತ್ರೆ ನಾಯಕನೊಂದು ದಿವಸದಲ್ಲರುಪಿದ ಫಣಿಯಪ್ಪನಿಗಿಂತು |
ಧರೆಯಲಿ ನಾಂ ಪುಟ್ಟಿದಕ್ಕಿಂತು |ಜಡ| ನರರು ಮೆಚ್ಚಿಕೊಳ್ಳುವ ತಂತು |
ಹೊರಗೆಡುಹುತ್ತಂ ಕಾಲವ ಸಾಗಲು ವರಬುಧರಹುದೆನ್ನುವುದೆಂತು ||೬೭||

ಅದರಿಂ ಸರ್ವರು ಮುದವಂ ಪೊಂದುವ ಕೆರೆಗಳ ಕಟ್ಟಿಪುದೊಳಿತಪ್ಪ |
ಅದಕಂ ಬಹುಜನ ಬೇಕಪ್ಪ |ನೀ| ನೊದಗಿಸಬೇಕೆಲೊ ಫಣಿಯಪ್ಪ |
ಸದಯನ ಈ ವಿಧ ವಾಕ್ಯವನಾಲಿಸಿ ಮುದದಿಂ ನುಡಿದನು ಫಣಿಯಪ್ಪ ||೬೮||

ಪಾಳೈಗಾರ ಮಲ್ಲಪ್ಪನು ಈ ಪುರದಲ್ಲಿಯೆ ಇಹನಲ್ಲವೆ ಗುರುವೆ |
ಇಲ್ಲಿಗಾತನಂ ಕರತರುವೆ |ಹಿರಿ| ಹಳ್ಳಕೆ ನಾಂ ಕೆರೆ ಕಟ್ಟಿಸುವೆ |

ಸೊಲ್ಲನಿಂತು ನಾವ್ ನುಡಿಯಲ್ಕಾತನು ಜನರನ್ನೊದಗಿಪ ನೆಲೆ ಪ್ರಭುವೆ ||೧೯||

ಅಪ್ಪರಲ್ಲಿಯೂ ಮಲ್ಲಪ್ಪಲ್ಲಿಗೆ ಬೆಟ್ಟಿಯನಿತ್ತಾ ಹದವರಿತು |
ತುಪ್ಪನಾದ ಸ್ವಾಮಿಯ ಕುರಿತು |ಪೊತ| ಮಟ್ಟು ಕೈಗಳನು ಮುಗಿದಿನಿತು |
ತಟ್ಟನೆ ನುಡಿದನು ಕೆರೆಕಟ್ಟಲು ಸಾಕಷ್ಟು ಇರುದೊಂ ಸಂಪತ್ತು ||೨೦||

ಜನರಂ ಕಳುಹೆಂದರೆ ನಾಂ ಕಳುಹುವೆ ಧನವು ಮಾತ್ರ ನನ್ನಲ್ಲಿಲ್ಲ |
ಧನವಿಲ್ಲದೆ ಸಾಗುವದಿಲ್ಲ |ಕೆರೆ| ಯೆನಲದು ಬರಿ ಬಾಯ್ಮಾತಲ್ಲ |
ಇನಿತುಸುರಿದ ನುಡಿಗೇಳುತ ನಮ್ಮಯ ಘನ ಮಹಿಮನು ಪೇಳುವನೆಲ್ಲ ||೨೧||

ಉತ್ತರದಿಕ್ಪತಿ ಮಿತ್ರನು ಭಕ್ತರ ಚಿತ್ತದೊಳಿರುವುದು ನಿಜವಯ್ಯ |
ವಿತ್ತದ ತೊಂದರೆಯಿಲ್ಲಯ್ಯ |ಜನ| ಮೊತ್ತವ ಕೂಡಿಸಬೇಕಯ್ಯ |
ಭಕ್ತರ ಬಯಕೆಯ ಪೂರ್ತಿಮಾಡುವುದು ಚಿತ್ತಜವೈರಿಯ ಕೆಲಸಯ್ಯ ||೨೨||

ಸ್ವಾಮಿಯಾಜ್ಞೆಯಂತಾ ಮಲ್ಲಪ್ಪನು ಸಾವಿರಾರು ಕೂಲಿಯ ಜನಕೆ |
ನೇಮಿಸಿದನು ಕೆರೆಕಟ್ಟಲಿಕ್ಕೆ |ಅವ| ರಾಮಹ ಕೆಲಸಕೆ ನಿಲ್ಲಲಿಕೆ |
ಸೋಮ ಚೂಡನಂ ಮನದೊಳು ತಿಪ್ಪೇಸ್ವಾಮಿಯು ಧ್ಯಾನವ ಮಾಡಲಿಕೆ ||೨೩||

ಅಹಪನು ಪಡುವಲ ಜಡಿನಿಧಿಗಿಳಿಯಲು ಹವಣಿಸುತಿರುವುದು ತಿಳಿದವರು |
ಮಹಿಮದ ಕೂಲಿಯ ಕೇಳಿದರು |ಆ| ಮಹಿಮನು ಸರ್ವರ ಮುಖದಿದಿರು |
ಮಿಹಿತನಪರಿ ಇನಿತುಸಿರಿದ ಮಳಲಿನ ಗುಂಪುಗಳೆಸಗೆನಲಾಗವರು ||೨೪||

ಕೂಡಲೆ ಮಳಲಿನ ಗುಂಪುಗಳೆಸಗುತ ಕೂತುಕೊಂಡವರಲ್ಲಲ್ಲಿ |
ಕೂಡಲೆ ಸ್ವಾಮಿಯು ಮನದಲ್ಲಿ |ಶಶಿ| ಚೂಢನ ಭಜನೆಯ ಮಾಡುತಲಿ |
ಮಾಡಿದ ಜನರಿಗೆ ನೀಥೈ ಭಿಕ್ಷೆಯ ಎಂದು ನುಡಿದು ಕೈ ಗೋಲಿನಲಿ ||೨೫||

ಮಳಲಿನ ಗುಂಪೆಗಳೆಲ್ಲ ಮುಟ್ಟುತಂ ತಿಳಿಯಪಡಿಸಿದನು ಕೂಲಿಯನು |
ಮಳಲಲ್ಲಿಹುದೈ ನೀವದನು |ಕೈ| ಗೊಳುತಂ ಬೇಗನೆ ಕೆಲಸವನು |
ಕಳವಳ ಪಡದಲೆ ಮಾಡುತ ಮುಗಿಸಿರಿ ಪ್ರತಿದಿನ ವೈದೀ ಕೆರೆಯನ್ನು ||೨೬||

ತಮ್ಮಯ ಮುಂದಿನ ಮಳಲಿನ ಗುಂಪೆಗಳೊಮ್ಮನದಿಂದಲಿ ಪುಡುಕುತಿರೆ |
ತಮ್ಮಯ ಕೂಲಿಯ ಮಳಲೊಳುರೆ |ಅದು| ತಮ್ಮ ಮನಸಿಗಚ್ಚರದೋರೆ |
ನೆಮ್ಮದರೆಲ್ಲರು ಸ್ವಾಮಿಯನಂ ಬಳಿಕುಲ್ಲಾಸದಿ ಕಟ್ಟಿದರು ಕೆರೆ"[3] ||೨೭||

ಒಂದು ದಿನ ತಿಪ್ಪೇರುದ್ರರು ಮಾಳಮ್ಮನಿಗೆ ಇಂದು ಹಸಿವಿಲ್ಲ ಕುಡಿಯಲು ಹಾಲು ಕೊಡು ಎಂದು ಕೇಳಿದರು. ಮಾಳಮ್ಮ ಎಮ್ಮೆಗೆ ಏನು ರೋಗ ಬಂದಿದೆಯೋ ಒಂದುತೊಟ್ಟು ಹಾಲು ಕರೆದಿಲ್ಲ ಹೊತ್ತು

ಎಂದು ಹೇಳಿದಾಗ ತಿಪ್ಪೇರುದ್ರ ಹಾಗೇ ಹಾಗಲಿ ಬಿಡಮ್ಮ ಎಂದು ಹೇಳಿ ಹೋದರು. ಸ್ವಲ್ಪ ಸಮಯದಲ್ಲಿ ಎಮ್ಮೆ ಒದ್ದಾಡಿ ಪ್ರಾಣ ಬಿಟ್ಟಿತು. ಆಗ ಮಾಳಮ್ಮ ತಪ್ಪಾಯಿತು ಕ್ಷಮಿಸು ಎಂದು ಬೇಡಿದಳು. ಆಗ ಸ್ವಾಮಿಗಳು ಬಾಯಲ್ಲಿ ಆಡಿದ್ದು ಬೆನ್ನಿಗೆ ಮೂಲ ನೀನು ಅಂದಹಾಗೆ ಆಯಿತು ಎಂದರು. ಎಮ್ಮೆಯನ್ನು 'ಮೋನಿಷಿ ಎದ್ದು ಬಾ' ಎಂದು ಕರೆದಾಗ ಎಮ್ಮೆ ಎದ್ದು ಬಂದಿತ್ತು. ಆಗ ಸತ್ತೆಮ್ಮೆ ಹಾಲನ್ನು ಕರೆದು ಸುತ್ತೆಂಟು ಮಠಕ್ಕೆ ಕೇಳುಸ್ಯಾರೆ.

"ಭೀಮನಕೆರೆ ಹೊಸಕೆರೆಯು ಹಿರೇಕೆರೆ ರಾಮಸಾಗರದ ಕೆರೆಗಳನು |
ನೇಮದಿಂದ ಚಿಕ್ಕೆರೆಯನ್ನು |ಘನ| ಪ್ರೇಮದೈದು ಗ್ರಾಮಗಳನ್ನು |
ಸ್ವಾಮಿಯು ಸ್ಥಾಪನೆಗೈದನು, ಜನರಿಗೆ ಮಳಲೊಗೀಯುತ ಕೂಲಿಯನು ||೭೯||

ಕೆರೆಪುರ ವೈದ್ಯೆದೊಡನೆ ಕಟ್ಟಿಸುತ ಹರುಷದಿ ನಾಯ್ಕನಹಟ್ಟಿಯಲಿ |
ಇರುತಿದ್ದನು ಸಂತೋಷದಲಿ |ಜನ| ಕುರೆ ಶಿವತತ್ತ್ವವ ಪೇಳುತಲಿ |
ಹರನೇ ಇಂತಿಳೆಗವತರಿಸಿದ ನೆಂದೆರಗುತಿರ್ದರಾ ಜನರೆಲ್ಲಾ ||೮೦||

ಒಂದು ದಿವಸ ಶ್ರೀ ತಿಪ್ಪೇರುದ್ರನು ಚಂದದಿ ಪೇಳಿದ ಜನರಲ್ಲಿ |
ಎಂದಿದ್ದರು ಈ ತನುವಿನಲಿ |ಸಂ| ಬಂಧ ತಪ್ಪುವುದು, ಶೀಘ್ರದಲಿ |
ಒಂದು ಸಮಾಧಿಯ ಕಟ್ಟಿರಿ ಚಿಕ್ಕೆರೆ ಹಿಂದುಗಡೆಯ ಸುಸ್ಥಳದಲ್ಲಿ ||೮೧||

ಹೀಗೆ ಪೇಳಿದಾ ತಿಪ್ಪೇಸ್ವಾಮಿಗೆ ಬಾಗುತ ಸರ್ವರು ಭಕ್ತಿಯಲಿ |
ಆಗಲೆಯಾ ಸುಸ್ಥಳದಲ್ಲಿ |ಅನು| ರಾಗದಿಂದ ಜಯ ಘೋಷದಲಿ |
ಬೇಗನೆ ಸಮಾಧಿ ಕಟ್ಟುತ ಮುಗಿಸಿದರತಿ ಸೌಂದರ್ಯದ ಸೊಬಗಿನಲ್ಲಿ ||೮೨||

ಒಂದು ದಿವಸ ಫಣಿಯಪ್ಪನ ಕರೆದಾನಂದದಿ ನುಡಿದನು ತಿಪ್ಪೇಶ |
ಇಂದಿನ ದಿನನಾಂ ಕೈಲಾಸ |ಪುರ| ಕಂದದಿ ಪೋಗುವೆ ಸಂತೋಷ |
ದಿಂದಲಿ ವಿಮಾನ ಕಟ್ಟೆಂದುಸುರುತ ಬಿಟ್ಟನು ಕಾಯುವ ಘನ ಪುರುಷ ||೮೩||

ಫಣಿಯಪ್ಪಾಗಳೆ ಸೋಜಿಗ ಪಡುತಂ ಬೇಗನೆ ಕಟ್ಟಿದ ಸಿದಿಗೆಯ |
ಜನ ನಾಲ್ವರನಂ ಕರೆಯುತ್ತವನು |ಅ| ಘನ ಮಹಿಮನ ನಿಜ ಕಾಯುವನು |
ಅನುವಿಂದದರಲ್ಲಿರಿಸುತೆ ದುಃಖಿಸಿ ಸಮಾಧಿ ತಾಣಕೆ ಹೊರಸಿದನು ||೮೪||

ಆಗಾನಾಲ್ವರುಂ ಶವವಂ ಹೊರುತಂ ಸಾಗುತ ಮಧ್ಯದಲಿಳಿಸಲ್ಕೆ |
ಬೇಗನೇ ಸ್ವಾಮಿಯು ಮೆಲಕ್ಕೆ |ಎ| ದ್ದಾಗಲೆ ಹೇಳಿದನಾ ಜನಕೆ |
ರಾಗದ ಸಮಾಧಿ ಸ್ಥಾನದವರೆಗಂ ಇಳಿಸಬೇಡಿರೆಂದೆನಲಿಕ್ಕೆ ||೮೫||

ಇತ್ತ ಸ್ವಾಮಿಯೆದ್ದುತ್ತರ ಕೊಟ್ಟೊಡನಚ್ಚರಿ ಪೊಂದಿದರವರೆಲ್ಲ |
ಉತ್ತಮ ನೀತನು ಸತ್ತಿಲ್ಲ |ಇದು| ಎತ್ತಣ ಸಾವೋ ಶಿವಬಲ್ಲ |

ಸತ್ತವರೀ ಪರಿ ಉತ್ತರ ಕೊಡುವುದು ಮರ್ತ್ಯದೊಳೆಲ್ಲಿಯು ನೋಡಿಲ್ಲ ||೮೬||

ಅವರೀಪರಿಯಲಿ ನುಡಿಯಲ್ಕಾಗಲೆ ಶ್ರೀ ತಿಪ್ಪೇಶನು ಮೊದಲಂತೆ |
ಶವಮಾಗಲು ತಾವ್ ಮೊದಲಂತೆ |ಉ| ತ್ಸವದ ಬುದ್ಧಿಯಿಂದೋರಂತೆ |
ಜವದಿಂ ಸಮಾಧಿ ಸ್ಥಾನಕೆ ತರುತಂ ಇಳಿಸಲ್ ಕೂಡಿತು ಜನಸುತೆ ||೮೭||

ಪುನರಪಿ ಸ್ವಾಮಿಯ ಸಮಾಧಿ ಬಳಿಯಲಿ ಅನುವಿನಿಂದ ತಾಳೇನುತ್ತ |
ಜನ ಜಂಗುಳಿಯಂ ಕಳಿಸುತ್ತ |ಆ| ಫಣಿಯಪ್ಪನ ಕಡೆ ನೋಡುತ್ತ |
ದಿನ ಮೂರಾಗುವವರೆಗುಂ ಕದವನು ತೆರೆಯ ಬೇಡವೆಂದೆನ್ನುತ್ತ ||೮೮||

ನುಡಿದೊಡೆ ಸ್ವಾಮಿಯ ಅನುಜ್ಞೆಮೇರೆಗೆ ಬಿಡದಲೆ ಕದವನು ಮುಚ್ಚುತ್ತ |
ಕಡು ಮುನಿದು ಶಿವನೆನ್ನುತ್ತ |ಡ| ಕೊಡೆಯಲಿ ನೀರಂ ಸುರಿಸುತ್ತ |
ನಡೆದನು ಮನೆಗಂ ತಿಪ್ಪೇರುದ್ರನ ಚರಣ ಕಮಲಗಳ ನೆನೆಯುತ್ತ ||೮೯||

ಶರಣನು ಪೇಳಿದ ಮಾತಂ ಮರೆಯುತ ಫಣಿಯಪ್ಪನು ಮರುದಿನದಲ್ಲಿ |
ಬರುತಂ ತೆಗೆದನು ಕದವಲ್ಲಿ |ಆ| ಶರಣನು ಕೋಪಾವೇಶದಲಿ |
ಹರನಿಷ್ಠೆಯಲಿರಲೆನ್ನನು ಕೆಡಿಸಿರ್ಪಾತನ ಘನ ವಂಶವು ಸುಡಲಿ ||೯೦||

ಎನ್ನುತ ಶಪಿಸಲ್ಕಾ ಫಣಿಯಪ್ಪನು ಖಿನ್ನವಾಗಿ ಕಡುನಡುಗುತ್ತ |
ನಿನ್ನ ಮಾತನಂ ಮರೆಯುತ್ತ |ಗೈ| ದೆನ್ನಪರಾಧವ ಕ್ಷಮಿಸುತ್ತ |
ನನ್ನಂ ಕರುಣಿಪುದೆನ್ನಲು ಸ್ವಾಮಿಯು ಯೋಚಿಸಿ ನುಡಿದನು ಎಲೆ ಭಕ್ತ ||೯೧||

ಕೊಟ್ಟಶಾಪವದು ತಪ್ಪದಾದರುಂ ನೆಟ್ಟಗೆ ವಂಶವು ಬೆಳೆಯದಲೆ |
ನಷ್ಟ ಸಂತತಿಯು ಆಗದಲೆ | ಆ ದಷ್ಟ ಸಂತತಿಯು ಉಳಿಯದಲೆ |
ಹುಟ್ಟುತ್ತೊಬ್ಬೊಬ್ಬನು ಕಡೆಗುಳಿಯಲಿ ಎಂದು ಹರಸಿದನು ಕರುಣದಲಿ"[೨೪] ||೯೨||

ಏಳು ಕೆರೆಗಳನ್ನು, ಏಳು ಪುರಗಳನ್ನು ಕಟ್ಟಿಸಿ ಅಲೆಮಾರಿಯಾದ ಜನರನ್ನು ಒಂದೆಡೆ ನೆಲೆಸುವಂತೆ ಮಾಡಲು ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಿದರು. ಊರಿನ ಎಲ್ಲ ಜನರು ನೆಮ್ಮದಿಯಿಂದ ಬಾಳುವುದನ್ನು ಕಲಿಸಿದರು. ಸ್ವಲ್ಪ ಸಮಯದ ನಂತರ ತಿಪ್ಪೇರುದ್ರರು ಎಲ್ಲ ಜನರನ್ನು ಕರೆದು ನಾನು ಜೀವ ಸಮಾಧಿಗೆ ಹೋಗುತ್ತೇನೆ ನೀವೆಲ್ಲರು ಸಂತೋಷದಿಂದ ಕಾರ್ಯವನ್ನು ನೆರವೇರಿಸಿ ಎಂದರು. ಫಣಿಯಪ್ಪ ಅತ್ಯಂತ ಸಂಕಟಕ್ಕೆ ಒಳಗಾದನು. ಸ್ವಾಮಿಯನ್ನು ಬಿಟ್ಟಿರಲು ಹೇಗೆ ಎಂದು ಯೋಚಿಸಿದನು. ಫಣಿಯಪ್ಪನಿಗೆ ತಿಪ್ಪೇರುದ್ರರು ಮೂರು ದಿನಗಳ ವರೆಗೆ ಯಾರು ಸಮಾಧಿಯನ್ನು ತೆರೆಯಬಾರದು ಎಂದು ನುಡಿದರು. ಆದರೆ ಅವರ ಮಾತನ್ನು ಮೀರಿ ಫಣಿಯಪ್ಪ ತಿಪ್ಪೇರುದ್ರರನ್ನು ಬಿಟ್ಟಿರಲು ಸಾಧ್ಯವಾಗದೆ ಹೋದಾಗ ಒಂದು ಸಾರಿ ಅವರನ್ನು ನೋಡೋಣ ಎಂದು ಸಮಾಧಿಯ ಬಳಿ ಹೋದಾಗ ಸ್ವಾಮಿಗಳು ಸಿಟ್ಟಿನಿಂದ ಶಾಪ

ಹಾಕಿದರು. ನನ್ನ ಶಾಪ ಯಾವತ್ತೂ ತಪ್ಪುವುದಿಲ್ಲ ನಿನ್ನ ವಂಶ ನಾಶವಾಗುವುದು ಬೇಡ ಪೂರ್ಣ ವೃದ್ಧಿಸುವುದು ಬೇಡ ವಂಶಕ್ಕೆ ಒಬ್ಬ ಪುತ್ರ ಮಾತ್ರ ಸಾಕು ಹೋಗು ಎಂದು ಫಣಿಯಪ್ಪನನ್ನು ಕಳುಹಿಸಿದರು. ಕೆರೆಯನ್ನು ಕಟ್ಟುವ ಆಲೋಚನೆಯಲ್ಲಿರುವಂತಹ ಹಟ್ಟಿಯ ದೊರೆ ಮಲ್ಲಪ್ಪ ನಾಯಕ ಕೆರೆಕಟ್ಟಲು ತೊಡಗಿದಾಗ ವಿಜಯನಗರ ಆಳ್ವಿಕೆಯಲ್ಲಿ ಯುದ್ಧದಿಂದ ಬೊಕ್ಕಸ ಬರಿದಾಗಿತ್ತು. ಹಾಗಾಗಿ ಕೆರೆಯ ಕೆಲಸ ಅರ್ಧಕ್ಕೆ ನಿಂತಿತ್ತು. ಏನು ಮಾಡುವುದೆಂದು ತಿಳಿಯದೆ ಹೋದಾಗ ತಿಪ್ಪೇರುದ್ರರು ಸಂಜೆ ವಾಯು ವಿಹಾರಕ್ಕೆ ಬಂದಂತಹ ಸಮಯದಲ್ಲಿ ಹಟ್ಟಿ ಮಲ್ಲಪ್ಪ ನಾಯಕನನ್ನು ಕೇಳುತ್ತಾರೆ. ಯಾಕೆ ಕೆರೆಯ ಕೆಲಸ ಅರ್ಧಕ್ಕೂ ನಿಂತಿದೆ ಎಂದಾಗ ಇಲ್ಲ ಭಂಡಾರದಲ್ಲಿ ಬೊಕ್ಕಸ ಖಾಲಿಯಾಗಿದೆ ಎಂದುರು ಆಗ ಸ್ವಾಮಿಗಳು ಹಣದ ವ್ಯವಸ್ಥೆಯನ್ನು ನಾನು ಮಾಡುತ್ತೇನೆ. ನೀವು ಕೆಲಸ ಆರಂಭಿಸಿ ಎಂದು ಹೇಳಿದರು. ಹಾಗೆ ಆಗಲಿ ಎಂದು ಹೇಳಿ ದೊರೆ ಮಲ್ಲಪ್ಪನಾಯಕ ಕೆರೆಯ ಕೆಲಸವನ್ನು ಆರಂಭಿಸಿದರು. ಹಣನ್ನು ಕೊಡಲು ಸ್ವಾಮಿಗಳು ಕೆಲಸಮಾಡಿದ ಎಲ್ಲರಿಗೂ ಮರಳಿನ ಗುಪ್ಪೆ ಮಾಡಿರಿ ನಿಮ್ಮ ಶ್ರಮಕ್ಕೆ ತಕ್ಕಷ್ಟ ಹಣ ನಿಮಗೆ ಆ ಮರಳಿನ ಕುಪ್ಪೆಯಲ್ಲಿ ದೊರೆಯುತ್ತದೆ ಎಂದು ಹೇಳಿದರು. ಅದರಂತೆ ಕೆಲಸಗಾರರು ಮರಳಿನ ಆ ಕುಪ್ಪೆಗೆ ಸ್ವಾಮಿ ಬೆತ್ತದಿಂದ ಮೂರು ಸಲ ಮುಟ್ಟಿ ಮಾಡಿದಷ್ಟು ನೀಡು ಭಿಕ್ಷೆ ಎಂದು ಹೇಳಿದರು. ಕೆಲಸಗಾರರು ಮರಳಿನ ಕುಪ್ಪೆ ತೆಗೆದು ನೋಡಿದಾಗ ಶ್ರಮಕ್ಕೆ ತಕ್ಕಷ್ಟು ಹಣ ಮರಳಿನ ಕುಪ್ಪೆಯಲ್ಲಿ ಸಿಗುತ್ತಿತ್ತಂತೆ ಗರ್ಭಿಣಿ ಸ್ತ್ರೀಗೆ ಎರಡು ಪಟ್ಟು ಹಣ ದೊರಕಿತಂತ್ತೆ... ನಿನ್ನ ಜೊತೆ ನಿನ್ನ ಮಗು ಕೆಲಸ ಮಾಡಿದೆ ಎಂದು ಸ್ವಾಮಿಗಳು ಹೇಳಿದಾಗ ಈಗಲೂ ಈ ಭಾಗದಲ್ಲಿ ಗರ್ಭಿಣಿ ಸ್ತ್ರೀಯರಿಗೆ ಎರಡುಪಟ್ಟು ಕೂಲಿ ಕೊಡುವದನ್ನು ಕಾಣಬಹುದು. ಸೋಮಾರಿಗಳಿಗೆ ಏನು ಸಿಗುತ್ತಿರಲಿಲ್ಲವಂತೆ ದುಡಿದು ಉಣ್ಣುವಂತೆ, ಜನತೆಗೆ ಕಾಯಕ ಸಂಸ್ಕೃತಿಯನ್ನು ಕಲಿಸಿದವರು ತಿಪ್ಪೇರುದ್ರರು.

"ಅದನು ಕೇಳುತಂ ಮುದವ ತಾಳುತಂ ಫಣೆಯಪ್ಪನು ಗದ್ದುಗೆಯನ್ನು |
ವಿಧವಿಧದಿಂದಲಿ ಪೂಜೆಯನು |ಇನ| ನುದಯದಿಯನುದಿನ ಗೈಯುವೆನು |
ಸದಮಲ ಸುಖವಂ ಪೊಂದುವೆನೆನ್ನುತ ನುಡಿಯುತ್ತಾಪರಿ ಚರಿಸಿದನು ||೯೩||

ಒಂದು ದಿನದೊಳಾ ಫಣೆಯಪ್ಪಗೆ ರುಜೆ ಸಂಧಿಸೆ ದೇಹಲಸ್ಯದಲಿ |
ಮಂದಿರದಾಳನು ಕರೆಯುತಲಿ |ಇಂ| ತೆಂದನು ಗದ್ದುಗೆ ಗುಡಿಯಲ್ಲಿ |
ನಂದಾದೀಪವು ಇಹುದೋ ಇಲ್ಲವೊ ನೋಡಿಕೊಂಡು ಬಾ ಶೀಘ್ರದಲಿ ||೯೪||

ಒಡೆಯನು ನುಡಿದಾ ಮೇರೆಗೆ ಸೇವಕನೊಡನೆ ಪೋಗುತಾ ಗುಡಿಯಲ್ಲಿ |
ಸೊಡರಿಲ್ಲದನಂ ನೋಡುತಲಿ |ಸಂ| ಗಡಲೇ ದೀಪವ ಹಚ್ಚುತಲಿ |
ಬಿಡದಲೆ ಗದ್ದುಗೆ ಪೂಜೆಯ ತಾನೇ ಗೈದೇ ಬಂದನು ತವಕದಲಿ ||೯೫||

ಅಂದಿನ ದಿನ ಫಣೆಯಪ್ಪನ ಸ್ವಪ್ನದಿ ಬಂದಾ ಸ್ವಾಮಿಯು ಪೇಳಿದನು |
ಮುಂದಿನ ದಿನಗಳ ಪೂಜೆಯನು |ಆ| ನಂದದಿಂದಲಾ ಸೇವಕನು |
ಬಂದೇ ಮಾಡಲಿ ಬಳಿಕಾತನ ಕುಲದವರೇ ಮಾಡಲಿ ಸೇವೆಯನು ||೯೬||

ಫಣಿಯಪ್ಪನು ಶ್ರೀ ಸ್ವಾಮಿಯು ಪೇಳಿದ ಕನಸಿನ ವಾಕ್ಯದ ಪರಿಯನ್ನು |
ಮನೆಯ ಸೇವಕಗೆ ತಿಳಿಸಿದನು |ಅದ| ಕನುಮತಿ ಪೊಂದುತ ಸೇವಕನು |
ಅನುದಿನವಲ್ಲಿಂದಾತನ ವಂಶದ ಜನರೇಗೈವರು ಪೂಜೆಯನು"[38] ||೯೭||

ಫಣಿಯಪ್ಪ ಸ್ವಾಮಿಯ ದೀಪ ಉರಿಯುತ್ತಿದೀಯ ಇಲ್ಲ ನೋಡಿಕೊಂಡು ಬಾ ಎಂದು ಮನೆಯ ಆಳಾದ ಬೇಡರ ಹುಡುಗನಿಗೆ ಹೇಳಿ ಕಳುಹಿಸುತ್ತಾರೆ. ದೀಪ ನಂದಿ ಹೋಗುತ್ತಿರುವುದನ್ನು ಕಂಡ ಹುಡುಗ ಮುಖ ತೋಳೆದುಕೊಂಡು ಹೋಗಿ ದೀಪ ಹಚ್ಚಿ ಬರುತ್ತಾನೆ. ಸ್ವಾಮಿಗಳು ಆ ಹುಡುಗನಿಗೆ ಇಂದಿನಿಂದ ಹೊರಮಠದ ಪೂಜೆ ನಿನ್ನ ವಂಶಕ್ಕೆ ಮೀಸಲಾಗಲಿ ಎಂದು ಹೇಳಿದರು. ತಿಪ್ಪೇರುದ್ರರ ಆಜ್ಞೆಯಂತೆ ಈಗಲೂ ಹೊರಮಠದ ಪೂಜೆ ಬೇಡ ಜನಾಂಗದವರಿಗೆ ಮೀಸಲಾಗಿದೆ. ಒಳಮಠದ ಪೂಜೆ ಫಣಿಯಪ್ಪನ ವಂಶದವರಿಗೆ, ಹೊರಮಠದ ಪೂಜೆ ಬೇಡರಿಗೆ ಮೀಸಲಾಗಿದೆ.

"ಊರಿನವರು ಶ್ರೀ ತಿಪ್ಪೇರುದ್ರಗೆ ತೇರಂ ಕಟ್ಟಿದರುತ್ಸವದಿ |
ಸೇರಿದರನೇಕ ಜನ ಮಂದಿ |ಗಂ| ಭೀರ ವಾದ್ಯಗಳ ವೈಭವದಿ |
ಮಾರನ ದಹಿಸುವ ಹುಣ್ಣಿಮೆ ಮೇಲ್ಬಹ ಚಿತ್ತಾ ನಕ್ಷತ್ರದ ದಿನದಿ ||೯೮||

ವರುಷ ವರುಷಕಂ ಜಾತ್ರೆಯು ಬೆಳೆಯಿತು ಹೊರಮಠ ಒಳಮಠವೆರಡಾಗಿ |
ಪುರವದು ಹಬ್ಬಿತು ಸೊಗಸಾಗಿ |ಶಿವ| ಶರಣರ ಮಹಿಮೆಯು ಘನವಾಗಿ |
ಹರಡಿತು ದೇಶದ ದಿಶೆದಿಶೆಗಂ ಜನ ಜಂಗುಳಿ ಬರುವುದು ಸಾಲಾಗಿ ||೯೯||

ತಿಪ್ಪೇರುದ್ರನ ಜಾತ್ರೆಯ ಕಾಲದಿ ತಿಪ್ಪೇಶನ ಘನ ಮುಡುಪೆಂದು |
ತಪ್ಪದ ಲೋಣ ಕೊಬ್ಬರಿ ತಂದು |ಚಿತೆ| ಗರ್ಪಣೆಗೈವರು ತಾವ್ ನಿಂದು |
ತಿಪ್ಪೇಸ್ವಾಮಿಯು ಕೊಬ್ಬರಿ ದಹಿಸಲ್ ಮೆಚ್ಚಿಕೊಳ್ಳಲಾರೆಂದೆಂದು ||೧೦೦||

ಜನೋಪಕಾರವಾಗಿಹ ಕೊಬ್ಬರಿಯನ್ನು ದಹಿಸುವಂತಾ ಕೃತಿಯ |
ಜನೋಪಕಾರಕೆ ಘನಕಾಯ |ಅನು| ದಿನದಲಿ ಶ್ರಮಿಸಿದ ಮಹಾರಾಯ |
ಘನನಹ ತಿಪ್ಪೇರುದ್ರನು ಮೆಚ್ಚುವದುಂಟೇಂ ಯೋಚಿಸಲನ್ಯಾಯ ||೧೦೧||

ಕಾಷ್ಟಗಳಂದದಿ ಕೊಬ್ಬರಿ ಸುಡುವುದರೆಷ್ಟು ಪಡುವು ದನ್ಯಾಯವೆಲಾ |
ನೆಟ್ಟಗೆ ಯೋಚನೆ ಮಾಡಿರೆಲಾ |ಇದು| ಕೆಟು ಕೃತ್ಯವೆಂದರಿಯಿತೆಲಾ |
ಶ್ರೇಷ್ಠಸ್ವಾಮಿಯೀ ಕೃತಿಯಂ ಮಾಡುವುದು ಚಿತವೆಂದು ಪೇಳಿಲ್ಲವೆಲಾ ||೧೦೨||

ಕುರಿಯೊಂದುರುಳಲ್ ಸಾಲ್ಕುರಿಯುರುಳುವ ಪರಿಯಂತಾಗಿದೆ ಸತ್ಯವೆಲಾ |
ಅರಿತವರಿದಕಂ ಮೆಚ್ಚರೆಲಾ |ಕೊ| ಬ್ಬರಿಯ ಪ್ರಯೋಜನಕಾರಿಯಲಾ |
ಪರಿಡಿಸೆ ಕೊಬ್ಬರಿ ಸುಡಬೇಕೆನ್ನುತ ವೇದಶಾಸ್ತ್ರ ಪೇಳಿಲ್ಲವೆಲವಾ"[39] ||೧೦೩||

ಜಾತ್ರೆಯನ್ನು ಮಾಡಲು ತೇರನ್ನು ಸಿದ್ಧಪಡಿಸಿದರು. ರಥೋತ್ಸವದ ಜಾತ್ರೆ ಚಿತ್ತ ನಕ್ಷತ್ರದಂದು ನಡೆಯುತ್ತದೆ. ಜಾತ್ರೆಯ ಸಡಗರ ಹೊರಮಠ ಮತ್ತು ಒಳಮಠದ ಸುತ್ತ ಮುತ್ತೆಲ್ಲ ತುಂಬಿ ಹೋಗಿರುತ್ತದೆ. ಸಡಗರ ಸಂಭ್ರಮ ಜಾತ್ರೆಯ ಸಮಯದಲ್ಲಿ ತುಂಬಿರುತ್ತದೆ. ರಥೋತ್ಸವದ ದಿನ ರಾತ್ರಿ ಎಲ್ಲರು ಸೇರಿ ತೇರಿನ ಬೀದಿಯಲ್ಲಿ ಹಾಗೂ ಬಿಡಾರಗಳ ಬಳಿಯಲ್ಲಿ ಕೊಬ್ಬರಿಯನ್ನು ಸುಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಧರ್ಮದರ್ಶಿಗಳು ಕೊಬ್ಬರಿ ಸುಡುವುದು ಬೇಡ ಅದನ್ನು ದಾಸೋಹಕ್ಕೆ ನೀಡಿ ಎಂಬ ಸಲಹೆಯನ್ನು ನೀಡುತ್ತಾರೆ.

"ಮೊದಲೇ ಕೊಬ್ಬರಿ ಸುಡುವುದಕಾದಿಯ ಕಾರಣವನು ನೆರೆ ಪುಡುಕುತ್ತ |
ಅದನಂ ವಚನದಿ ಬರೆಯುತ್ತ |ಮ| ತ್ತದನಂ ಚರಿತೆಯಲಿರಿಸುತ್ತ |
ಅದನಂ ಪ್ರಕಟಿಸಲಾಗಿದೆ ಸ್ವಾಮಿಯ ಚರಿತೆಯನೋದಿರಿ ಜನಮೊತ್ತ ||೧೦೪||

ಹರಶರಣನು ಶ್ರೀ ತಿಪ್ಪೇರುದ್ರನು ಕರುಣದಿನುಡಿಸಿದ ಪರಿಯಂತೆ |
ಬರೆದನು ಭಕ್ತಿಯಲೋರಂತೆ |ಶಿವ| ಶರಣರು ಮೆಚ್ಚುವ ಪರಿಯಂತೆ |
ಸುರಚಿರಕವಿ ಸಕ್ರಪ್ಪಸ್ವಾಮಿ ರಾಯ್ದುರ್ಗ ಗ್ರಾಮದಲ್ಲಿಹನಂತೆ ||೧೦೫||

ಶ್ರೀ ತಿಪ್ಪೇಶನ ಚರಿತೆಯ ಲಾವಣಿ ಶತಕವು ಪ್ರೀತಿಲಿ ಬರೆದೋದೆ |
ಭೂತ ಪೀಡೆರೋಗದ ಬಾಧೆ |ಘನ| ಭೀತಿ ಭ್ರಾಂತಿ ಮೊದಲಹ ಭಾದೆ |
ಮಾತೇಂ ಸಮಸ್ತ ಕಷ್ಟಗಳಳಿವವು ಕೊನೆಗೆ ದೊರೆಯುವುದು ಗುರುಭೋದೆ ||೧೦೬||

ಮಂಗಲವಾಗಲಿ ಶ್ರೀ ತಿಪ್ಪೇಶಗೆ ಮಂಗಲ ಹರಿಹರ ಬ್ರಹ್ಮರಿಗೆ |
ಮಂಗಲ ಪರಶಿವ ಶರಣರಿಗೆ |ಜಯ| ಮಂಗಲವಿದನಂ ಪಠಿಪರಿಗೆ |
ಮಂಗಲವಾಗಲಿ ಲೋಕದ ಜನರಿಗೆ ಮದ್ಗುರು ಬಸವಂತೇಶನಿಗೆ ||೧೦೭||

ಮಂಗಲವಾಗಲಿ ವೇದಾಗಮ ಪೌರಾಣ ಶಾಸ್ತ್ರ ಕಾವ್ಯಂಗಳಿಗೆ |
ಮಂಗಲ ವರಕವಿ ಜನಗಲಿಗೆ |ಜಯ| ಮಂಗಲ ಜಯ ಭಾರತ ಬುವಿಗೆ |
ಮಂಗಲವಾಗಲಿ ದೇಶೋದ್ಧಾರಕ ಕಾರಕ ಗಾಂಧೀ ಮಹಾತ್ಮನಿಗೆ"[೨೨] ||೧೦೮||

**ಮಂಗಳಾರಿತಿ ಪದ**

"ಮಂಗಳವ ಪಾಡಿರೆ ಶೃಂಗಾರ ಶ್ರೀಗುರು ಬಸವನಿಗೆ
ಅಂಗ ಜಾದಹನನಿಗೆ ಮಂಗಳಾಂಗೆಯರೆಲ್ಲ ಕೂಡಿ
ಸಾಂಗವಾಗಿ ಬೆಳಗುವ ಬನ್ನಿ ||ಪ||
ಸೋಂಪಿನಾ ಕೆಂಪಯ್ಯಗೆ ಶಾಂತ ವೀರೇಶನಿಗೆ
ಬ್ರಾಂತಿ ತಾಳಂ ಮದ್ದನಸ್ವಾಮಿಗೆ
ಅಂತರಂಗ ಶುದ್ಧಿಯಿಂದ ಹಟ್ಟಿ ತಿಪ್ಪೇರುದ್ರನಿಗೆ ||ಪ||

ವಾರಿಜ ಕ್ರಿಯ ನಾರಿಯ ಶರಗು ಹರಿದು ಕೌಪವ ಧರಿಸಿದಗೆ
ಮುರುಕಲ್ಲೊಳು ಮಹಿಮೆ ತೋರಿದವರಿಗೆ
ಹರಿಯ ಜಸುರರೆಲ್ಲ ಸೇವಿಸುವ ಜಗದಾಶಗೆ ||ಪ||
ಶಿಶುವಿನ ಕರೆದೊಯ್ದು
ಎಸೆವ ಕರೆಯೊಳು ಪೊಕ್ಕಾತಗೆ
ಹಸುವನೆಬ್ಬಿಸಿ ಹಾಲ ಸವಿದಾತಗೆ
ವಸುದಿಯೊಳು ಶಿಖಾಪುರಿ ಬಸವಲಿಂಗ ಸ್ವಾಮಿಗೆ ಪ

ಕೊಟ್ಟೂರೇಶ್ವರರಿಗೆ ಸಂಬಧಿಸಿದ ಗೀತೆಗಳು
ಶರಣರ ನೆನದರ ಸರಗೀಯ ಇಡಿದ್ಹಾಂಗೆ
ಅರಳು ಮಲ್ಲಿಗೆ ಮುಡಿದ್ಹಾಂಗ ಕೊಟ್ಟರು
ಶರಣರ ನೆನೆಯೋ ನನ ಮನವೇ
ಕರುಣ ಬಂದರೆ ಕಾಯೋ ಮರಣ ಬಂದರೆ ಒಯ್ಯೋ
ಕರುಣೆ ಕೊಟ್ಟರು ಗುರುಬಸವ ಮಾ ಗುರುವೆ
ಕಡೆತನಕ ಕಾಯೋ ಅಭಿಮಾನ.
ಮಲ್ಲಿಗೆ ಇರುವಾಗ ಮುಳ್ಯಾಕೆ ಮುಡಿತಾಯ
ಕೊಟ್ಟರು ಗುರುಬಸವ ಇರುವಾಗ
ಕಲ್ಯಾಕ ಕೈಯ ಮುಗಿತಾಯ
ಬೇಡೆನಗೆ ಕೈಲಾಸ ನೀಡೆನೆಗೆ ಶಿವಭಕ್ತಿ
ಮಾಡುವೆನು ಸೇವೆ ಶಿವಮತಕ್ಕೆ ಶರಣರಿಗೆ
ನಾಡ ಕಾಯಕವೇ ಕೈಲಾಸ"[೨೦]

**ಗುರುಕೊಟ್ಟೂರು ಬಸವೇಶ್ವರರು ಜೀವಂತ ಯೋಗ ಸಮಾಧಿ ನಂತರ ನಡೆದ ಪವಾಡ ಅಥವಾ ಕೊಟ್ಟೂರು ಮುತ್ತಿಗಿ ಪದ**

"ಪರಮ ಶ್ರೀ ಗುರುರಾಯ ಕೊಟ್ಟೂರಧೀಶ್ವರನೇ |
ನೆರೆ ಬಾಗುಳಿಯ ಕುಲಕೆ ಶಿಖಾರತ್ನವೆಂದೆನಿಪ
ವರ ಸೋಮಶೇಖರಂ ಅಭಯ ಹಸ್ತವನಿತ್ತು
ಕರಮುರಾರಿಯ ವರ್ಧಿಸಿದೆ ಭಲಾ ಭಲಾ ||ಪದ||

ಹರಪುರದ ಸಂಸ್ಥಾನ ನೆರೆ ನಿನ್ನದೆಂದೆನಿಸಿ
ಯಿರುತಿರಲು ಕೊಟ್ಟರ ಪುರವನಾನಾಲುತ್ತ
ಪರಮ ಸಿದ್ಧೋಜಿ ಮುರಾರಿಯ ದಂಡು ಬರಲಾಪುರವ ತಲ್ಲಣಿಸಿತಾಗ

ತರುಗು ಗಜ ಸಾವಿರಾರು ಸಾವಿರವು ಕಾಲಾಳು
ನೆರೆ ಹತ್ತು ಸಾವಿರವು ನೂರೆಂಟು ರಥ ಸಹಿತ
ಮೊರೆದು ಘರ್ಜಿಸುತ್ತ ಫಿರಂಗಿ ಪೆಟ್ಟಲು ಬಾಣಮಕರ ಬಿಚ್ಚಿಯ ಬಂದವು ||೧||

ಘುಡಿ ಘುಡಿಸಿ ಸಿದ್ಧೋಜಿ ಮುರಾರಿ ಈರ್ವರು
ಕಡು ಹರುಷದಿಂದ ಗಜವೇರಿ ತಾವ್ಪರು ತಿರಲು
ಹೊಡೆವ ಭೇರಿಯು ಕಹಳೆ ಭೊರೆಂಬ ಧ್ವನಿಯಿಂದ ಪಡುಭಟರು ಉಗ್ಗಡಿಸುತಾ

ಎಡಗಾಲು ಮುತ್ತಿನ ಪೆಂಡೆ ಮುಂಗಲಿ ಗೂಟ
ಮುಡಿದ ತುರಾಯಿ ಎಳೆ ಮೀಸೆಯನು ತಿದ್ದುತ
ಹಿಡಿ ಸೋಮಶೇಖರನ ಎದೆಯ ಗಂಟಲು ಗಾಣ ಎಂಬ ಛತ್ರವನು ಹಿಡಿಸಿ ||೨||

ಯೆಡ ಬಲದಿ ನಿಶಾನೆ ಚತುರಂಗ ಮಾರ್ಬಲ ಕೂಡಿ
ನಡೆದು ಬಂದಿತು ದಂಡು ರುದಿರೋದ್ಗಾರಿ ಸಂವತ್ಸರದಲಿ
ಕಡು ಮಾಘ ಬಹುಳ ಅಷ್ಟಮಿಯು ಶನಿವಾರದೊಳು ಜಡಿದು ಜಾಂಡೇವು ನಿಂತವು

ಪೋಡವಿಪತಿ ಸೋಮಶೇಖರ ಕೇಳಿ ತಲ್ಲಣಿಸಿ
ನಡುಪ್ಯಾಟಿ ಕೊಟ್ಯರುಯನ್ನ ಪ್ರಾಣವೆಯೆಂದು
ಒಡೆಯ ಕೊಟ್ಟೂರೇಶ ನೀನೆಗತಿಯೆಂದೆನುತ ಹೊರದನು ಚಿಂತೆಯೊಳಗೆ"[3] ||೩||

ಬಾಗಳಿಯ ಅರಸನಾದ ಸೋಮಶೇಖರರಾಜನ ಮೇಲೆ ಸಿದ್ಧೋಜಿಮುರಾರಿಯ ಸೈನ್ಯ ಕುದುರೆ, ಆನೆ, ಸಾವಿರಾರು ಸೈನಿಕರ ಸಮೇತದ ಯುದ್ಧಕ್ಕೆ ದಂಡು ಬಂತು. ಯುದ್ಧದ ಕಹಳೆ ಭೋರೆಂದು ಊದಿದಾಗ ಬಾಗಳಿಯ ಅರಸನಿಗೆ ಶತ್ರುಗಳಿಂದ ಹೇಗೆ ರಕ್ಷಣೆ ಪಡೆದು ಪಾಳೆಯಪಟ್ಟನ್ನು ರಕ್ಷಿಸುವುದು ಹೇಗೆ ಎಂದು ಯೋಚಿಸಿದಾಗ ಬಾಗಳಿ ಅರಸ ಕೊಟ್ಟೂರಿಗೆ ಬಂದು ಗುರುಬಸವರಲ್ಲಿ ಮೊರೆಯಿಟ್ಟನು ಶತ್ರುಗಳಿಂದ ನಮ್ಮ ಸೈನ್ಯವನ್ನು ರಕ್ಷಿಸು ಎಂದು ಬೇಡಿಕೊಂಡನು.

"ಪುರುದ ಹಿರಿಯರು ಮಂತ್ರಿ ದಳವಾಯಿಗಳ ಕರೆಸಿ
ಗುರಿಕಾರ ಕೈ ಜೀತ ಬೆಳ್ಳಕಟ್ಟಿನ ಮಂದಿ
ಮೆರೆವ ಕೆಮ್ಮೀಸೆ ಭೋರ್ಗರೆವ ದೊಡ್ಡರಾವುತರ ಜಟ್ಟಿಮಲ್ಲರ ಕರೆಸುತಾ

ನೆರೆಯನ್ನ ದೇವರಾ ಮನೆಗೆ ಮುರಾರಿಯೂ
ಇರದೆ ಮುತ್ತಿಗೆ ಮಾಡಿಕೊಂಡಿಹನು ಹೇಗೆಂದು
ದೊರೆ ಬಸವರಾಜೇಂದ್ರ ಎಮಗಪ್ಪಗೆ ಕೊಡುಯೆಂದು ತೊಡೆಯ ಚಪ್ಪರಿಸಿ ನೀಲಲೂ ||೪||

ಹೀಗಿರಲು ಬಸವೇಂದ್ರ ಇತ್ತ ಕೊಟ್ಟೂರೊಳಗೆ
ಖೇಗದಿಂ ಗುರು ಹಿರಿಯ ಬಣಕಾರರುಗಳೆಲ್ಲ
ಆಗಮ ಬಲ್ಲಂಥ ಶಾಸ್ತ್ರ ಪುರೋಹಿತರು ಶಾನುಭೋಗರು ಗೌಡರು

ಈಗ ಬಂದಿತು ನಮಗೆ ಮರಣ ಪ್ರಾಪ್ತಿಯು ಎಂದು
ಸಾಗಿ ಬಂದರು ಸ್ವಾಮಿ ಮರಕೆಯೆಲ್ಲರು ಬೇಗ
ನಾಗಭೂಷಣ ಲಿಂಗ ಜಂಗಮವೆ ಬಲಗಡೆಯ ಪುಷ್ಪನ ಮಗಾವುದೆಂದು ||೫||

ಎಂದ ಮಾತಿಗೆ ಸ್ವಾಮಿ ಮಂಡ ಬಲಗಡೆ ಪುಷ್ಪ
ಚಂದದಿದೊಂದಕ್ಕೆ ನೂರಾಗಿ ಚೆಲ್ಲಿದವೂ
ಇಂದು ಬಸವನಿಗೆ ಜಯವು ಮುರಾರಿಗಪ ಜಯವು ಎಂದು ಶ್ರೀಮುಖ ಬರೆದರೂ

ತಂದೆ ಬಾಗುಳಿ ಭೂಪ ನಿಮಗೆ ಭಿನ್ನಹವೆಂದು
ಬಂದ ಶ್ರೀ ಮುಖವನ್ನು ನೋಡಿ ತಲೆಯೊಳಗಿಟ್ಟು
ಇಂದುಧರ ಕೊಟ್ಟರ ಪುರವಾಸ ನಿನೇಗತಿ ತಂದೆ ಶಂಕರ ಕರುಣಿಸೋ ||೬||

ಇತ್ತಲಾ ಸಿದ್ಧೋಜಿ ಮುರಾರಿ ಮುತ್ತಿಗೆ ಹಾಕಿ
ಸುತ್ತುದಾರಿಯ ಕಾಯ್ದು ಸವಾರಿ ಕುದುರೆಗಳಿಟ್ಟು
ಎತ್ತೆತ್ತ ನೋಡಿದರೆ ಬಾಣ ಬತ್ತಳಿಕೆಯಿಂದ ಹೊಡೆವ ಫಿರಂಗಿಯಿಂದ
ಸತ್ತ ಕಾಲಾಳು ಕೋವಿಯರ ಸಂಗಡಿಗರು

ಎತ್ತತ್ತ ಹೊಡೆವ ಮಕರ ಬಿದ್ದ ಗುಂಡುಗಳಿಂದಾ
ಒತ್ತಿ ನೂಕಿದರು ಮೂರು ಕಲ್ಲೆಳಗಾಯ್ತು ಪಟ್ಟಣವು ಬೊಬ್ಬಿಡುತಲಾ ||೭||
ತಳ್ಳಿ ಸುರಂಗವ ಕೊರೆದು ಜೀರು ಮುತ್ತಿಗೆ ಹಾಕಿ
ಘುಳಿಲನಗುಳಂ ದಾಂಟಿ ಕೋಟೆ ಕೊತ್ತಲ ಬುಡಕೆ
ಗೆಲುವಿಂದ ತೆಳಿವತ್ತಿ ಸುರಂಗವನೆ ಕೊರೆದು ಕೊತ್ತಳವ ಸಾರುವುದಕೆ”[೩೦]

ಬಾಗಳಿಯ ಅರಸ ಸೋಮಶೇಖರ ಯುದ್ಧಕ್ಕೆ ಬೇರೆ ಕಡೆಯಿಂದ ಜಟ್ಟಿ ಮಲ್ಲರು, ದಳವಾಯಿಗಳನ್ನು ಕರೆದುಕೊಂಡು ಕೊಟ್ಟೂರಿಗೆ ಬಂದರು. ನಮ್ಮನ್ನು ರಕ್ಷಿಸು ತಂದೆ ಎಂದು ಬೇಡಿಕೊಂಡರು. ಕೊಟ್ಟೂರೇಶ್ವರನ ಮುಡಿಯಿಂದ ಬಲಗಡೆಯ ಪುಷ್ಪ ಒಂದಕ್ಕೆ ನೂರಾಗಿ ಬಿದ್ದವು. ಇದನ್ನು ಕಂಡಂತಹ ಸೋಮಶೇಖರನಿಗೆ ಮಹಾದಾನಂದವಾಯಿತು. ಸ್ವಾಮಿ ನನಗೆ ಯುದ್ಧಕ್ಕೆ ಹೋಗಲು ಅಪ್ಪಣೆ ಕೊಡಿ ಎಂದು ಬೇಡಿಕೊಳ್ಳುತ್ತಾನೆ.

“ಬಳಲಿ ಗ್ರಾಮವು ರಾಜ ತಲ್ಲಣಿಸಿ ಚಿಂತೆಯೊಳು
ಮುಳುಗಿ ಬಾಗುಳಿ ಭೂಪ ಘುಳಿ ಘುಳಿಗೆ ಸುದ್ದಿಯನು

ಕೆಳ ಭಂಟ ಕಾಲಾರಿ ತೋರ ಕುದುರೆಗಳಿಂದ ತರಿಸಿ ತಲ್ಲಣ ಗೊಂಬುತಾ ||೮||

ಹಸಿವು ನಿದ್ರೆ, ನೀರಡಿಕೆ ಇಲ್ಲದಿರೆ ಸ್ವಪ್ನದೊಳು
ನಸುಗಾವಿ ಭಸಿತ ರುದ್ರಾಕ್ಷಿ, ಸಜ್ಜೆಯ ವಸ್ತ್ರ
ಭಸಿ ತಾಂಗದಿಂ ಬಂದು ಎಲೆ ಕಂದ ಚಿಂತೆ ನಿನಗೇಕೆ ನಾನಿರ್ದ ಬಳಿಕ
ಅ ಸಹಾಯ ಶರಣಾದವರ ನೀ ಕಳುಹಲ್ಕೆ
ಕುಶಲದಿಂದ ವರಕೊಂಡ್ಯೊಯಿದು ಕೋಟೆಯೊಳಗೆ
ಹಸವಾಗಿ ನಾನವರ ಸಲಹುವೆಂದೆನಲು, ಎಚ್ಚೆತ್ತು ಕಣ್ದೆರದನೂ ||೯||

ಭರದಿಂದ ಎದ್ದುಪೇಳಿದ ತನ್ನ ಸತಿಯಳಿಗೆ
ಹರಹರಾ ಈ ಸ್ವಪ್ನ ಸತೆಯಲ್ಲ ವೆಂದೆನುತ
ಗುರುಬಸವ ಲಿಂಗೇಶ ಸತ್ತೆಮ್ಮೆ ಕ್ಷೀರವನು ನಾರಿ ಶರಗಿನ ಕೌಪವಾ
ಹರುಷದಿಂ ಧರಿಸಲು ನಾರಿ ಶರಣರ ಚಿಗಿತಂ
ತ್ವರಿತ ದಿಂದೆಮ್ಮೆಯ ಅಸು ಬರಲು ಮಹಿಮೆಯನು
ಮೆರೆಯಲಿಲ್ಲವೆಯೆಂದು ಪುರುಷನೋಳ್ ಪೇಳಿದೆಳು ಸತ್ಯವಿದು ರಾಜೇಂದ್ರನೇ ||೧೦||

ನೀನೆಗತಿ, ನೀನೆ ಮತಿ, ನೀನೆಪಿತ ನೀನೆಹಿತ
ನೀನೆಗುರು ನೀದೇವ ನೀಲಿಂಗ ಜಂಗಮವು
ನಾನೆ ಬಂಧುವರ್ಗ ನೀನೆಯೆನ್ನಯ ಪುರುಷ ನಾನೇ ಸತಿ ಕೊಟ್ಟರೇಶ
ನೀ ನೆನ್ನ ಬಿರುದನ್ನು ಹಾನಿಯನು ಮಾಡಿದರೆ
ನಾನಿದಕೆ ಚಿಂತೆ ಪಡುವವನಲ್ಲವೆಂದಾಗ
ತಾನು ತನ್ನಯ ಬಟರು ಐನೂರು ಆಳುಗಳ ಕೆಳಹಲ್ಕೆ ನುಡಿದುದಾಗ"[೨] ||೧೧||

ಯುದ್ಧದ ಭೀತಿಯಲ್ಲಿ ಬಸವಳಿದಿರುವ ಅರಸ ಹಸಿವು, ನಿದ್ರೆ, ನೀರಡಿಕೆಯಿಲ್ಲದೆ ಯೋಚಿಸುತ್ತಿರುವಾಗ ಕೊಟ್ಟೂರು ಬಸವೇಶ ಅವರಿಗೆ ಯಾಕೆ ಚಿಂತೆ ಮಾಡುವೆ ನಾನೀರುವಾಗ. ಯುದ್ಧದ ಭೀತಿಯಿಂದ ಇಡೀ ಬಾಗಳಿ ಗ್ರಾಮ ತಲ್ಲಣಿಸಿ ಹೋದಾಗ ಗುರುಬಸವನಲ್ಲಿ ಮೊರೆಯಿಟ್ಟು, ನೀನೆಗತಿ, ಮಾತಾ, ಪಿತ, ಗುರು, ದೇವ, ಲಿಂಗ, ಜಂಗಮ, ನೀನೇ ಬಂದು ಬಳಗ, ನೀನೆ ಸರ್ವಸ್ವ ನೀನೆ ನನ್ನ ಕೈಹಿಡಿದು ಕಾಪಾಡು ಎಂದು ಕೊಟ್ಟೂರೇಶನನ್ನು ಬೇಡಿಕೊಂಡರು.

"ನೂರಾನೆ ಇಪ್ಪತ್ತು ಸಾವಿರ ತುರಂಗಮಂ
ಭೋರ್ರೈಸಿ ಬರುತಿರಲು ಕಾಲಾಳು ಗಳನೆಲ್ಲ
ಓರಂತೆ ಎರಡು ಹರದಾರಿಯಲಿ ನಿಂತಾಗ ಮುತ್ತಿರ್ದ ಬಲವ ಕಂಡೂ

ಬೋರೆಂಬುತಿರೆ ಕುದಿಗೊಂಡು ಕೊಟ್ಟರೇಶಾ
ಸಾರಿದವು ನಿಮ್ಮ ಪಾದಕ್ಕೆ ನೀನೇ ಗತಿಯೆಂದು
ಏರಿಸಿ ಬೀಲ್ಲಬಾಣವು ಗಂಡು ಹೊಡೆಯಲ್ಕೆ ಒಂದಕ್ಕೆ ನೂರಾಗಿ ಬಂದು ||೧೨||

ಯರೆಹಳ್ಳಿ, ಚಪ್ಪರದಹಳ್ಳಿ, ಸಾದದಿನ್ನಿ ತೆರಪಿಲ್ಲ ನೋಡಿದರೆ
ವರ ಸೋಮಶೇಖರನ ಪರಿವಾರ ಕಾಲಾಳು ಗಜ
ತುರುಗ ಮೇಲರಕ ರಣಭೇರಿ ಕೊಂಬು ಕೂಗೆ
ಪರವಾದಿಸಿದ್ಧೋಜಿ ಮುರಾರಿಯದೆ ಶೂಲ
ಹರಪುರದ ದೊರೆ ಬಸವ ಬರುತ ತಾನೆ ಕಡೆಗಾಗಿ
ಬರ ಸೆಳೆದು ಬಾಣಗಳ ಬಿಡಲು ಆರ್ಭಟಿಸುತ್ತಾ ವೈರಿಗಳ ಶಿರವ ತರಿದೂ ||೧೩||

ತಾಕುತಿರೆ ತೊಮ್ಮೊಳಗೆ ತಾವೆ ಕಡಿದಾಡುತ್ತ
ನೂಕು ನುಗ್ಗಾಗೆ ಕಾವಳದೊಳಗೆ ಬಡಿದಾಡಿ |
ಭೀಕರದೆ ಬಿಟ್ಟು ಹೊಡೆಯಲ್ಕೆ ಹಾದಿಯ ಬಿಡಲು ನಡೆದು ಪೊಕ್ಕುದು ಕೋಟಿಯಾ ||
ಕಮಲಸುಖ ಬಂದನಾ ವ್ಯಾಳ್ಯ ಪ್ರಭ ದೋರಿ
ನೂಕಿ ಬಂದಿಹ ಕತ್ತಲೆಯ ಪರಿಯ ದಂಡಾಗ
ಜೋಕೆಯಂ ಕೋಟೆ ಮೇಲಕೆ ನೋಡೆ ತನಗೊಬ್ಬ ಜಂಗಮಯ್ಯನ ಸತ್ತಿಗೆ ||೧೪||

ಹೊರಗಿರುವ ಪಾಜಿಂಗೆ ಪರಮ ಜಂಗಮ ಮೂರ್ತಿ
ಪುರುಷಗೊಬ್ಬೊಬ್ಬ ಜಂಗಮನಾಗಿ ಕಾನಿತಿರೆ
ಕರಿಗೊರಲ ತ್ರಿಶೂಲ ಪುರಿಗಣ್ಣು ತಲೆಬೋಳು ಕಾವಿಕಾಷಾಯಾಮ ಬರವನುಟ್ಟು
ಗುರುಬಸವಲಿಮಗ ತಾ ಹುಲಿಯ ವಾಹನವೇ
ಕರದಲ್ಲಿ ಮಿಡಿನಾಗರ ಬೆತ್ತ ಪಿಡಕೊಮಡು
ತುರುಕರನು ಹೊಡೆದೋಡಿಸುತ್ತಾ ಸರ್ವದಲಿ ಮೆರೆದನು ಚಿನ್ಮಯ ರೂಪನೂ ||೧೫||

ಮರುದಿವಸ ರಾತ್ರಿಯೊಳು ಮರೆತು ಮಲಗಲು ದವುಡು
ಚರಣದೊಳು ಪಾವುಗೆಯ ಕರದಿ ತ್ರಿಶೂಲವಂ
ಮಿರುಗಿತಿಹ ಕಾವಿಯನು ಧರಿಸಿ ಎಲ್ಲರ ಮುಂದೆ ನಿಮತು ಹಹ ಎಂಬುತಾ
ನೆರೆ ಮುರಾರಿಯ ಪಟ್ಟದಾನೆ ಹೆದರಿಯೆ ಸತ್ತು
ತುರಗ ಕಾಲಾಳು ಲಯವಾದದ್ದು ಗಣನಿಲ್ಲ
ಬಿರುದಿನ ನಗಾರಿ ನಿಶಾನಿ ಹೊತ್ತಿಹ ಒಂಟೆ ನಡೆದು ಪೊಕ್ಕುದು ಕೊಂಟೆಯ ||೧೬||

ದಂಡಿನೊಳು ಸರ್ಪ ಹುಲಿಮಯವಾಗಿ ಜನ ಬೆದರಿ
ಮಂಡುಗಪ್ಪೆಯ ಚೇಳು ಕೆಂಹ ಜಿಗವು ಕಡಿ ಕಡಿದು
ದಂಡೆಲ್ಲ ಹಿಂಡೊಡೆದು ಗಿಡಕೊಂದು ಹೆನವಾಗಿ ಬಾಯಿ ಬಿಟ್ಟಳು ತರ್ಕಿರಲಾ
ಮಂಡಲಾದೀಪ ಸಿದ್ಧೋಜಿ ಮುರಾರಿ ಬಾಯೊಳಗೆ
ಕೆಂಡ ಹೊಗೆ ಸುರಿದು ಒಡಲ ಕಿಚ್ಚುವುತ್ತ
ರುಂಗಳೂ ನೆಲದೊಳಗೆ ಹೊರಳುತ್ತ ಮದದಾನೆ ಪುರವ ಪಕ್ಕಿತು ಬೇಗದಾ"[೩೨] ||೧೭||

ಕೊಟ್ಟೂರೇಶ್ವರ, ಸೋಮಶೇಖರನ ಪರವಾಗಿ ಯುದ್ಧಕ್ಕೆ ಹೋಗುತ್ತಾರೆ. ಶತ್ರುಗಳನ್ನು ಹಿಮ್ಮೆಟ್ಟಿಸಲು, ಸರ್ಪ, ಹುಲಿ, ಚೇಳು, ಕೆಂಜಿಗೆಗಳು ಯುದ್ಧ ಭೂಮಿಯಲ್ಲಿ ಅವತರಿಸುತ್ತವೆ. ಯುದ್ಧಕ್ಕೆ ಬಂದಂತಹ ಶತ್ರುಪಡೆಗಳು ಜೀವ ಬದುಕಿದರೆ ಸಾಕೆಂದು ಯುದ್ಧ ಭೂಮಿಯಿಂದ ಕಾಲ್ತೆಗೆದರು.

"ಇನ್ನು ತನಗೆ ಸಾಧಯವಲ್ಲೆಂದು ಮೆದಕೇರಿ
ಯನ್ನು ಕರಕೊಂಡು ಬಂದನು ಭಾಷೆಯಂ ಕೊಟ್ಟ
ನಿನ್ನದು ಕೋಂಟೆಯನ್ನದು ಸುಲಿಗೆ ಈ ಕ್ಷಣವೆ ದಂಡೆಲ್ಲ ಮುಳುಗಿದರೆ ಬಿಡನು
ಚೆನ್ನಿಗನು ಮೆದಕೇರಿ ಭೂಪ ಆನೆಯ ಮೇಲಾ
ತನ್ನ ಮೂರ್ಬಲವು ಹನ್ನೆರಡು ಸಾವಿರ ಮಾಡಿ
ಪನ್ನಗಾಧರ ಸೋಮಲಿಂಗನೆಡ ಬಲ ಬರಲು ಆನೆ ಮುಗ್ಗರಿಸಿ ನಿಲ್ಲಲೂ ||೧೮||

ಪಟ್ಟದಾನೆಯಿ ನಿಂತು ಸೊಂಡಿಯೊಳು ಮಂಣನು
ಯಿಟ್ಟು ಚೌದಾಂಗದೊಳಗೆಲ್ಲ ಧೂಳಿಯ ತುಂಬಲು
ಪಟ್ಟದ ಮೆದಕೇರಿ ಅಪಶಕುನ ವೆಂದೆನುತ ತಿಳಿದು ಮನದೊಳು ಗಜವನೂ
ಕುಟ್ಟಿ ಮುಂದಕೆ ಹೊಡೆಯೆ ಜವನಿಂದ ಬರುತಿರಲು
ತೊಟ್ಟಿರ್ದಮಣಿ ಖಚಿತ ಪದಕ ಮುತ್ತಿನ ಸರವು
ತಟ್ಟನೆ ಕತ್ತರಿಸಿ ಮುಂದೆಸೆಗೆ ಬೀಳಲತಿ ಕಷ್ಟ ಬರುವುದು ನಮಗಿದೂ ||೧೯||

ಚನ್ನೆಸೆವ ಕಾಲಾಳು ಮಂದಿ ಕುದುರೆಯ ಸಹಿತ
ಮನ್ನಣೆಯ ಪಟು ಭಟರು, ರಾಹುತರು ಮೊದಲಾಗಿ
ಇನ್ನು ಸೆರೆ ಸೂರೆಯನ್ನು ಎಕ ತಿಗ್ಗೆಗೆ ಹತ್ತಿ ಕಡಿದು ತೆಗೆವೆನು ಯಮತಲೀ
ಇನ್ನುಳಿಯಲೆಂದು ಮದ್ದಂ ಸುರಿಯೆ ಬುಜ್ಜಣಿಕೆ
ಉನ್ನತ ಚಾಲಗಳ ಹಾಕಿ ಜಾವಿಗೆಯನ್ನು ಕೊಡುವೆನೆಂಬುವ ಸಮಯದಿ"[೩೩] ||೨೦||

ಸಿದ್ದೋಜಿ ಮುರಾರಿಯು ಜೊತೆ ಯುದ್ಧ ಮಾಡಲು ಗುರುಬಸವನು ಬರುತ್ತಿರಲು ಸರ್ಪಹುಲಿಯಾಗಿ ಬಂದಾಗ ಅಲ್ಲಿ ಸೇರಿದ ಜನ ಹೆದರಿ ಹೌಹಾರಿದರು. ಇವರನ್ನು ಸೋಲಿಸಲು ಸಾಧ್ಯವಿಲ್ಲ ಎಂದು ಅರಿತ ಸಿದ್ಧೋಜಿ ಮುರಾರಿಯು ಮದಕರಿಯನ್ನು ಸಹಾಯಕ್ಕೆ ಕರೆತರುತ್ತಾನೆ. ಬರುವ ಮಾರ್ಗ ಮಧ್ಯೆದಲ್ಲಿ ಹಲವಾರು ಅಪಶಕುನಗಳು ನಡೆಯುತ್ತವೆ. ಮದಕರಿಯು ತೊಟ್ಟಿದ್ದಮಣಿ ಖಚಿತ ಪದಕದ ಮುತ್ತಿನ ಹಾರವು ಹರಿದು

ಬೀಳುತ್ತದೆ. ಹೀಗೆ ಹಲವು ರೀತಿಯ ಅಪಶಕುನ ನಡೆಯುತ್ತವೆ. ಗುರುಬಸವನ ದಯೆ ಬಾಗಳಿ ಭೂಪ ಸೋಮಶೇಖರ ರಾಜನಿಗೆ ಇರುವುದರಿಂದ ಸಿದ್ದೋಜಿ ಮುರಾರಿಯ ಸೋಲನ್ನು ಖಚಿತಪಡಿಸುತ್ತವೆ.

"ಟಿಂಕ ಮೇಘಂ ನಡೆದು ಶಂಕರನ ದೆಸೆ ಮಿಂಚೆ |
ಭೋಂಕನೆ ಗುಡುಗುಟ್ಟಿ ಮಳೆ ಸುರಿದು ನೀರ್ವರಿಯೆ
ತಾಂ ಕಂಡು ಬಳಗಿರ್ದ ಜನರೆಲ್ಲ ಬಸವೇಶ ನಿನ್ನ ಮಹಿಮೆಯು ಎನುತಲೀ
ಮುಂ ಕಂಡು ಒಪ್ಪತಳಿ ಮೋರಿ ಕಂಡಿಯ ಕೊರೆದು
ತಾಂಕನುತಿಹ ನೀರ ತಿರುಗಿ ಬಿಡಲಾಗಳುಂ
ಜೋಕಿಸುತೆ ನೆಲಗಚ್ಚ, ಕೆಟ್ಟುಮಾಳಿಗೆ ಮುರಿದು ನೀರ್ವರಿದು ಸೋರಿತಲ್ಲಾ ||೨೧||

ಎಲ್ಲಿ ನೋಡಲು ನಾರು ಮಡು ತುಂಬಿ ಕೆರೆ ತುಂಬಿ
ಎಲ್ಲಿ ನೋಡಲು ತುಂಬಿ ಡೇರೇದ ಒಳಗಲ್ಲ
ಎಲ್ಲಿ ನೋಡಲು ಮುಂದು ನೀರಾಗಿ ಹರಿವುತಿರೆ ಬಿಡು ಮುತ್ತಿಗೆಯ ನಡೆಯುಂದನೂ
ಗೆಲ್ವುದಕೆ ಸಾಮರ್ಥ್ಯದಲ್ಲಿಲ್ಲ ನೀವಾಗ
ಮೆಲ್ಲನೆ ಪ್ರಾಣವನ್ನುಳುಹಿ ಕೊಂಡರೆ ಲೇಸು
ಸೊಲ್ಲಿಡಲು ಬಾಯಲ್ಲದುಂದದಲಿ ಮಾಡಿದನು ಎಲ್ಲರ ದೇವರ ದೇವನೂ ||೨೨||

ಎಲ್ಲಿ ನೋಡಲು ಬಿಕ್ಷವೆಂಬ ಶಬ್ದಗಳಲ್ಲಿ
ಯಲ್ಲಿ ನೋಡಲು ದಂಡು ನೀಳಗಲ್ಲ ಜಂಗಮವು |
ಯಲ್ಲಿ ನೋಡಲು ನಾ ಬೆತ್ತ ಹೆಬ್ಬುಲಿ ಮಯವು ಘನವಾಗಲದಕೆ ಬೆದರೀ ||
ನಿಲ್ಲಲಾರದೆ ಪೌಜು ತಮತಮಗೆ ಓಡುತಿರೆ |
ತಲ್ಲಣಿಸುತಾಗ ಮೆದಕೇರಿ ಮುರಾರಿಯು |
ಮಲ್ಲರೆಲ್ಲರು ತ್ರಾಹಿ ತ್ರಾಹಿ ಭೂಪೆನುತಾಗ ಗೆಲ್ಲವನು ಎದಿರುಕೊಳ್ಳತಾ ||೨೩||

ತ್ರಾಹಿ ಕೊಟ್ಟೂರೇಶ ತ್ರಾಹಿ ಭಕ್ತರ ಘೋಷ
ತ್ರಾಹಿ ಸಜ್ಜನ ಸಂಗ ತ್ರಾಹಿ ಮೂಜಗಲಿಂಗ
ತ್ರಾಹಿ ಯೆನ್ನೊಡೆಯನೆ ತ್ರಾಹಿ ಮುನಿಗಣವರನೆ ನಿತ್ರಾಹಿಕೊಟ್ಟೂರ ಬಸವಾ
ತ್ರಾಹಿ ನಾವಾಗ ಬಂದುದುತಪ್ಪು ಪಾಲಿಸೈ
ತ್ರಾಹಿ ಬಾಗುಳಿ ಭೂಪ ಗೊರವನಿತ್ತವಿರಕ್ತ
ತ್ರಾಹಿ ಮಹದಾತ ದಿಲ್ಲಿಯ ಪಾಚು ಗೋರವಿತ್ತ ಸತ್ತಮಗನಾಡಿಸಿದೆಲಾ ||೨೪||

ಜಯತು ಶ್ರೀ ಗುರುರಾಯ ಜಯತು ಜಂಗಮರಾಯ
ಜಯತು ಮದನಾರಿ ಮುಪ್ಪುರ ವೈರಿ ಘನಲಿಂಗ
ಜಯತು ತೋಂಟದ ಸಿದ್ಧಲಿಂಗ ಷಟುಸ್ಥಾಲ ಬ್ರಹ್ಮ ಜಯತು ಸರ್ವಾಂಗ ಲಿಂಗಾ
ಜಯತು ಬಾಗುಳೀ ಸೋಮಶೇಖರನ ಭಕ್ತಿಯನು

ಜಯದಿಂದ ಜಂಗಮಕೆ ದಾಸೋಹ ಮಾಡುತಲೀ

ಜಯತೆಂಬ ತಪ್ಪಗಾಣೇಕೆಯಿಟ್ಟು ಮುರಾರಿ ಮೆದಕೇರಿ ಸಹಿತಂಪೋದು"[೪೪] ||೨೫||

ಸಿದ್ದೋಜಿ ಮುರಾರಿಯ ಪರವಾಗಿ ಬಂದಂತಹ ಮದಕರಿ ಭೂಪ ಸೋಮಶೇಖರನ ಪರವಾಗಿ ಸೋತು ಹಿಮ್ಮೆಟ್ಟಿದ್ದನ್ನು ಹಾಡಿದ್ದಾರೆ. ಬಾಗಳಿಯ ಅರಸನ ಯುದ್ಧದ ವಿವರವನ್ನು ಕಟ್ಟಿಕೊಡುವಂತಹ ಗೀತೆಯಾಗಿದೆ.

**ಕೋಲಾಟದ ಪದ**

ಶಹರಾದಿ ಶಹರ ಇದು ದೊಡ್ಡ ಶಹರ ಮೋಜಿನ ಕೊಟ್ಟೂರಾ

ಕೋಟೆ ಪೇಟೆಗೆ ಮೂರುತಿಯಾಗನ ಕೊಟ್ಟೂರೇಶ ದೇವರ ||ಪ||

ಗೌಡ ಶಾನುಭೋಗ ಬುದ್ಧಿವಂತ್ರು ಕೂಡಿ ಕರಸ್ಯಾರು ರೈತರುನಾ

ಏಳು ನೆಲೆಯಾ ತೇರು ಕಟ್ಟಿಸಿ ನಿಲಿಸ್ಯಾರು ಬುದ್ದಿವಂತ ಬಡಿಗ್ಯಾರು

ಹೇ ತೇರಿನ ಮ್ಯಾಲೆ ಕಳಸ ನೋಡಿದರು ಥಳ ಥಳ ಬಂಗಾರ

ತೇರಿನ ಸುತ್ತಮುತ್ತ ಪಟಾಕ್ಷಿನಚ್ಚಾರು ಹಸಿರು ಹಳದಿ ಕೆಂಪ

ತೇರಿನ ಒಳಗೆ ಮೂರುತಿಯಾಗನೆ ಕೊಟ್ಟೂರೇಶ ದೇವರ

ಹೊಳಿಯಾ ದಿಕ್ಕಿಗೆ ತೇರು ಸಾಗೆತ್ರಿ ಬಹಳ ಸುಂದಾರಾ

ತೇರಿನ ಸುತ್ತಮುತ್ತ ಶಂಖು ಜಾಗಟೆಗೆ ದಾಸರು ಕಡಿಮಿಲ್ಲಾ

ತೇರಿನ ಸುತ್ತಮುತ್ತ ಶಂಖು ಜಾಗಟಿಗೆ ದಾಸರು ಕಡಿಮಿಲ್ಲಾ

ಶಹರಾದಿ ಶಹರ ಇದು ದೊಡ್ಡ ಶಹರ ಮೋಜಿನ ಕೋಟ್ಟೂರಾ

ಕೋಟೆ ಪೇಟೆಗೆ ಮೂರುತಿಯಾಗನೆ ಕೊಟ್ಟರೇಶ ದೇವರ

ಝಿಂಜಾಂತರ ಝಿಂಜಾಂ...

ಕೊಟ್ಟೂರಿನಲ್ಲಿ ನೆಲೆನಿಂತ ಸ್ವಾಮಿಯ ರಥೋತ್ಸವ ಮಾಡಲು ಗೌಡ್ರನ್ನು ಕರೆಸಿ ರಥವನ್ನು ನಡೆಸಲು ಅನುಮತಿ ಪಡೆಯುವುದು. ರಥೋತ್ಸವ ನಡೆಯುವ ಸಂದರ್ಭದಲ್ಲಿ ತೇರಿನ ಕಳಸದ ವೈಭವವನ್ನು ಕುರಿತು ಹಾಡಿದ್ದಾರೆ. ರಥೋತ್ಸವ ನಡೆಯುವ ಸಂದರ್ಭದಲ್ಲಿ ಶಂಖ, ಜಾಗಟೆ ಹಿಡಿದು ಭಾರಿಸುವ ದಾಸರೆಲ್ಲ ಇಲ್ಲಿ ನೆರೆದಿದ್ದಾರೆ. ಇಡೀ ಭಕ್ತ ಸಮೂಹ ಕೊಟ್ಟೂರಿನ ರಥೋತ್ಸವದ ಸಂಭ್ರಮವನ್ನು ಆಚರಿಸುವ ಪರಿಯನ್ನು ಕಟ್ಟಿಕೊಂಡಿದ್ದಾರೆ.

**ಒಗಟುಗಳು**

ಬಂಗಾರದ ಮೇಜು ಬೆಳ್ಳಿ ಟಾಕು

ಮಠದಾಗೆ ಕುತಕೊಂಡು ಆಶೀರ್ವಾದ ಮಾಡ್ತಾರೆ

ಕೊಟ್ಟೂರ ಗುರುಬಸವ

ದನ ಕಾದನಾ ಆಳಾಗಿ ದುಡದಾನ

ದೇಸಕ್ಕಾ ಅರಸನಾಗಿ ಮೆರೆದು

ಗುಡಿಯ್ಯಾಗ ಕುಂತಾನ ಗೋಣೆಪ್ಪ

ಹುಬ್ಬಳ್ಳಿ ಊಡಿದಾಬೇಕು

ಧಾರವಾಡ ದಾರಿಯಾಗಬೇಕು.

ಮುಂಡ್ರಿಗಿ ಮುಂದೆ ಬರಬೇಕು

ಗದಗು ಗದ್ದಿಗೆಯಾಗಬೇಕು.

ಕುರುವಿನ ಕೋಟೆಯಲ್ಲಿ ನೆತ್ತರರಿಯ ಬೇಕು

ಕೊಪ್ಪಳದಲ್ಲಿ ತುಪ್ಪಳಾಗ ಬೇಕು

ಅಪ್ಪ ಗೊಣ್ಯಪ್ಪಗೆ

**ಗಾದೆಗಳು**

ನಡಕೊಂಡೆ ಪಡಕೊಂಡೆ

ಮನಸ್ಸಿನಂತೆ ಮಹದೇವ

ಮಾಡಿದವರಿಗೆ ನೀಡು ಭಿಕ್ಷೆ

ತಿಪ್ಪಯ್ಯ ಜಾತ್ರೆಗೆ ತಿಪ್ಪೆಗುಂಡೆಲ್ಲ ಸಾರು

ಸಂಜೆಲಿ ಹಟ್ಟಿ ಕಡ್ಗೆ ಮೋಡ ಆದ್ರೆ, ರಾತ್ರಿ ಉಣ್ಣುವೊತ್ತಿಗೆ ಮಳೆ ಬರುತ್ತೆ.

ನಾಯಕನಹಟ್ಟಿ ಜಾತ್ರೆಯಲ್ಲಿ ನಾಚ್ಕಿ ಬಿಡ್ಬೇಕು.

ಗುರುನಿಂತು ಉಚ್ಚೆ ಒಯ್ದರೆ

ಶಿಷ್ಯಂದಿರು ಅಡ್ಡಾಡ್ತಾ ಉಚ್ಚೆಹೋಯ್ತಾರೆ

ಭಾವೈಕ್ಯತೆಯ ಸಂಕೇತ ಹೊರಮಠ

ಶಿಲ್ಪ ಕಲೆಯ ಸಂಕೇತ ಒಳಮಠ

ಶಾಂತಿಯ ಮಠ ಏಕಾಂತ ಮಠ

ಮಾಡಿದವರಿಗೆ ನೀಡು ಭಿಕ್ಷೆ

ಮಾಡದವನಿಗಿಲ್ಲಿ ತಕ್ಕ ಶಿಕ್ಷೆ

ಧರ್ಮ ಮಾರ್ಗದಲ್ಲಿ ನಡೆದಾತನಿಗೆ ಸದಾ ರಕ್ಷೆ

ಅಧರ್ಮಿಗೆ ಸಿಗದಿಲ್ಲಿ ಹಿಡಿ ಭಿಕ್ಷೆ

ವೀರಶೂರರಾಳಿದ ಭೂಮಿಯಿದು

ಕೆರೆ ಕಂಟೆಗಳ ಸಫಲ ನಾಡಿದು

ಸ್ವಾಮಿ ತಿಪ್ಪೇಶನ ಪುಣ್ಯ ಕ್ಷೇತ್ರ

**ಸ್ವರ ವಚನಗಳು**

ಹೊಟ್ಟು ಹಾರಿತು ಗದ್ದಿ ಉಳಿಯಿತೆಂಬ ನುಡಿಯ ಕೇಳಿ

ನಷ್ಟವನುಗಳಿಸಿ ಲಾಭವನು ಮರೆದಿರಲ್ಲ

ದಿಟ್ಟರಾಗಿದ್ದವರು ಇಷ್ಟಲಿಂಗವ ನೋಡಿ

ಕೊಟ್ಟುರ ಬಸವೇಶ ಪಟ್ಟಕ್ಕೆ ನಿಂದ
ಕಟು ಕಡೆಯಾಟವಿದು ಕೊಟ್ಟು ಕಲ್ಪನೆ ಬಂದ
ಸೃಷ್ಟಿಯೊಳು ಪಾದವಸಂತನೆನಿಸಿ
ಮುಟ್ಟಿ ಪೂಜಿಸಿದವರೆ ಇಷ್ಟಸಿದ್ಧಿಯ ಕೊಡುವ
ಕಪ್ಪಡಿಯ ಸಂಗಮೇಶ್ವರ ಹೇಳ್ದ ನುಡಿಯ
ಹಿರಿಯ ಮಠದೊಳಿಪ್ಪವರ ವೀರಭದ್ರನ
ಪರಮ ಭಕ್ತಿಯೊಳಿಪ್ಪ ಹರನವತಾರನ
ಮೂರು ನೇತ್ರನು ಮುನಿವಿರಕ್ತನು ಮೂರುಕಲ್ಲ ಶಿವಾಲ್ಯನು
ಮೂರು ಲೋಕಕೆ ಅಧಿಕಪಾಲನು ಮುನಿಪ ಕೊಟ್ಟೂರ ಬಸವನು
ಬಟ್ಟಂಗಗಳ ಬಾಲೆ ತೋರಮ್ಮ ಭಾನುಜೂಟ ಪ್ರಕಾಶನಾ
ಇಷ್ಟರೊಳಗಿನ ಕೋಟಿ ತೇಜನ ಕೊಟ್ಟುರ ಬಸವಲಿಂಗೇಶ ನಾ
ದೇಶಕಧಿಕಾವಾದಂಥ ಶೀಲದುರ್ಗದಿ
ವಾಸವಾಗಿರುತಿಹನ
ಶ್ರೀ ಷಡುಸ್ಥಲಾಧೀಶನನಾದ ಮದ್ವಾನೀಶ
ಭಾಷೆ ಪಾಲಕದೇವ ಭವರೋಗ ವೈದ್ಯನ
ಶೌಲದುರ್ಗದಲ್ಲಿ ಮದ್ವನೀಶನಿದ್ದನೆಂದು ಹೇಳುತ್ತದೆ.
ಪೊಡವಿಯೊಳ್ ಶೀಲದುರ್ಗ ಪುರವಾಸ ಶ್ರೀಗುರು
ಷಡುಸ್ಥಲದೀಶ, ಮದ್ವನೀಶ ಸಾಂಬ
ನಡಿಗಳಿಗೆರಗಿ ನಾಪಿಡಿದೆ ನಾರತೀಯನು
ಕೊಡುವರಗಳ ನಿಮ್ಮ ಬೇಡುವೆ ನಭವ

**ಐತಿಹ್ಯಗಳು**

**ಕೂಲಹಳ್ಳಿ ಗೋಣಿಬಸವೇಶ್ವರ**

"ಕೂಲಹಳ್ಳಿ ಗ್ರಾಮವು ಹರಪನಹಳ್ಳಿ ತಾಲ್ಲೂಕಿನಲ್ಲಿದೆ ಪಂಚಗಣಾಧೀಶ್ವರರು ಕೈಲಾಸದಿಂದ ಭೂಲೋಕಕ್ಕೆ ಬಂದವರು. ಅವರಲ್ಲಿ ಮದ್ವನಸ್ವಾಮಿ ಒಬ್ಬರು. ಕೂಡ್ಲಿಗಿ ಹತ್ತಿರದ ಕುಪ್ಪಿನಕೆರೆಗೆ ಬಂದರು. ನಂತರ ಅವರು ಬಾಗಳಿಗೆ ಬಂದರು ಅಲ್ಲಿ ಕಲ್ಲೇಶ್ವರನ ದೇವಾಲಯದಲ್ಲಿ ಪ್ರತಿದಿನ ಪೂಜೆ ನೆರವೇರಿಸುತ್ತಿದ್ದರು. ಸರಧಿಯ ಪ್ರಕಾರವಾಗಿ ಪ್ರತಿದಿನ ಪೂಜೆಗೆ ಬೇಕಾದ ಪತ್ರೆ, ಮತ್ತು ಹೂವನ್ನು ತರಲು ಶೃಂಗಾರ ತೋಟಕ್ಕೆ ಹೋಗುತ್ತಿದ್ದರು. ಪತ್ರೆ ಮತ್ತು ಪುಷ್ಪ ತರಲು ಹೋಗಿದ್ದ ಮದ್ವಾನಸ್ವಾಮಿಯ ಮೇಲೆ ಕನಕವ್ವನ ಮನಸ್ಸು ಬಿತ್ತು. ಈ ವಿಷಯ ಕೊಟ್ಟೂರೇಶ್ವರನಿಗೆ ಗೊತ್ತಾಯಿತು. 'ಮದ್ವಾನಿ ಹುದ್ಲಲಿ ಬಿದ್ದ' ಎಂದರು. ಮದ್ವನಸ್ವಾಮಿಯ ಮದುವೆಯನ್ನು ಬಾಗಳಿಯ ಕಲ್ಲೇಶ್ವರ ದೇವಾಲಯದಲ್ಲಿ ಬಾಗಳಿ ಅರಸ ಸೋಮಶೇಖರ ರಾಜನ ನೇತೃತ್ವದಲ್ಲಿ ನಡೆಯಿತು. ಕನಕವ್ವ ಸೋಮಶೇಖರ ರಾಜನ ಮಗಳಾಗಿದ್ದಳು. ಮದುವೆಯಾಯಿತು ಸ್ವಲ್ಪ ಸಮಯದ ನಂತರ ಕನಕವ್ವ ಗರ್ಭದರಿಸಿ ಬಸವೇಶ್ವರನಿಗೆ ಜನ್ಮವಿತ್ತಳು

ಇಲ್ಲಿ ಬಿಡರಿ ಗಾಣಿಗರ ಗೋಣಿ ಬಸವನಿಂದ
ಹೊನ್ನ ಹೋದರೇನು! ದವಲತ್ತು ಹೋದರೇನು !
ಲಕ್ಷಾವರಿಯ ಸೀಮೆಸಿರಿ ಸೂರ್ಯಾದರೇನು !
ಅರಮನೆ ಮುಂದಾಲ, ಪಟ್ಟದಾನೆ ಹೋದರೇನು !
ಭಿಕ್ಷೆ ಭಂಡಾರಕ್ಕಾಗಿ ಎರಡು ಕೋಣಿ ಹೋದರೇನು !
ಬಡ್ಲಟ್ಟೇರಿ ವನಯ್ಯಾ, ಭಕ್ತಸ್ಥ ಮನೆಗನ್ನ
ಕರಕಂಡು ಹೋಗುತಾನ! ಒಂದು ಲಕ್ಷನಲ್ಲ
ಎರಡು ಲಕ್ಷವಲ್ಲ, ಮೂರು ಲಕ್ಷವಲ್ಲ
ಒಂಭತ್ತು ಲಕ್ಷವೇನೋ ಎಣಿಸಾಕೆ ಕೈಯಲ್ಲಿ ಕೊಟ್ಟು !
ಲಿಂಗವೇ ಬಾಯಿ.......!

ಕೈಕಾಲು ಸುಟ್ಟುಕೊಂಡು ಹೋಗ್ತಂತಾದ್ದು
ಮಾಟವದು ಮಾಡಿಸಿಗೆಂಡು
ಲಿಂಗವೇ ಬಾಯಿ!
ಅವನು ಕುಂದ್ರೊ ಗದ್ದಿಗೆಯ ಮ್ಯಾಲೆ
ನಾನು ಹೋಗಿ ಕುಂದರ ಬೇಕೋ !
ಲಿಂಗಾವೇ ಬಾಯಿ......!
ಮಡಿಕೆ ಪಟ್ಟಿ ಮಾನವಪ್ಪೋ ನನ್ನ ಸ್ವಾದೀನಾಗಬೇಕು
ಬೆಟ್ಟದ ಹಿರಿಯ ತೋಪು ನನ್ನ ಸ್ವಾಧೀನಾಗಬೇಕು !
ಲಿಂಗಾವೇ ಬಾಯಿ........!

ಮಗ್ಗಲುಗಳ ಹಿಂಡಬೆಕು ನನ್ನ ವಾಸಿಯಾಗಬೇಕು !
ಲಿಂಗಾವೇ ಬಾಯಿ........!
ಹರಪನ ಹಳ್ಳಿವಳಗೇ ಕಾಳಿಕೊಂಡಯ್ಯಾನೆಂಬೋ
ಚಲವಾದಿ ಕರಿಸ್ಯಾರ, ಎದರ ಬೇಡ ನನ್ನ ಮಗನೆ
ಒಂಬತ್ತು ಲಕ್ಷೇ ಹಣವೆ, ನಿನಗೆ ಕೊಡಿತೇವಯ್ಯ !
ಕೈಕಾಲು ಸೊಟ್ಟೋಗಂತಾದ್ದು ಮಾಟವದು ಮಾಡಿಕೊಡು ನಮಗೆ !
ಲಿಂಗವೇ ಬಾಯಿ.........!

ಮರ್ರಗಾಡಿ ಪೆಟ್ಟಿನಲ್ಲಿ ಮರವೇ ಉರುಗೊಂದಂಗೆ
ದೆವ್ವಕೂಟ ಅವನು, ಅರಿವೆ ಮೇಸುವನಂತ,
ಮಳಲು ಗೂಡು ಗುರುವೆ, ಸಕ್ಕರೆ ಮಾಡುವನಂತೆ !

ಸುಣ್ಣೆ ನೋಡುಗುರುವೆ ಬೆಲ್ಲ ಮಾಡುವನಂತೆ !
ಇಂಥ ವಿದ್ಯೆವನೆಲ್ಲೊ ಕಾಳಿಕೊಂಡ ತೋರುತಿದ್ದ !
ಲಿಂಗವೇ ಬಾಯಿ.......!

ಒಂಬತ್ತು ಲಕ್ಷೇ ಹಣವ ಮಾರಿಮುಂದ ಸುರಿವ್ಯಾರೋ !
ಬೆಕ ಬೆಕ ಉರಿಯಂತಾದೋ ಮಾಟ ನಮಗೆ ಮಾಡಿಕೊಡು
ಲಿಂಗಾವೇ ಬಾಯಿ........!
ಆಯ್ಯಾಯ್ಯ ಮಾರಾಯರ್ರೆ, ಹಣಕ್ಕೆ ಆಸೆಬಿದ್ದು
ಮಾಟ ಮಾಡುವನಲ್ಲ !
ಹೆಸರು ಹೇಳಿದರಪ್ಪೋ, ಮಾಟನಾನು ಮಾಡುತೀನಿ !
ಲಿಂಗಾವೇ ಬಾಯಿ......!
ಇಲ್ಲದಿದ್ದರೆ ಏ ಶಿವನಯ್ಯೆ ಮಾಟ ನಾನು ಮಾಡುವನಲ್ಲೊ !
ಲಿಂಗವೇ ಬಾಯಿ......!

ಚಿಗಟೇರಿ ಶಿವನಯ್ಯಾ ನಾಗನುರು ಗಾಣಿಗರು,
ಎನಂತ ಹೇಳುತಾರ, ಕೂಲವಳ್ಳಿ ಮಠದಾಗ,
ಕನಕವ್ವ ಒಟ್ಟಾಗೆ, ಗೋಣೆಯ್ಯಾ ಬಸವಾನೆಂಬೋ
ಶರಣ ಹುಟ್ಯಾನ !
ಕೈಕಾಲು ಸುಟ್ಕೋಗೊಂತಾದು ಮಾಟ ನಮಗೆ ಮಾಡಿಕೊಡೋ !
ಲಿಂಗವೇ ಬಾಯಿ.......!

ತಾಯಿ-ತಂದೆ ತನಕ ಪಿಂಚಣಿ ನಡಸತೀವಿ !
ಲಿಂಗವೇ ಬಾಯಿ.....!

ಹಂಗಂದ ಮಾತಿಗೆ ಚಲವಾದಿ ಒಟ್ಯಾಗೆ
ಬೆಂಕಿ ಹೊಯ್ದಂಗಾತು !
ನೆತ್ತಿ ಮ್ಯಾಲೆ ಗುರುವೇ, ಮಳೆಯ ಮುರದಂಗಾತು !
ಹೇಳೋದು ಅವನ ಹೆಸರು, ಹೊತ್ತೂದು ಅವನ ದೀಪ !
ಕರುವೂ ಕಟ್ಕೋ ಕಣ್ಣಿನ ಗೋಣೀನ ಹೆಸರಪ್ಪ !
ಮನೆಯ ಸ್ವಾಮಿ ಗೋಣಿ ಅಯ್ಯಾಗೆ ಮಾಟ ನಾನು
ಮಾಡುವನಲ್ಲೋ !
ಲಿಂಗವೇ ಬಾಯಿ....!

ಸಿಟ್ಟು ಬಂದು ಶಿವನಯ್ಯಾ ಪಟ್ಟನೆ ಎಂಬುತಾನ !
ಮಾರುದಾರು ಬರ್ರಯ್ಯಾ, ಸೋಗುದಾರು ಬರ್ರೆಯ್ಯಾ !

ಅಗಸರ ಮನೆಗೆ ಹೋಗಿ ಕತ್ತೆ ತರಬೆಕಣ್ಣ !
ಕತ್ತೆ ಮ್ಯಾಲೆ ಕುಂದರಿಸಿ, ಹರಪನಹಳ್ಳಿ ವಳಗೆ
ಬಾಜಿ ಬಾಜರಿಡದು, ಒಣಿ ಒಣಿಗುಂಟ
ಮೆರೆಸಿಗೆಂಡು ಬಂದು ಇವನ ಚೆಂಡು ಹಿಡಿದು ದೂಡಿಬಿಡಿರೋ !
ಲಿಂಗವೇ ಬಾಯಿ.....!

ಹೆದರಿದ ಚಲವಾದಿ ಗದಗುಟ್ಟಿ ನಡಿಗ್ಯಾನ !
ಅಯ್ಯಾಯ್ಯಾ ಮಾರಾಯರ್ರೆ, ಕತ್ತೆ ಹತ್ತಿಸ ಬ್ಯಾಡ್ರಿ !
ಮರಿಯಾದಿ ಕಳೇಯ ಬ್ಯಾಡ
ಮನೆಯ ಸ್ವಾಮಿ ಗೋಣ ಅಯ್ಯಾಗೇ, ಮಾಟನಾನು
ಮಾಡತೀನೋ !
ಲಿಂಗಾವೇ ಬಾಯಿ....!

ಮುತ್ತಿನ ಮರಿಗೋಣೆಯ್ಯಾಗೆ ಮಾಟನಾನು ಮಾಡತೀನೋ
ಲಿಂಗವೇ ಬಾಯಿ!
ಮಾಟ ಮಾಡಾಕಂತ ಒಂಭತ್ತು ಲಕ್ಷ ಕೊಟ್ಟ್ಯಾಯಿತೀಗ !
ಬೇಕದಕೆ ಸಾಯತಾಗ ಬೇಕದಕೆ !
ಏನೇನು ಅಯಿತದ ಆಗಬೇಕು ಮಕ್ಕಳಿರಾ !
ಹಸುರಕ್ಕಿ ಆಗಬೇಕು, ಹಳೇ ಅಕ್ಕಿ ಆಗಬೇಕು !
ನಾಕು ಮೂಲೆಗೆ ನಾಕು ಎಡೆ ಹೊನ್ನು ಆಗಬೇಕು !
ನಾಕು ಮೂಲೆಗೆ ನಾಕು ಲೆಂಗುರಿ ಆಗಬೇಕು !
ಗೊನೆಯ ಮುರಿಯದ ಗುರುವೆ, ತೆಂಗಿನ ಕಾಯಾ ಆಗಬೇಕು !
ಇಂತೆಂಬ ಸಾಯಿತನೆಲ್ಲೋ ಶಿವನಯ್ಯಾ ಕೊಡಿಸಿದನಂತೆ !
ಲಿಂಗವೇ ಬಾಯಿ....!

ನಾಲೊರು ಗಾಣಿಗರು ನರಕೇರಿ (ಚಿಗಟೇರಿ) ಶಿವನಯ್ಯಾ!
ಛಲವಾದಿ ಕರದಾರ, ಅರಮನೆಗೆ ಹೋದಾರು !
ಕಾಳಿ ಕೊಂಡನ ಮನೆಗೆ ಹೋಗುತಾರ ಗಾಣಿಗರು !
ಹಸುರಕ್ಕಿ ರಂಗಾವ, ತಾವೇ ಬರಿಯುತಾರ !
ಹಳೇದಕ್ಕಿ ರಂಗಾವ ತಾವೇ ಬರಿಯುತಾರ !
ನಾಕು ಮೂಲೆಗೆ ನಾಕು ಎಡೆ ಹೊನ್ನು ಇಡುತಾರ !
ನಾಕು ಮೂಲೆಗೆ ನಾಕು ಕೆಂಗುರಿ ಕಡಿದಾರು !
ಗೊನೆ ಮುರಿಯದ ಗುರುವೆ ಬಾಳೆ ಹಣ್ಣು ಹಿಡಿದಾರು !
ಕರಿಯ ಚಿಪ್ಪಿನ ಗುರುವೆ ತೆಂಗಿನ ಕಾಯಿ ಒಡಿದಾರು !

ಕಮ್ಮಾರ ಮನೆಯಲ್ಲಿ ಹಿರಿಯ ಒಲೆ ತಂದಾರು !
ಒಳೆಯ ಊಡುತಾರ, ಮುಸಿಯಾ ಕಟ್ಟುತಾರ !
ಮುವತ್ತು ಲಕ್ಷಾ ಹಣವ, ಒಂಭತ್ತು ಲಕ್ಷ ಹಣವ
ಬಂಗಾರ ಕರಗಸ್ತಾರ, ಮಾಟ ಮಾಡುತ್ತಾರೆ !
ಹರಪನಹಳ್ಳಿಗೆ ಮಾಡಿದರಪೊ , ಕೂಲಹಳ್ಳಿಗೆ ಅರವಾಗೈತೋ !
ಲಿಂಗವೇ ಬಾಯಿ......!

ಅರುವಾಗಿ ಗೋಣಿ ಬಸವ ತಾನೇನು ಅಂಬುತ್ತಿದ್ದ !
ಬಾರೊ ಬಾರೋ ಕಲ್ಲಪ್ಪ, ನಾನೊಂದು ಹೇಳಿನು ಮಗನೆ !
ಕಲ್ಲೆಲೆಗೆ ತರಸಪ್ಪ ಕಾಮಡಿಕೆ ತರಸಪ್ಪ !
ಬೆಟ್ಟದ ಹಿಂಬಾಗಿ, ಬೆಟ್ಟದ ಬಳಿಯಲ್ಲಿರುವ
ಹಿರಿಯ ಕೆರೆಯನಂಬೋ ಗುರುವೆ ಕಟ್ಟಿಸಲೋದೋ !
ಲಿಂಗವೇ ಬಾಯಿ....!

ಅತಗೊಳ್ಳೆದಾಗಿ ಕಾಳಿಕೊಂಡನ ಮಡದಿ
ಒಂಭತ್ತು ತಿಂಗಳ ಮಗನ, ಮಲೆಕುಡಿಸುತಾಳ!
ತೊಟ್ಲಿಗಾಕುತಾಳ, ಕೊಡ ಸಿಂಬೆ ತೊಗೊಂಡು
ನೀರಿಗೆ ಹೋಗ್ಯೆದಾಳ, ಅಂಥ ವೇಳಯದಾಗ
ಎಂಥ ಕೇಡನಮ್ಮ ಗುರುವೇ ತೋರುತ್ತಿದ್ದ !
ತೊಟ್ಲಾಗ ಇರುವ ಮಗುವೆ, ಚಟ್ಟನ ಚಿರುತೈತೆ !
ಮೂಗಿಲಿ ಬಾಯಿಲಿ ರಗುತಾ ವುಚ್ಚತೈತೆ !
ಸುತ್ತುಹೋಗಿ ಬಿದ್ಯೆತಲ್ಲೋ ಕಾಳಿಕೊಂಡ ಚಲವಾದಿ ಮಗನೇ!
ಲಿಂಗವೇ ಬಾಯಿ.....!

ಸತ್ತಮಗನ ನೆಪ್ಪಿಲ್ಲದೇ ಮಾಡದಗೊಂಬೆ ಮಾಡುತಾರೋ !
ಲಿಂಗಾವೇ ಬಾಯಿ.... !
ಕಾಳಿಕೊಂಡನ ಮಡದಿ ಮನಿಗಾರ ಬರುತಾಳೆ !
ಕೊಡಗಳ ಇಳುವುತಾಳ ತೊಟ್ಲಿಗೆ ಹೋಗುತಾಳೆ !
ಮಗನ ನೋಡುತಾಳ, ಗಾಬರಿಯಾಗಿ ಅವನ ಮಡದಿ
ಕೈಯವಳಗ ತೊಗಾಂಡಾಳ !
ಲಿಂಗವೇ ಬಾಯಿ.....!

ಉತ್ತಗಣ್ಣು ಉಡಿವ್ಯಾಳು ಬೆತ್ತಗಣ್ಣು ಉಡಿವ್ಯಾಳು....! ದನ್ನಾವಿ
ಮನೆಯ ಸ್ವಾಮಿಯ ಮೇಲೆ ಮಾಟ ಮಾಡಲು ಹೋದೆ....! ದನ್ನಾವಿ
ಮಾಟ ಮಾಡಿ ಮಗನಿಗೆ ಮರಣಗಾಲ ತಂದುಕೊಂಡ....! ದನ್ನಾವಿ

ಚಿಗಟೇರಿ ಶಿವಯ್ಯನ ಮಾಟನ ನೋಡುತಾರ....! ದನ್ನಾವಿ
ಸತ್ತೆ ಬಿದ್ದೈತಲ್ಲ ಮಟ್ಟಾ ಮರುವೆ ಮಗುವು...! ದನ್ನಾವಿ
ಸತ್ತ ಮಗನ ಮುಂದೆ ಅಕ್ಕೆಂಡು ಮತ್ತೆ ಪಾದನೆನದಾರೋ...! ದುನ್ನಾವಿ
ಮುಪ್ಪಿನ ಸಂಗಯ್ಯಗಾನು ಮುದಿಗೋಣಿ ಲಿಂಗಯ್ಯ.....! ದುನ್ನಾವಿ
ಬಿರುಸಿನ ಮಠದಾಗಿರುವ ಹುಚ್ಚಯ್ಯಾ ನೀಬಾರೋ....! ದುನ್ನಾವಿ
ಬೇಕಂಥ ನಾ ನಿನಗೆ ಮಾಟ ಮಾಡಿದಿಲ್ಲಪ್ಪ....! ದುನ್ನಾವಿ
ದೊರೆತನಕೆದರಿ ನಾನೆ ಮಾಟ ಮಾಡುತಿದ್ದೆ...! ದನ್ನಾವಿ
ಒಂಭತ್ತು ಲಕ್ಷೆ ಹಣ ಹಿಂದಕೋಯ್ದು ಕೊಟ್ಟೇನಪ್ಪ...! ದನ್ನಾವಿ
ಅದರಗೊಂದೇ ಕಾಸು ನಾನೇ ತಿಂಬವನಲ್ಲ....! ದನ್ನಾವಿ
ಅದರಗೊಂದೇ ಕಾಸು ನಾನು ಬಳಸುವನಲ್ಲ...! ದನ್ನಾವಿ
ಉಳಸಪ್ಪ ಗೋಣಿ ಬಸವ ನನಮಗನ ಜಲುಮಂದೆ.....! ದನ್ನಾವಿ
ಪಾದದಲಿ ಹೋಗಿ ಕೂಲಹಳ್ಳಿಗೆ ಎರವಾಯ್ತು.....! ದನ್ನಾವಿ
ದರುಮದ ಗೋಣಿ ಬಸವ ಏನಂತ ಮುಲಿಗ್ಯಾನ....! ದನ್ನಾವಿ
ಬರುದಾರ ಕಲ್ಲಪ್ಪ ನಾನೊಂದು ಹೇಳೆನು ಮಗನೆ....! ದನ್ನಾವಿ
ಮಾಟ ಮಾಡೋದು ಬಿಟ್ಟಾನಂತೆ ನನ ಮನೆ ಕಲ್ಲಪ್ಪ.....! ದನ್ನಾವಿ
ಈಸಲ ನೀಡಿದ ರೊಕ್ಕ ಹಾಲದ ಕುಡಿಯೊನು ಬಾರೋ.....! ದನ್ನಾವಿ
ಕರುಮ ಮಾಡಿದವರಲ್ಲಿ ದುರುಮ ಮಾಡೋನು ಬಾರೋ....! ದನ್ನಾವಿ
ನಿನ್ನ ಬಸವನ ಒಯ್ಯೋ ಚಿನ್ನದ ತಬಕಿನ ಒಳಗ....! ದನ್ನಾವಿ
ಚಿನ್ನದ ತಬಕಿನ ವಳಗ ಪರಸಾದ ತರಿಸಿದ ಗುರುವೆ...! ದನ್ನಾವಿ
ಕೂಲವಳ್ಳಿಗೆಪ್ಪಾ ಹರಪ್ಪನ ಹಳ್ಳಿಗೆಪ್ಪಾ....!. ದನ್ನಾವಿ
ಆರ್ತಳ್ಳದಾ ಕಡೆಗೆ ಪರಶನಿ ಒಗೆದ ಗುರುವೆ ! ದನ್ನಾವಿ
ಸತ್ತಂತ ಮಗನೆ ಎಡಗಡೆಗೊಳ್ಳತೈತೆ....! ದನ್ನಾವಿ
ತಂದೆತಾಯಿ ಮಾರೆಯ ಕಣ್ಣ ತುಂಬ ನೋಡತೈತೆ....! ದನ್ನಾವಿ
ತಂದೆತಾಯಿ ಮಾರೆಯ ಚಂದರವಾಗಿ ಬರದಿತ್ತ.....! ದನ್ನಾವಿ
ಸೊಕ್ಕಿನ ಸ್ಥಿರವಾಗಿ ಮಿಕ್ಕ ಮಾತನಾಡ್ಯಾನ......! ದನ್ನಾವಿ
ನನ ಮಗನ ಅದೃಷ್ಟ ಚಂದವಾಗಿ ನೋಡತೈತೆ....! ದನ್ನಾವಿ
ನಾನು ಮಾಡಿದ ಧರ್ಮ ನನ್ನಕಾದು ಕುಂತ್ರಪ್ಪ......! ದನ್ನಾವಿ
ಶಿವನೆ ನನ ಮಗಪಡೆದೇ ಬಂದಿದಾನಪ್ಪಾ....!. ದನ್ನಾವಿ
ದೇವರಿಲ್ಲ ಕಾಣರೋ ದಿಂಡರಿಲ್ಲೋ ಕಾಣೆರಪ್ಪಾ.....! ದನ್ನಾವಿ
ಗೋಣಿ ಬಸವ ನನ್ನ ಮನೆಯಾಗಿಲ್ಲ ಕಣ್ರೋ....! ದನ್ನಾವಿ
ಇದ್ದ ಬದ್ದ ಗೋಣಿ ಬಸವಗೆ ಮಾಟ ಮಾಡೋನು ಬರ್‍ರಿ ಅಂದ.....! ದನ್ನಾವಿ

ಅಂಥಾ ಗುರುವಿನ ಮೇಲೆ ಪಂಥ ತಾಳುತಾರ......! ದನ್ನಾವಿ

ದರುಮದ ಗುರಿವಿಗೆಪ್ಪಾ ಮಾಟ ಮಾಡುತಾರ.....! ದನ್ನಾವಿ

ಹೀಗೆಯೇ ಗೋಣಿ ಬಸಪ್ಪನ ಚರಿತ್ರೆ ಮುಂದುವರಿಯುತ್ತದೆ. ಮಾದರಿಗಾಗಿ ಈ ಮೇಲಿನ ಭಾಗವನ್ನು ನೀಡಲಾಗಿದೆ.

**II. ಕೋಲ ಶಾಂತಯ್ಯನ ವಚನ**

ಇಷ್ಟ ಪ್ರಾಣವ ಸಂಬಂದಿಸಬೇಕೆಂಬರು.
ಪ್ರಾಣ ಇಷ್ಟದಲ್ಲಿ ನಿಂದ ಮತ್ತೆ ಕಾಯದ ಸುಳುಹುಂಟೆ ?
ಇಷ್ಟದ ಕಳೆ ಪ್ರಾಣದಲ್ಲಿ ನಿಂದ ಮತ್ತೆ
ಇಷ್ಟವ ಮುಟ್ಟಿ ಪೂಜಿಸುವ ಪರಿಯಿನ್ನೆಂತೊ ?
ಉಭಯದ ಘುಟ ಬಿದ್ದಲ್ಲಿ ಅರಿವೆಲ್ಲಿ ನಿಂದಿತ್ತು ?
ಅಲ್ಲಿ ಶೂನ್ಯಕ್ಕೆ ಸುಳುಹುಂಟೆ?
ಇದು ಅವಿದ್ಯರ ಮತ, ವಿದ್ಯರ ಮತವಲ್ಲ;
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ, ||೧||

ಬಿತ್ತು ಅಂಕುರವ ನಿಂಗಿಪ್ಪಾಗ
ಅಂಕುರ ಆ ಬಿತ್ತ ತನ್ನಯ ಸಂಕೇತದಲ್ಲಿ ಇರಿಸಿಕೊಂಡು ಇಹಾಗೆ
ಉಭಯದ ಭೇದ ಎಲ್ಲಿ ಅಡಗಿತ್ತು ಹೇಳಿರಣ್ಣಾ
ಅರುಹಿಸಿಕೊಂಬ ಕುರುಹು; ಆ ಅರುಹಿನಲ್ಲಿ ಕುರುಹಿನ ಕಳೆ
ನಿಂದ ತೆರಪಾವುದು?
ಅರುಹಿಸಿಕೊಂಬ ಅರಿವು ತೋರಿಸಿಕೊಂಬ ಕುರುಹಿನ ಕಳೆ
ಬೇರೊಂದೆಡೆ ತೆರಪಿಲ್ಲ, ಅದು ತಾನೆ ನಿಶ್ಚಯ;
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೨||

ಒಂದು ಯೋನಿಯಲ್ಲಿ ಬಂದ ಮಕ್ಕಳ ವಿವರ :
ಕಡೆ ನಡು ಮೊದಲೆಂದು ಕರುಹಿಟ್ಟು ಕರೆದಡೆ ನುಡಿದಂತೆ ಅವರ ಪರಿ
ನಾಮಧೇಯದಲ್ಲಿ ಕರೆದಡೆ ಓ ಎಂಬಂತೆ ಅದು ಏಕರೂಪು
ಸರ್ವಮಯನಾಗಿ ಸಂಪದಕ್ಕೆ ಬಂದುದನರಿ ;
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೩||

ಭಕ್ತಿ ಜ್ಞಾನ ವೈರಾಗ್ಯದಿಂದ ಅರಿಯಬೇಕೆಂಬುದು
ಭಕ್ತಿಯೊ ಜ್ಞಾನವೊ ವೈರಾಗ್ಯವೊ ?
ಮೂರಕ್ಕೆ ಬೇರೊಂದೆಡೆಯುಂಟೆ ?
ಅದರ ಎಡೆಯ ಗುಡಿಯ ತೋರು, ?

ಬರಿಯ ಮಾತಿನ ಮಾಲೆ ಬೇಡೆ
ಪುಣ್ಯರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ, ||೪||

ಸ್ಥಳಕುಳವನೆತ್ತಿದಲ್ಲಿ ಸಮಯಕ್ಕೆ ದೂರ.
ಚಿದ್ಘನ ಭೇದ ಭೇದಾಂತವನೆತ್ತಿದಲ್ಲಿ ಅಧ್ಯಾತ್ಮಕ್ಕೆ ದೂರ.
ಸರ್ವವು ಸಮವೆಂದಡೆ ವಿಧಿ ನಿಷೇಧ ಕಾಲಕರ್ಮಕ್ಕೊಳಗಹರುಂಟು.
ಅದು ತನ್ನೊಪ್ಪದ ದರ್ಪಣದಂತೆ;
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ ||೫||

ಮೂಲದ ಮೊಳೆಯ ಮುರಿದಲ್ಲಿ
ಬೇರೊಂದು ಮರ ಶಾಖೆ ಫಲವುಂಟೆ?
ಅರಿವು ಸಂಬಂಧ ನೆರೆ ನಿಂದಲ್ಲಿ
ಕ್ರಿಯೆ ನೆರೆ ಮಾಡುವುದಕ್ಕೆ ಬೇರೊಂದೊಡಲುಂಟೆ?
ತನ್ನಯ ಶಂಕೆ ಅನ್ಯರ ಮಚ್ಚು ಇದು ಭಿನ್ನಭಾವ;
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೬||

ಧರೆ ಸಲಿಲ ಅನನ ರವಿ ಶಶಿ ಜಗಸೂತ್ರವೆಲ್ಲಕ್ಕೂ ಸರಿ
ಅರಿದವನ ಚಿತ್ತದ ದಯ ಸರ್ವಪ್ರಾಣಿಗಲಿಗೂ ಸರಿ.
ದಯ ವಿಶ್ರಾಂತಿ ಇದು ಮಿಥ್ಯವಲ್ಲದೆ ತಥ್ಯವಲ್ಲದ
ದಂತಶೂಕ ಶಿಲೆಯಲ್ಲಿ ನಿಂದಂತಾಗಬೇಡ, ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೭||

ಮರುತ ಸಂಚಾರಿಸಿದಲ್ಲಿ ಲಘುತೃಣ ಪರ್ಣ
ಅದುಗೂಡಿ ಸಂಭವಿಸಿದಾಗ
ಅದರ ಆತ್ಮಗೂಡಿ ತಾ ಒಂದಾಗಿರೆ
ಸಂಚಾರ ಹಿಂದೆ ತಾವು ಮುನ್ನಿನಂದದಿ ಹಿಂಗಿರೆ
ಆತ್ಮಂಗೆ ಬಂಧ ಮೋಕ್ಷ ಎಲ್ಲಿಯದೆಂದೆ.
ಅದು ನಿಂದ ಠಾವ ಹೇಳಿ ಎನ್ನ ಚಿತ್ತದ ಬಂಧವ ಬಿಡಿಸು
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೮||

ಪೃಥ್ವಿ ಪೃಥ್ವಿಯ ಕೂಡಿದಲ್ಲಿ
ಅಪ್ಪು ಅಪ್ಪುವ ಕೂಡಿದಲ್ಲಿ
ತೇಜ ತೇಜವ ಕೂಡಿದಲ್ಲಿ
ವಾಯು ವಾಯುವ ಕೂಡಿದಲ್ಲಿ
ಆಕಾಸ ಆಕಾಶವ ಕೂಡಿ ನಿಂದಲ್ಲಿ
ಜೀವನ ಪಾಪ ಪುಣ್ಯವಾವುದು ಹೇಳಿರಣ್ಣಾ.

ಜೀವಕೆ ಭವ ಕಾಯಕ್ಕೆ ಮರಣವೆಂಬರು.
ಕಾಯ ಜೀವದ ಬೆಸುಗೆ ಅದಾವುದು ಹೇಳಿರಣ್ಣಾ.
ಒಡೆಹಂಚ ಹೊಯಿದಡೆ ದನಿ ಭಿನ್ನವಾದಂತೆ;
ಅದ್ದರಿಂದ ಉಭಯ ಭಿನ್ನ ಹೇಳಿರಣ್ಣಾ.
ಅದು ಕಂಚಿನ ಕಾಯದಿಂದಲೊ, ನಾದದ ಪ್ರಕೃತಿಯಿಂದಲೊ ?
ವಾಗದ್ವೈತದ ಸಂಬಂಧವಲ್ಲ, ಸ್ವಯದ ನಿಜ
ನಿನ್ನ ನೀನರಿ, ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೯||

ಹೇಮ ಬಣ್ಣವ ಕೂಡಿದ ದೆಸೆಯಿಂದ
ಮರ್ತ್ಯರುಗಳಿಗೆ ಆಗುಚೇಗೆಗಳಿಗೀಡಾಯಿತ್ತು.
ದಿವ್ಯ ನಿರಂಜನ ನಿಜವಸ್ತು ಭವ್ಯರ ಭಕ್ತಿಗಾಗಿ
ಶಕ್ತಿ ನಾಮರೂಪವಾಗಿ ತಲ್ಲೀಯವಾಗಲ್ಪಟ್ಟುದು,
ಶಕ್ತಿ ಸಮೇತವಾಗಿ ಲಿಂಗವಾಯಿತ್ತು.
ಅದು ರಂಜನೆಯ ಬಣ್ಣ, ಮಾಯದ ಗನ್ನ,
ಅಂಬರದ ಚಾಪದ ಸಂಚದ ವಸ್ತು.
ಮುನ್ನಿನಂತೆ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ೧೦

ಆರು ಸ್ಥಲವನರಿದು ಮೂರು ಸ್ಥಲವ ಮುಟ್ಟಿ,
ಮೂವತ್ತಾರು ಸ್ಥಲವ ಕೂಡಿ,
ಇಪ್ಪತ್ತೈದು ಸ್ಥಲದಲ್ಲಿ ನಿಂದು,
ನೂರೊಂದರಲ್ಲಿ ಸಂಗವ ಮಾಡಿ ಬೇರೆ ನೆಲೆಗಲೆದು ನಿಂದಲ್ಲಿ,
ಕಾಯ ಜೀವದ ಬಂಧ ಅದೇತರಿಂದ ನಿಂದಿತ್ತೆಂದರಿ ನಿನ್ನ ನೀನೆ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೧೧||

ಶಾಸ್ತ್ರವೆ ಅಡ್ಡಣಿಗೆಯಾಗಿ, ಆಗಮವೆ ಹರಿವಾಣವಾಗಿ,
ಪುರಾಣವೆ ಓಗರವಾಗಿ, ಉಂಬಾತ ವೇದವಾಗಿ,
ಸಕಲ ರುಚಿಯನರಿದು ಭೋಗಿಸುವ ಪ್ರಣವ ತಾನಾಗಿ,
ಅದರ ಭೇದ ಏತರಿಂದ ಅಳಿವು ಉಳಿವು? ನಿನ್ನ ನೀಸರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೧೨||

ಆತ್ಮತತ್ತ್ವ ವಸ್ತುವಾದಡೆ ನಾನಾ ಘಟದಲ್ಲಿ ಇರಲೇಕೆ ?
ಆ ಘಟ ವಸ್ತುವ ಗರ್ಭೀಕರಿಸದಲ್ಲಿ ಪಂಚಭೌತಿಕಕ್ಕೆ ಒಡಲಾಗಲೇಕೆ ?
ಹಿಡಿಯಬಾರದು, ಹಿಡಿದು ಬಿಡಬಾರದು.
ಒಡಲು ದಿಟವೆಂದಡೆ ಅದು ಒಡೆಯ ಹಾಕುವ ಕುಂಭ.

ಒಡಲೊಡೆಯ ದಿಟವೆಂದೆಡೆ ರೂಪಿಲ್ಲದ ಛಾಯ
ಅರಿದು ಮುಕ್ತಿಯ ತೆರನಾವುದು ?
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೧೩||

**ಆತ್ಮಘುಟ ಸಂಗ ನಿರಿಯಾಣಯೋಗ ಭಾವಸ್ಥಲ:**

ಮೂರು ಮೊಲೆಯನುಂಡು ಬಂದವ,
ಈರೈದು ಕಂಡು ಬಂದವ ನೀನಾರು ಹೇಳಾ ?
ಸಂದಿಲ್ಲದ ಪಟ್ಟಣದಲ್ಲಿ ಬಂದು ನೊಂದೆಯಲ್ಲ!
ಅಂದಿನ ಬೆಂಬಳಿಯ ಮರೆದು ಇಂದಿನ ಸಂದೇಹಕ್ಕೊಡಲಾಗಿ,
ಈ ಉಭಯದಸಂದ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೧೪||

ಜಲದುಡುಕೆಯ ತುಂಬಿ ಮೊಲೆನೀರ ಮೀವವರೆಲ್ಲರು
ಅಮಲನ ಗುಣ ನೇಮವ ಮಾತಾಡಲೇಕೆ ?
ಸುಮನೆಯ ಸುಖದೊಳಗೆ ಉಯವಹರೆಲ್ಲರು.
ಆ ಸುಮನನ ಬಾವವ ಮಿಘುಟಿಸುವ ಪರಿಯಿನ್ನಾವುದು ?
ಬಾಲೆ ಭವಕ್ಕೆ ಬೀಜ.
ನಿರ್ಗತಿ ನಾಮರೂಪಿಲ್ಲ.
ಇಂತೀ ಭೇದವ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೧೫||

ಮಲೆಯ ಮಂದಿರದ ಕಾಳವ್ವೆಯ ಉದರದಲ್ಲಿ
ಮೂವರು ಪುರೋಹಿತರು ಬಂದರು.
ಒಬ್ಬ ಇಹದಲ್ಲಿ ಗುಣವ ಬಲ್ಲವ;
ಒಬ್ಬ ಪರದಲ್ಲಿ ಗುಣವ ಬಲ್ಲವ;
ಮತ್ತೊಬ್ಬ ಇಹಪರ ಉಭಯ ತಾ ಸಹಿತಾಗಿ
ಮೂರ ನೆನೆದು ಅರಿಯ.
ಅರಿಯದವನ ತೋಳಿನ ಕೊಡಗೂಸು,
ಕಾಳವ್ವೆಯ ಕತ್ತಲೆಯಲ್ಲಿ ತಳ್ಳಿ, ಮಲೆಗೆ ಕಿಚ್ಚಹಚ್ಚಿ,
ಮಂದಿರವ ಹಿರಿದುಹಾಕಿ, ಪುರೋಹಿತರ ಕಣ್ಣ ಕಳೆದು
ಕೊಡಗೂಸು ಕೊಡನೊಳಗಾದಳು.

ಇಂತಿವರಡಿಯ ಭೇದವನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೧೬||

ಹಿತ್ತಿಲ ಬಾಗಿಲಲ್ಲಿ ಹೋಹ ಹೆತ್ತ ತಾಯ ಮಗ ಕೊಂದು
ಸತ್ತಳೆಂದು ಅಳುತ್ತಿದ್ದ.
ಸತ್ತವಳೆದ್ದು ಮಗನಕ್ಕೆಯ ಮಾಣಿಸಿ
ಮೊತ್ತದ ಬಂಧುಗಳೆಲ್ಲಾರು ಮತ್ತಿವರು ಬದುಕಿದರೆಂದು ಅಳುತ್ತಿದ್ದರು.
ಇಂತೀ ಚಿತ್ತದ ಭೇದವನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೧೭||

ಊರಬಾರುಕನ ಬಾಗಿಲಲ್ಲಿ ಮಹಾರಾಜ ಕಾಯಿದ್ದೈದಾನೆ.
ಅವನ ಓಲಗಕ್ಕೆ ಎಡೆತೆರಪಿಲ್ಲದೆ ಅವಸರವ ಕಾಯಿದ್ದೈದಾನೆ
ಅವ ಮನೆಮನೆಯ ಹೊಕ್ಕು ಬವಣೆಗೆ ಬಹ
ಬಾರುಕನ ಭವಕ್ಕೊಳಗಾದನರಸು.
ಒಡೆಯ ಬಂಟನಾದುದನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೧೮||

ಬೇವಿನ ಮರದಲ್ಲಿ ಕಾಗೆ ಮನೆಯ ಮಾಡಿತ್ತು.
ಕೋಗಿಲೆ ಮರಿಯ ಹಾಕಿತ್ತು.
ಗೂಗೆ ಆರೈಕೆಯ ಮಾಡಿ ಸಾಕಿತ್ತು
ಹಂಸೆ ತಂಬೆಲರ ಕುಟುಕ ಕೊಟ್ಟು ಸಂಭ್ರಮವ ಮಾಡಿತ್ತು.
ಅದು ಆರ ಹಂಗಿಲ್ಲದೆ ಹಾರಿ ಹೋಗುತ್ತ
ಎನಗೆ ಬೇವಿನ ಮರನೆ ತಾಯಿಯೆಂದಿತ್ತು.
ಹಾಗೆಂದುದ ನಿನ್ನ ನೀನರಿ,
ಪುಣ್ಣಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೧೯||

ದಿನಚರಿಯೆಂಬ ಪಟ್ಟಣದಲ್ಲಿ ಕನಕರತಿಯೆಂಬರಸು,
ಮನಸಿಜನೆಂಬ ಪ್ರಧಾನ,
ಕನಸಕಂಡಡೆ ಅರಿವ ತುಮಸೂನು ತಳವಾರ.
ಇವರೆಲ್ಲರ ವಂಚಿಸಿ ಅರಸಿನ ಹೆಂಡತಿ
ಹೆಂಡವ ಕುಡಿವವನ ಅಂಗದಲ್ಲಿ ಸಿಕ್ಕಿದಳು.
ಪ್ರಧಾನ ಕಂಡ; ಅರಸು ತಳವಾರ ಕಂಡುದಿಲ್ಲ.
ಮನಸಿಜ ಕಂಡು ಬದುಕಿದೆ ಹೋಗೆಂದ.
ಅರಸಿಗೆ ಕೂಪನಾದ; ಮಾನಹಾನಿಗೆ ಕೇಡಿಲ್ಲದಂತೆ
ಇಂತೀ ಭೇದವನರಿ, ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೨೦||

ಪಂಚಪೃಥ್ವಿಯ ಮಧ್ಯದಲ್ಲಿ ಒಂದು ಉಡುವರದ ಗಿಡು ಹುಟ್ಟಿತ್ತು.
ಆ ಗಿಡವನೊಡೆದು ಒಬ್ಬ ದುರುದುಂಡಿ ಹುಟ್ಟಿದಳು.
ಅವಳಂಡಕರಂಡದಲ್ಲಿ ಹುಟ್ಟಿದ ಬೆಳೆಯನುಂಬ ಮಕ್ಕಳಾರು ?
ನಿನ್ನ ನೀನರಿ, ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೨೧||

ಮದನದ ಗುಹ್ಯದಲ್ಲಿ ಒಂದು ರಸವಾದದ ಕೂಸು ಹುಟ್ಟಿತ್ತು.
ಅದು ಚಿನ್ನವ ಕೆಡಿಸಿ ಮಣ್ಣ ಮಾಡುವುದು.
ಮಣ್ಣ ಮಣ್ಣಿನಲ್ಲಿ ಬೆರಸಿ ಬೂದಿಯ ಕೂಡಿ ವಾದವ ಮಾಡಿತ್ತು.
ವಾದ ನೀರಿನಲ್ಲಿ ನೆರೆದು ಹೊಹಾಗ ಮಿರಿ ನಿಂದವರಾರು ?
ನಿನ್ನ ನೀನರಿ ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೨೨||

ಓಡ ಕುದುರೆಯ ಮೇಲೆ ಮಸಿಯ ಹಲ್ಲಣವ ಹಾಕಿ,
ಬಸಲೆಯ ಹಂಬ ಬಾಯಿಗೆ ಕಟ್ಟಿ, ದೆಸೆವರಿವ ಅಸುರಾವುತ
ಚೊಲ್ಲೆಹದ ಬಲ್ಲೆಹವ ಹಿಡಿದು,
ಮುಗುಳುನಗೆಯವಳಲ್ಲಿ ಏರಿ ತಿವಿದ.
ಚೊಲ್ಲೆಹದ ಬಲ್ಲೆಹ ಮುರಿದ್ರು, ಓಡಿನ ಕುದುರೆ ಒಡೆದು,
ಮಸಿಯ ಹಲ್ಲಣ ನುಗ್ಗುನುಸಿಯಾಗಿ,
ಬಸಲೆಯ ಬಾಯಕಟ್ಟು ಹರಿದು,
ಅಸುರಾವುತ ಅವಳ ಕಿಸಲೆಯ ರಸಕ್ಕೊಳಗಾದ.
ಅದೇತರಿಂದ ಹಾಗಾದನೆಂಬುದ ನೀನರಿ,
ಪುಮ್ಯರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೨೩||

ಸತ್ತ ಹಾವು ಹೆಣನ ಕಚ್ಚಿ ಮತ್ತೆ ಸಿತ್ತಿತ್ತು.
ಸತ್ತುದ ಕಂಡು ಹದ್ದು ಎತ್ತಲಾಗಿ,
ಎತ್ತಿದ ಬೆಂಬಳಿಯಲ್ಲಿ ಹಾವಿನ ಜೀವವೆದ್ದು
ಹೆಡೆಯನೆತ್ತಿ ಅಡಲಾಗಿ, ಹದ್ದು ಬಿಟ್ಟಿತ್ತು;
ಹಾವು ಹಾವಡಿಗಂಗೆ ಈಡಾಯಿತ್ತು
ಆ ಹದ್ದು ಹಿಡಿದು ಬಿಟ್ಟೆನಲ್ಲಾ ಎಂದು ಮರೆದೊರಗಿತ್ತು.
ಹಾವು ಹದ್ದು ಕೂಡಿ ಬದುಕಿದವು; ಅದೇನುಕಾರಣವೆಂಬುದನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೨೪||

ಮದ್ದಿಗೆ ರುಚೆಯಡಸಿ, ನೀರಿಗೆ ಬಾಯಾರಿ,
ಹಾವಿಗೆ ಹಲ್ಲಿಲ್ಲದೆ ವಿಷವುಂಟಾಯಿತ್ತು.
ಬೇವಿನ ಮರದಲ್ಲಿ ಮಾವಿನ ಹಣ್ಣಾಗಿ ಆ ಮರನ ಏರಿ ಮೆದ್ದವರನರಿ
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೨೫||

ಬಾಳೆ ಬಲಿದು ಈಳೆಯ ಮರನಾಯಿತ್ತು.
ಆ ಈಲೆಯ ಮರನ ಏರಿ ಈರೇಳು ಲೋಕವ ಕಂಡವನ
ಕಂಗಳ ಮಧ್ಯದಲ್ಲಿ ನಿಂದವನ ಆರೆಂದರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೨೬||

ತ್ರಿಸಂಧಿಯಲ್ಲಿ ನಿಂದು, ತ್ರಿಗುಣಾತ್ಮನ ಕೊಂದು,
ಕೆಲದಲ್ಲಿ ನಿಂದವನಾರೆಂಬುದ ತಿಳಿ.
ತಿಳಿದು ನೋಡೆ ಅಯಿಗಡಲನಂಗ ಮೂರು ಮುಡಿಯವನ ಸಂಗ
ಬೇರೊಂದ ಹಿಡಿದು ನೋಡುವವನ ನಿಸ್ಸಂಗ.
ತನ್ನ ತಾನರಿದಲ್ಲಿಯ ಕಾಣಬಂದಿತ್ತು.
ಅದ ನಿನ್ನ ನೀನರಿ, ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೨೭||

ತತ್ಕಾಲವನರಿವ ಕುಕ್ಕುಟನ ಬಾಯ
ತುತ್ತನಿಕ್ಕಿಸಿಕೊಂಡವನಾರಯ್ಯ ?
ಆ ತುತ್ತು ಮುತ್ತದವರ ಮುಕ್ತಿಯ ಬಲೆಗೀಡು ಮಾಡುವುದು
ತುತ್ತ ಮುಟ್ಟದೆ ಕುಕ್ಕುಟನ ಕುಲವ ಕರೆ.
ಕರೆದಲ್ಲಿ ಬಂದು ನಿಂದುಳುಮೆ, ಅದರಂಗವ ಆರೆಂದರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೨೮||

ಜಲದ ಮಧ್ಯದಲ್ಲಿ ಆಯಿಮೂಲೆಯ ಕೆಲದಲ್ಲಿ
ಒಂದು ಹೊಲ ಬೆಳೆಯಿತ್ತು.
ಬೆಳೆಯ ಮೇಯ ಬಂದ ಎರಳೆ ತೆನೆಯಿಲ್ಲದ ಮರಿಗಂಡಿತ್ತು.
ಆ ಮರಿ ಕಣ್ಣ ತೆಗೆದು ನೋಡಿ
ಎನ್ನ ಹೆತ್ತತಾಯಿಯಲ್ಲಾಯೆಂದು ಎರಳೆಯ ಮರಿ ನುಂಗಿತ್ತು.
ಹೊಲದೊಡೆಯ ಬಂದು ನಿಂದು ನೋಡಿ
ಮರಿಯ ಕಂಡು ಅಂಜಿ ಹೊಲಬುದಪ್ಪಿದ.
ಹುಲ್ಲೆ ತಪ್ಪಿ ಹೊಲದಣ್ಣ ಕಪ್ಪಿನಲ್ಲಿ ಬಿದ್ದ
ಆ ಹೊಲಬ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೨೯||

ಪಂಚವಳಯ ವಿಸ್ತೀರ್ಣದಲ್ಲಿ ಕಟ್ಟಿದವು ಮೂರು ಪಟ್ಟಣ.
ಕೆಲದಲ್ಲಿ ಹೊಲಗೇರಿ, ಬಲದಲ್ಲಿ ಮಾದಿಗರ ಮನೆ,
ನಡುವೆ ಹೆಬ್ಬಾರುವರ ಮಹಾಜನಂಗಳ ಗುಡಿವಾಡ.
ಹೊಲೆಯರ ಗೋವಧೆಯ ಮಾದಿಗರ ಮನೆಯ ನಾತ.
ಹಾರುವರೂಟದ ಸುಖ ಲೇಸಾಯಿತ್ತು.

ಜಗದ ಕೀಳು ಮೇಲಿನ ಕೂಟ
ಅದೇತರಿಂದಾಯಿತ್ತು ಎಂಬುದ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೩೦||

ಊರೆಲ್ಲರೂ ಕೂಡಿಕೊಂಡು ತಿಂದರು ದನವ.
ಆ ಖಂಡವನೊಲ್ಲದೆ ಕಾಲ ಕೊಳಗು
ತಲೆಯ ಕೊಂಬು ಬೇಯಿಸಿ ತಿಂಬ ಶರಣ
ತಿಂಬ ಕೊಂಬು ಕೊಳಗು ಅವನಂಗವ ನುಂಗಿತ್ತು.
ಅಂಗ ಸುಸಂಗ ಲೀಯವಾಯಿತ್ತು.
ಲೀಯ ನಿಜದಲ್ಲಿ ನಿಂದು ನಿರ್ಲೇಪವಾಯಿತ್ತು.
ಆ ಗುಣವೇತರಿಂದ ಆಯಿತ್ತು ಎಂಬುದನರಿ ನಿನ್ನ ನೀ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೩೧||

ಕಾಳಿಯ ಹೊಲದ ಓಣಿಯ ದಾರಿಯಲ್ಲಿ ಮೂವರು ಕಳ್ಳರು ಕಟ್ಟೆ
ಬೆಳ್ಳನೊಬ್ಬನ ಆ ಕಳ್ಳರು ಹಿಡಿಯಲಾಗಿ
ಬೆಳ್ಳನ ಬೆಳುವೆ ತಾಗಿ, ಕಳ್ಳರು ಮೈಮರೆದು,
ಮೂರು ಹಳ್ಳದಲ್ಲಿ ಬಿದ್ದರು.
ಬಿದ್ದು ಸಾವರ ಕೊಲ್ಲಲೊಲ್ಲದೆ ಬೆಳ್ಳನಲ್ಲಿಯೆ ಅಡಗಿದ.
ಅಡಗಿದವನಾರೆಂದರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೩೨||

ಅಲಗನೇರಿ ಹುವ್ವ ಕೊಯಿದು, ಬಾವಿಯ ನುಂಗಿ ನೀರ ಕುಡಿದು.
ಹೆಣ್ಣ ಹಾಕಿ ಮರನ ಮೆದ್ದವನಾರಯ್ಯ?
ಹೆತ್ತವನ ಕೊಂದು ಅರಿಗಳ ಕೆಳೆಗೊಂಡು
ಬದುಕಿದವನಾರೆಂಬುದ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ, ||೩೩||

ಕೋಣನ ಕಿವಿಯಲ್ಲಿ ಮೂರು ಹಸು ತೆನೆ ತುಂಬಿ
ಕರವೊಂದನೆ ಈಯಿತ್ತು.
ಕರು ತಾಯ ನೆರೆ ನೋಡಿ ಹಾಲಿಗೆ ಒಡೆಯರಿಲ್ಲಾ ಎಂದು
ಪ್ರಾಣವ ಬಿಟ್ಟಿತ್ತು.
ಕರುವಿನ ಹರಣವರಿ; ಅರಿತಡೆ ನಿನ್ನ ನೀನೆ ಭಿನ್ನಭಾವವಿಲ್ಲ.
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೩೪||

ಮರೆಯ ಮನೆಯ ಮಧ್ಯದಲ್ಲಿ
ಮನೋವಿಕಾರದ ಮಾನಿನಿ ಹುಟ್ಟಿದಳು.

ಹಗಲಿಗೆ ಹಾದರಗಿತ್ತಿ, ಇರುಳಿಗೆ ಸಜ್ಜನೆಯಾಗಿ
ಪುರುಷನ ಒಡಗೂಡಿಪ್ಪಳು.
ಅವಳಂಗದ ಬಸುರ ಯೋನಿಯ ಕಂಗಳು, ಮನದ ಮೊಲೆ,
ವಿಪರೀತದ ಮಂಡೆಯ ತುರುಬು ತುಡುಕಿತ್ತು ಮೂರಡಿಯಲ್ಲಿ
ಅವಳ ಒಡಗೂಡುವನಾರೆಂದಲ್ಲಿ ನಿನ್ನ ನೀ ತಿಳಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೩೪||

ಕಣ್ಣಿನೊಳಗಣ ಮತ್ಸ್ಯಕ್ಕೆ ಬಲೆಯ ಬೀಸಿ,
ಹದ್ದಿನ ಬಾಯ ಹಾವಿಂಗೆ ಹೇಳಿಗೆಯ ಮಾಡಿ,
ಕಾಣಬಾರದ ಬಯಲಿಂಗೆ ಮನೆಯ ಕಟ್ಟಿ
ಬಾಳುತ್ತಿದ್ದೆವನ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೩೬||

ಆರೂ ಇಲ್ಲದ ಠಾವಿನಲ್ಲಿ ಊರ ಕಟ್ಟಿ,
ಊರವರೆಲ್ಲರು ಒಳಗೆ ತಾ ಹೊರಗಾಗಿ,
ಕೆರೆಯ ಕಟ್ಟಿ, ಕೆರೆಯ ಬಾಗಿಲು ಊರೊಳಗೆ ಮನೆ ಹೊರಗಾಗಿ
ಎಡೆಯಾಡುತ್ತಿದ್ದಾತನ ನೀತಿಯನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೩೭||

ಕಣ್ಣಿಲ್ಲದ ಕುರುಡ ಕನ್ನಡಿಯ ನೋಡಿ ತನ್ನಯ ಕಣ್ಣ ಕಂಡ
ಕಾಲಿಲ್ಲದ ಅದವ ಕಠಾರವ ಹಿಡಿದು ಮೂಗಾವುದ ತಿರುಗಿ ಬಂದ
ನಪುಂಸಕ ಬೆಸನಾಗಿ ಬಂದು ಹುಸಿಯ ಕೂಸು ಹುಟ್ಟಿ ಮಸಕಿತು.
ಮೊಲೆ ಹೊಲೆಗೇರಿಯಲ್ಲಿ ಹೊಲೆ ಮೊಲೆಯನುಂಡು ಬೆಳೆದವರನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೩೮||

ಸತ್ವ ರಜ ತಮವೆಂಬ ಮೂರು ಭಿತ್ತಿ ಕೂಡಿ ಘಟ್ಟಿಯಾದಲ್ಲಿ
ಚಿತ್ತೆಂಬ ಪುತ್ಥಳಿ ಹುಟ್ಟಿತ್ತು.
ಪುತ್ಥಳಿಯ ಪುತ್ಥಳಿಯಲ್ಲಿ ಜಗಕರ್ತೃ ಹುಟ್ಟಿದ.
ಕರ್ತೃವಂ ಹೆತ್ತವನ ನಾಭಿಯ ಮಧ್ಯದ ಬಾಲಲೀಲೆಯ
ಸಾಲಿನೊಳಗಾದ ಸಂಪದವರಿವರಲ್ಲಾ
ಕಾಲಕ್ಷಯನ ಕರ್ಮನಾಸನ ಭಾಳಾಂಬಕನ
ಲೀಲೆಯಲ್ಲಿ ಆಡುತ್ತಿರೆಂದು ಸರ್ವಮಯಕ್ಕೆ ಹೊರಗಾದ
ಪುಮ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೩೯||

**ಸರ್ವೇಂದ್ರಿಯ ಸಂಗ ನಿರ್ಲೇಪಸ್ಥಲ:**

ಇದಿರಿಟ್ಟು ಪೂಜಿಸುವಲ್ಲಿ ಷೋಡಶ ಉಪಚರಿಯದಲ್ಲಿ

ಭರಿತನಾಗಿ ಇರಬೇಕು.
ಅದು ಆರೋಪಿಸಿದಲ್ಲಿ ಬಾವ ಇದಿರಿಡದಲ್ಲಿ
ಬೇರೊಂದು ಬಯಕೆಯ ಅರಿತಿರಬೇಕು.
ಅರಿವನರಿತೆನೆಂದು ಕುರುಹ ಮರೆದಡೆ
ಆ ಮರೆವುದೆ ತನ್ನ ತಿಂಬ ಮಾಯೆ ಎಂದರಿ
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೪೦||

ಹಲವ ತೊಳೆವ ಮಡಿವಾಳಂಗೆ
ತನ್ನಯ ಕುರುಹಿನ ಸೆರಗ ನೋಡಿಯಲ್ಲದೆ ಅರಿಯ.
ಅವ ಮರೆದು ಕೊಟ್ಟಡೆ,
ಸೀರೆಯೊಡೆಯರು ಬೇರೊಂದು, ಕುರುಹನಿಟ್ಟು ಕೊಂಡಿಹರು.
ಅದು ಒಡೆವೆಯರೊಡವೆಯಲ್ಲದೆ ಬರುಬರಿಗರಗದು.
ಆ ಕುರುಹ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೪೧||

ನಾಮ ಘುಟ್ಟಿಸಿಯಲ್ಲದೆ ಕರೆದಡೆ ನುಡಿಯಬಾರದು.
ಕ್ರೀ ಶುದ್ಧತೆಯಾಗಿ ನಿಂದಲ್ಲದೆ ಅರಿಯಬಾರದು.
ಅರಿವಿಂಗೆ ಆಶ್ರಯಿಸುವುದಕ್ಕೆ ಒಡಲಿಲ್ಲ.
ಅರಿವು ಕುರುಹಿನಲ್ಲಿ ವಿಸ್ರಮಿಸಿ
ಹೆಣ್ಣಿನ ಸಿಪ್ಪೆಯ ಮರೆಯಲ್ಲಿ ಭಿನ್ನರುಚಿ ನಿಂದು ಸವಿದಾಗ
ಸಿಪ್ಪೆ ನಿಂದು ರಸವೊಪ್ಪಿತ್ತು.
ಆ ಚಿತ್ತವ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೪೨||

ಸಂಜೀವನದ ತಂದೆನೆಂದಡೆ ಅದು ಬಂದ ಠಾವಿಲ್ಲವೆ?
ಕಾಮಧೇನುವ ಕಟ್ಟಿದೆನೆಂದದೆ ಅದು ಹುಟ್ಟಿದ ಠಾವಿಲ್ಲವೆ?
ಇಷ್ಟನರಿಯದೆ ವಿರಕ್ತನಾದೆನೆಂಬ
ವಿಧಾಂತರ ಕತ್ತೆಗಾಹಿಯ ಮಾತು ಬೇಡ.
ಕುರುಹಿನ ಮರೆಯ ನಿಜವ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೪೩||

ಮನೆಯ ಮಂದಿರದ ನಿಳಯವ ಮಾಡಿದಡೇನು
ಎಡೆಯಾಡುವದಕ್ಕೆ ಬಾಗಿಲು ಬೇಕು.
ನುಡಿಗಡಣವನಾಡಿದಡೇನು

ಮನ ಮಡಿವುದಕ್ಕೆ ಕುರುಹಿನ ಅಡಿ ಬೇಕು.
ಅದೆ ಅರುಹಿನ ತೆರ, ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೪೪||

ನಿರ್ಮಲ ಜಲ ಸ್ಥಾನದಲ್ಲಿ ಇದ್ದಡೇನು
ತಹುದಕ್ಕೆ ಘಟವಿಲ್ಲದ ಮತ್ತೆ?
ಅರಿವಿನ ಮಾತ ಬರಿಕಾಯರು ನುಡಿದದೇನು
ಕುರುಹಿಲ್ಲದ ಮತ್ತೆ?
ತನ್ನ ಸೀಮೆಯ ತಾನರಿದು ಅಲ್ಲಿಗೆ ದುವನಂತೆ ನಿನ್ನ ನೀಯಿನರಿ
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೪೫||

ಲಿಂಗಕ್ಕೆ ಮಜ್ಜನವ ಮಾಡಿದಲ್ಲಿ ತನುವಿನಾವಿಷ್ಕಾಂತದ ಕೇಡು
ಕುಸುಮವ ಧರಿಸುವಲ್ಲಿ ಮನದ ಪ್ರಕೃತಿಯ ಕೇಡು
ನೈವೇದ್ಯವ ಸಮರ್ಪಿಸುವಲ್ಲಿ ಸರ್ವ ಇಂದ್ರಿಯಂಗಳ ಕೇಡು.
ಕಾಯಕ್ಕೆ ಮಜ್ಜನ, ಚಿತ್ತದ ವಿಲಾಸಿತಕ್ಕೆ ಕುಸುಮ
ಮನ ಘನದಲ್ಲಿ ನಿಂದುದಕ್ಕೆ ಅರ್ಪಿತ
ಇಂತೀ ತ್ರಿವಿಧದ ಮರೆಯಲ್ಲಿ ಕುರುಹುದೋರಿದವನ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೪೬||

ಅಂಗ ಮಾಸಿದಲ್ಲಿ ಜಲದೊಲುಮೆ ;
ಮನ ಮರೆದಲ್ಲಿ ಅರಿವಿನೊಲುಮೆ ;
ಈ ಉಭಯವು ಮರೆದಲ್ಲಿ ಮಹಾಶರಣರ ಸಂಗದೊಲುಮೆ,
ಒಲುಮೆಯ ಒಲವರವ ನಿನ್ನಿ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೪೭||

ಆತ್ಮನಿದ್ದು ಶಯನಾಂತನಾಗಿ ಇದ್ದಲ್ಲಿ
ಸಕಲ ಭೋಗಂಗಳನರಿಯಬಲ್ಲುದೆ?
ರಾಜಸ ತಾಮಸದ ಮರೆಯಲ್ಲಿದ್ದು ಸಾತ್ವಿಕವನರಿಯಬಲ್ಲುದೆ?
ಏತರಲ್ಲಿದ್ದು ಚೇಟಿಯ ಕೊಡದಂತಿರಬೇಕು.
ಇಷ್ಟ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೪೮||

**ಕ್ರಿಯಾಭಾವಜ್ಞಾನ ಸಂಗ ಲೇಪಸ್ಥಲ**

ಕಳ್ಳ ಉಸುರಡಗಿ ಬೆಳ್ಳನ ಮಂದಿರದಲ್ಲಿ ಬಂದಡಗಿದಂತೆ
ದರ್ಶನವ ಹೊತ್ತು ಪಶುಪತಿಯ ಭಕ್ತರುಗಳ ಸರಸಂಪದವನರಿಯದೆ

ತಮ್ಮಯ ತುರೀಯ ಆಪ್ಯಾಯನಕ್ಕಾಗಿ ಆಗಡವ ನುಡಿವ
ದರುಶನ ಸಾಗರಗಳ್ಗರಿಗೇಕೆ ಮೂರಕ್ಷರದ ಭೇದ,
ಪುಣ್ಯಾರಮ್ಯದಹನ ಭೀಮೇಶ್ವರಲಿಂಗ ನಿರಂಗಸಂಗ, ||೪೯||

ಧಾತ ಮಾಡುವ ತೆರಪನರಿಯದೆ
ಕಾಡುವ ಕಮ್ಮಟದೇಹಿಗಳ ನೋಡಾ !
ಆತನ ಆಗುಚೇಗೆಯನರಿಯದೆ ಮರಿಪಕ್ಷಿ ಕುಟುಕಿಂಗೆ ಬಾಯ ಬಿಡುವಂತೆ
ಕೈಬಾಯಾನುವ ದರುಶನ ದಾರಿಗಳ್ಗರಿಗೇಕೆ ಮೂರಕ್ಷರ ?
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೫೦||

ಸಮಯ ಸಮೂಹ ದರುಶನ ಅಡಂಬರ ವಾಚಾರಸದಿಂದ
ನೀತಿಯ ತೋರಿ, ವಾಸವ ಹೊಕ್ಕು
ಧಾತುಗೆಡುವ ಘಾತಕರಿಗೇಕೆ ಮೂರಕ್ಷರ ?
ಪುಮ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ, ||೫೧||

ಕೊಲೆ ಹೊಲೆ ಪಾರದ್ವಾರವ ಪಾತಕ ಮಾಡುವರೊಳಗಿಟ್ಟು ಕೊಂಡು
ಘನಲಿಂಗದ ಮುದ್ರೆಯನಿಕ್ಕಿ ಹೊಲೆದೊಳೆದೆವೆಂದು
ಕಲಹಕ್ಕೆ ಇದಿರಹ ಕುಲುಮೆಗಾರರಿಗೇಕೆ ಮೂರಕ್ಷರದ ಒಲವರ ?
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೫೨||

ಪೂರ್ವವ ಕಳೆದು ಪುನರ್ಜಾತನಾದೆವೆಂಬಿರಿ.
ಪೂರ್ವ ಬಂದ ಬಟ್ಟೆಯ ಮರೆದು ಜಾತತ್ವಕ್ಕೆ ನಾನಾ ಭೌತಿಕವ ತೊಟ್ಟು
ಪಿಪ್ಪದವರ ಅಭೀಷ್ಟನಾಗಿ ಮತ್ತೆ ಪುನರ್ಜಾತನಾದ ಪರಿಯಿನ್ನೆಂತೊ ?
ಜಂಗಮವಾದಲ್ಲಿ ಜನನಿ ಜನಕ ಸಹೋದರ
ಮಿಕ್ಕಾದ ಭವಪಾಶಂಗಳ ಸ್ವಪ್ನದ ಸುಖದಂತೆ ಎಂದರಿದು,
ತನ್ನಿರವ ತಾನರಿತು, ಮುಟ್ಟಿದ ಭಕ್ತರ ಮುಕ್ತಿಯ ಮಾಡು ;
ತ್ರಿಯಕ್ಷರದ ಗೊತ್ತು ಮುಟ್ಟರು,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೫೩||

ಕೋಲು ಕಪ್ಪರವ ಹಿಡಿದು,
ಭಾಳಾಂಬಕನ ಲೀಲೆಯ ತೊಟ್ಟು,
ಅಶನದಾಪ್ಯಾಯನಕ್ಕೆ ತಿರುಗುವ ಬಾಲಲೀಲೆಯಲ್ಲದೆ
ಭಾಳಾಂಬಕನ ನೆಲೆಯಲ್ಲ.
ಜಾಳು ಮಾತ ಬಿಟ್ಟು, ಮೂರಕ್ಷರದ ನೆಲೆಯನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೫೪||

ಚರ ಸ್ಥಾವರವಾದುದುಂಟೆ ?
ಮಹಾಸಮುದ್ರಕ್ಕೆ ಕೆರೆಯೇರಿಯುಂಟೆ ?
ಸುಖವ ಮಚ್ಚಿ ಅಖಿಳರೊಳಗಿದ್ದು ಸಕಲ ವಿರಹಿತರಾದ ಪರಿಯಿನ್ನೆಂತೊ ?
ಅದು ವಿಕಳರ ಮಾತು, ಮೂರಕ್ಷರಕ್ಕೆ ದೂರ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ, ||೫೫||

ಜ ಎಂದಲ್ಲಿ ಜನನ ನಾಸ್ತಿಯಾಗಿ,
ಗ ಎಂದಲ್ಲಿ ಗಮನ ನಾಸ್ತಿಯಾಗಿ,
ಮ ಎಂದಲ್ಲಿ ಮರಣ ನಾಸ್ತಿಯಾಗಿ,
ಅರಿತು ತಿರುಗುವುದು ಸ್ವಯ ಚರ ಪರವಲ್ಲದೆ,
ಕೂಟಕ್ಕೆ ನೆರೆದ ಅಗುಳಾಸಯ ವಿಹಂಗನಂತಾಗಬೇಡ.
ತ್ರಿವಿಧಾಕ್ಷರವ ತ್ರಿಗುಣದಲ್ಲಿ ಇರಿಸಿ ತ್ರಿಗುಣಕ್ಕೆ ಹೊರಗಾಗು.
ತ್ರಿಗುಣರಹಿತ ಸಗುಣಭರಿತನಾಗ.
ಅದ ನಿನ್ನ ನೀನರಿ, ಲಿಂಗ ಜಂಗಮವೆ
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೫೬||

**ಸಮಯಜ್ಞಾನ ಸಂಪಾದನೆ ಲೇಪಸ್ಥಲ:**

ಸದ್ಗುರುಮೂರ್ತಿಯ ಇರವು ಕರ್ಪುರವ ತಾಳಿರ್ದ
ಕರಂಡದಂತಿರಬೇಕು.
ದರ್ಪಣದೊಳಗಣ ಪ್ರತಿಬಿಂಬದಂತಿರಬೇಕು.
ಕಮಲಪತ್ರದ ಬೆಂಬಳಿಯ ಅಂಬುವಿನಂತಿರಬೇಕು.
ಪುಡಿಸಂಗದ ಸಂಚಾರದ ಸಂಗದಂತಿರಬೇಕು.
ಕುಡಿವೆಳಗಿನ ಬುಡದ ಬೆಳಗಿನಂತಿರಬೇಕು.
ಸದ್ಗುರು ಸದಮಲಾನಂದಮೂರ್ತಿ ನೀ ಗುರುವಾದುದ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೫೭||

ತನಗೆ ಇದಿರಾದ ಗುರುವ ಕಳೆದು
ತಾನು ಗುರುವಾಗಿ ಗುರುವಾಗಬೇಕು.
ತಾ ಹರಕರಜಾತನಾಗಿ ನಿಂದು
ತನ್ನಯ ಭೃತ್ಯರ ಗುರುಕರಜಾತನ ಮಾಡಬೇಕು.
ತನ್ನಯ ಗುಣ ಜಡ,
ಇದಿರಿಗೆ ಅಜಡವ ಹೇಳುವ ನರಬಿನ್ನ ಕಾರುಕಂಗೆ ಸದ್ಗುರು ಸ್ಥಲವಿಲ್ಲ.
ಅದ ಅವನರಿಯ, ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೫೮||

ತಾ ಗುರುವಾಹಾಗ ತನ್ನ ಗುರುವ ತಾನರಿತು,
ತನಗೆ ಇಹದಲ್ಲಿ ಸುಖ, ತನ್ನ ಗುರುವಿಂಗೆ ಪರದಲ್ಲಿ ಪರಿಣಾಮವನ್ನೈದಿಸುವ
ಉಭಯ ಗುರು ತಾನಾಗಿ ಇದಿರಿಂಗೆ ಪ್ರತಿಸ್ವರೂಪವ ಕೊಡುವಲ್ಲಿ,
ತನ್ನಯ ನಿಜರೂಪ ಪ್ರಾಣಪ್ರತಿಷ್ಠೆಯ ಮಾಡಿ
ಮಾಂಸಪಿಂಡವ ಕಳೆದು ಮಂತ್ರಪಿಂಡವ ಮಾಡುವಲ್ಲಿ,
ತಾಯದ ಸೂತಕವ ಕಳೆದು, ಮನದ ವಿಕಾರವ ಹಿಂಗಿಸಿ,
ತನ್ನಿರವನರಿತು ಅರಿದರಿವ ಶಿಷ್ಯನ ಹೃತ್ಕಮಲ ಮಧ್ಯದಲ್ಲಿ ನೆಲೆಗೊಳಿಸಿ,
ಅರಿವಿನ ಭೇದದಿಂದ ಶಿಲೆಯ ಸೂತಕವ ಕಳೆದು
ಇಷ್ಟಪ್ರಾಣವ ಬೆಸುವ ಬೆಸುಗೆಯ ತೋರಿ,
ಉಡುವ ತೊಡುವ, ಕೊಡುವ ಕೊಂಬ,
ಮುಟ್ಟುವ ಅರ್ಪಿತಭೇದವ ದೃಷ್ಟದಿಂದ ತೋರಿ,
ಗುರುವೆಂಬ ಭಾವ ತನಗೆ ತಲೆದೋರದೆ ಹರಶರಣರ ಮುಂದಿಟ್ಟು,
ನಿನ್ನಯ ಪರಿದೋಷವ ಪರಿಹರಿಸಿಕೊ ಎಂದು ತ್ರಿವಿಧದ ಭೇದವ ತೋರಿ,
ಗುರುವೆಂಬ ಭಾವ ತನಗೆ ತಲೆದೋರದೆ ಹರಶರಣರ ಮುಂದಿಟ್ಟು,
ನಿನ್ನಯ ಪರಿದೋಷವ ಪರಿಹರಿಸಿಕೊ ಎಂದು ತ್ರಿವಿಧದ ಭೇದವ ತೋರಿ,
ತಾನು ಶುಕ್ತಿ ನುಂಗಿನ ಜಲದಂತೆ,
ಭ್ರಮರ ನುಂಗಿದ ಗಂಧದಂತೆ,
ಧ್ವಜನಕೊಂಡ ದ್ಯುಮಣಿಯಂತೆ,
ನಾಮ ರೂಪು ಭಾವವಳಿದು ತಾನು ತಾನಾದೆಡೆ ಗುರುಸ್ಥಲ.
ಆದ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೫೯||

ಅಂಗಲಿಂಗ ಸಂಬಂಧ ಶೈವಗುರು,
ಸ್ಥಾವರಲಿಂಗ ಸಂಬಂಧ ಶೈವಗುರು,
ಪಥಲಿಂಗ ಸಂಬಂಧ ಶೈವಗುರು,
ಸಂಕಲ್ಪಲಿಂಗ ಸಂಬಂಧ ಶೈವಗುರು,
ಪ್ರಾಣಲಿಂಗ ಸಂಬಂಧ ವೀರಶೈವ ಸಿದ್ಧಾಂತ ಗುರವಾಗಬೇಕು.
ಚತುರ್ವಿಧ ಶೈವನಾಸ್ತಿ; ಅವು ಸೂತಕಭಾವ ;
ಅವು ಜಗದ ವರ್ತಕದಲ್ಲಿ ಕಾಬ ನಿಲುವು; ಆಚಾರ್ಯರ ಭೇಧ,
ಪ್ರಾಣಕ್ಕೆ ಪಂಚಾಚಾರವ ಕೊಟ್ಟು,
ಕಾಯದ ಗುಣವ ತ್ರಿವಿಧದಿಂದ ಶುದ್ಧಮಾಡಿ,
ಕಾಯಕ್ಕೆ ಶ್ರೀಮ ಮನಕ್ಕೆ ಅರಿವು ಎಂದು ಭಾವಿಸಿ ಕೊಟ್ಟುದು ಪ್ರಾಣಲಿಂಗ.
ಆತನಿಹಪರದಲ್ಲಿ ಪರಿಣಾಮಿ, ಸದ್ಗುರು;

ಆ ಭೇದವ ನಿನ್ನ ನೀನರಿ.
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೬೦||

ಪಥವನರಿಯದೆ ಇಷ್ಟವ ಕಟ್ಟುವ ಗುರು
ಬೆಳಕಿಗೆ ಸಿಕ್ಕಿದ ಪತಂಗನಂತಾದ.
ಗುರುವಿನ ಕೈಯಲ್ಲಿ ಕಟ್ಟಿದ ಶಿಷ್ಯ
ಕೀಟಕನ ಕೈಯಲ್ಲಿ ಸಿಕ್ಕಿದ ಮಕ್ಷಿಕನಂತಾದ.
ಚೇಟಿದಾಸನ ಕೂಟದಂತಾಯಿತ್ತು ; ಅದೇತರ ಭೇದ, ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೬೧||

ಕಂಡವರಿಗೆ ದೇವರ ಕಟ್ಟುವ ಭಂಡ ಗುರುವಿನ ಇರವು
ಜಗಭಂಡೆ ಎದೆಯ ಕೊಟ್ಟು ಕಂಡವರ ಕೈಯಲ್ಲಿ ಎದೆಯ ಹೆಟ್ಟಿಸಿಕೊಂಬಂತೆ.
ಅಗಲಿ ಬೀಳುವ ಕಲ್ಲಿಗೆ ಹರಿದು ತಲೆಯನೊಡ್ಡಿಸುವನಂತೆ.
ಆ ಬರಿ ಕಾಯನಲ್ಲಿ ಕಟ್ಟಿದ ಇಷ್ಟ
ತೊಟ್ಟಿಯ ಹುದುರಿನಲ್ಲಿ ಕಲ್ಲು ಸಿಕ್ಕಿದಂತಾಯಿತ್ತು.
ಅದು ಭ್ರಷ್ಟನ ಕೈಯ ಕಟ್ಟುಗೂಳು, ಉತ್ತಮರೊಲ್ಲರು
ಆ ಚಿತ್ತವ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೬೨||

ಸೂತೆಯಲ್ಲಿ ಬೀಜ ಹುಟ್ಟಿದಡೆ ಅದೇತಕ್ಕೆ ಬಾತೆ ?
ಪಾಷಾಣದ ಕೈಯಲ್ಲಿ ಈಶ ರೂಪ ಧರಿಸಿದಡೆ
ಅದು ನೆಲೆಗಳೆದ ತಟಾಕದ ತೂಬು
ಆ ಪಥವ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೬೩||

ಸದ್ಗತಿಯ ತೋರುವ ಗುರುವಿಂಗೆ ರಾಜಸ ತಾಮಸವುಂಟೆ ?
ಕೆಡದೆ ಜ್ಯೋತಿಗೆ ಪಡಿಕುಡಿಕೆ ಎಣ್ಣೆ ಉಂಟೆ ?
ಆ ಬಿಡುಮುಡಿಯ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೬೪||

ಜಡೆಮುಡಿ ಬೋಳು ಹೇಗಾದಡಾಗಲಿ,
ನಡೆನುಡಿ, ಸಿದ್ಧಾಂತವಾದಡೆ ಸಾಕು,
ಆತ ಪರಂಜ್ಯೋತಿ ಗುರುವಹ.
ಆ ಇರವ ನಿನ್ನ ನೀನರಿ,
ಪುಮ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೬೫||

**ಗುರುಭಾವ ಭೇದಸ್ಥಲ ಸಂಬಂಧ :**

ಭಕ್ತನಾದಲ್ಲಿ ದ್ರವ್ಯವ ಸವೆಸಿ ವರ್ಮವನರಿಯದೆ ವ್ಯರ್ಥವಾಯಿತ್ತು.
ಖ್ಯಾತಿಗೆ ಇಕ್ಕಿ ಕೊಟ್ಟು ಮಾಡುವಾತನ ಭಕ್ತನೆಂದಡೆ
ವಾಸಿಯ ಮಾತಿಗೆ ಸತ್ತವನ ಪಾಶದಂತೆ ಆತನ ಮಾಟ.
ಮಾಟವನರಿಮಣ್ಣಬೇಕು,
ಸರ್ವವ ನೇತಿಗೆಳೆದ ನಿರ್ಮಲಗುರು.
ಆತನ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೬೬||

ಕ್ಷಮೆಯಿಲ್ಲದ ಭಕ್ತಿ, ನಯರತಿಯಿಲ್ಲದ ಮಾಟ,
ಶ್ರದ್ಧೆಯಿಲ್ಲದ ಕೂಟ, ಶಿವಲಿಂಗಾರ್ಚನೆಯಿಲ್ಲದವನ ಹೃದಯ
ನಂದಿಸಿದ ಕಜ್ಜಳದಂತೆ
ಆ ಸಂದೇಹವ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ ||೬೭||

ಮಾಡಿ ಆಡಲೇತಕ್ಕೆ? ಸಲಹಿ ಕೊಲಲೇತಕ್ಕೆ?
ಬಿತ್ತಿ ಕೀಳಲೆತಕ್ಕೆ? ಕಟ್ಟಿ ಒಡೆಯಲೇತಕ್ಕೆ?
ಮಾಡಿ ಮಾಡಿ ಮನಗುಂದುವ,
ನೀಡಿ ನೀಡಿ ನಿಜಗುಂದುವ ಬೇಡ,
ಆ ಮಾಟವ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ, ||೬೮||

ಬಿತ್ತಿದ ಬೆಳೆ, ಕಟ್ಟಿದ ಕೆರೆ, ಸಲಹಿದ ಶರೀರ, ನೆಟ್ಟ ವೃಕ್ಷ
ತನಗಲ್ಲದೆ ಅವಕ್ಕೊಡಲುಂಟೆ?
ತಾ ಮಾಡುವ ಭಕ್ತಿ ತನಗಲ್ಲದೆ ಬೇರೊಂದು ಗುಣವನರಸಲಿಲ್ಲ.
ಆ ಪರಿಯ ನಿನ್ನ ನೀ ತಿಳಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೬೯||

ಅರ್ತಿಗಾರಿಕೆಯಲ್ಲಿ ಕೆಲಬರು ಮೆಚ್ಚಬೇಕೆಂದು ಮಾಡುವನ ಭಕ್ತಿ
ಮಂಡೆಯ ಮೇಲೆಹೊತ್ತ ಸುರೆಯ ಲಚ್ಚಣೆಯಂತೆ;
ಅದು ನಿಶ್ಚಯವಲ್ಲ.

ಒಳಗಣ ಕಪಟ ಹೊರಗಣ ಬಣ್ಣ,
ಆ ತೊಡಿಗೆಯ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೭೦||

ಲಂದಣಗಿತ್ತಿಯ ಮಾತು ಬಂದಿಕಾರರ ಜಗಳದಂತೆ
ಕಂಡವರಲ್ಲಿ ತಂದು ಮಾಡುವನ ಮಾಟ
ಸಾಕಿಕೊಂಡಿಹನ ದಯದಂತೆ.
ಆ ಮಾಟದ ಅಂದವನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೭೧||

ವ್ರತ ನೇಮವ ತೋರಿ
ಗದಕದಲ್ಲಿ ಮಾಡುವ ಭಕ್ತಿ
ಪಶುವ ಕೊಂದು ಹಸಿಯ ಭಕ್ಷಿಸುವವನ ದೆಸೆ ಲೇಸು.
ಪಶುಪತಿಯ ಭಕ್ತನಾಗಿದ್ದು ಹುಸಿದು ಸರ್ವರ ವಂಚಿಸಿ
ಪಿಸುಣತನದಿಂದ ಕಾಡಿ ಬೇಡಿ ತಂದವನ ಮನೆಯನ್ನ ಕಿಸುಕುಳಕೆ ಸರಿ.
ಅದು ಹುಸಿಯಲ್ಲ, ನಿನ್ನ ನೀ ತಿಳಿದು ನೋಡು,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೭೨||

**ಭಕ್ತಿಸ್ಥಲದ ನಿರ್ದೇಶಭಾವ:**

ದಾಳಿಹೋದ ಆಳಿನ ಉಸುರಿನಲ್ಲಿ ಒಂದು ವೇಣು ಹುಟ್ಟಿತ್ತು.
ಮೂರು ಗೇಣ್ಣು, ಹದಿನಾರು ಹೋಟೆ,
ಹತ್ತ ಕಳೆದು ಆರರ ಮೇಲೆ ನಿಂದುದು ಅಯಿದರ ನೆಲೆ,
ಅಯಿದ ಕೂಡಿ ನಿಂದುದು ಇಪ್ಪತ್ತರ ಭಾವ.
ತತ್ವಶಕ್ತಿಯಲ್ಲಿ ಅಡಗಿ ಅಳುವೇಣು
ಹತ್ತು ಆರು ಇಪ್ಪತ್ತೈದು ಕೂಡಿ ನಿಶ್ಚಯವಾಯಿತ್ತು.
ಇದರಾಗ ಭೇದಿಸಿ ತತ್ವವನರಿ
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೭೩||

ಆರಿಗೂ ತೋರದ ಅಂಬರದಲ್ಲಿ
ಒಂದು ಎರಳೆ ಮರಿಯನಿಕ್ಕಿ ಸತ್ತಿತ್ತು.
ಮರಿಯ ಮಂಡೆಯ ದೆಸೆಯಲ್ಲಿ ಮರಿ ತಾಯ ನೆರೆನೋಡಿ,
ಸತ್ತುದನರಿಯದೆ ಗೊತ್ತ ಮೂಸುತ್ತಿದ್ದಿತ್ತು.
ಹೊಲಸಿನ ಗಲವಲು ನಾಸಿಕವ ತಾಗಿ ಸತ್ತುದು ಎಂಬುದನರಿದು
ಮರಿ ಬಚ್ಚಬಯಲಾಯಿತ್ತು.

ಬಯಲ ತಿಳಿದರಿ ನಿನ್ನ ನೀ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೨೪||

ಒಂದುರುಹಿನ ಗೂಡಿನಲ್ಲಿ ಅಯಿದಾನೆ
ಮರಿಯನಿಕ್ಕಿ ಹೋದವು ತಮ್ಮಕಾಡಿಗೆ.
ಇರುಹು ಮರಿಯ ಕಣ್ಣ ಕಟ್ಟಿ
ಮರಿಯ ತೆಗೆದು ಹಾಕಿದವು ತಮ್ಮ ಗೃಹದಿಂದ.
ಆನೆ ಬಂದು ನಿಂದು ನೋಡಿ ಇದೇನಾಯಿತ್ತು ಮರಣ
ಎಂಬುದಕ್ಕೆ ಮೊದಲೇ ಆನೆ ಸತ್ತು ಇರುಹಿನ ಹಗೆ ಬಿಟ್ಟಿತ್ತು.
ಆ ಅರಿವ ಅರಿದು ನೋಡು,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೨೫||

ಮಹಾಮನೆಯ ಮಂಟಪದಲ್ಲಿ
ನಾಲ್ಕು ನಡುವಳ ಕಂಬದ ನಡುವಳ ಕಂಬದಲ್ಲಿ
ಒಂದು ಒರಲೆ ಮನೆಯ ಮಾಡಿತ್ತು.
ಅದಕ್ಕೆ ಎಂಟು ಕಂಬ, ಒಂಬತ್ತು ಬಾಗಿಲು, ಹತ್ತು ಕದ;
ಮಿಗಿಲೊಂದು ಮುಚ್ಚುವುದಕ್ಕೆ ಬಾಗಿಲಲ್ಲ.
ತುಂಬಿ ಅಲ್ಲಿ ಹಾರಿತ್ತು.
ಆ ಆತ್ಮನ ನೆಲೆಯನರಿ.
ಪುಣ್ಯಾರಣ್ಯದರಹನ ಭೀಮೇಶ್ವರಲಿಂಗ ನಿರಂಗಸಂಗ. ||೨೬||

ಸಂಪಗೆಯ ತಂಬೆಲರಿನಲ್ಲಿ ಒಂದು ಭೃಂಗ ತತ್ತಿಯನಿಕ್ಕಿತ್ತು.
ತನ್ನ ಬಾಳು ಕುಸುಮದ ವಾಸನೆ ಬಲಿವನ್ನಕ್ಕ ತುಂಬಿಯಿದ್ದಿತ್ತು.
ವಾಸನೆ ತೋರಿ ತುಂಬಿ ಸತ್ತು ಮರಿ ಹಾರಿ ಹೋಯಿತ್ತು.
ಆ ಮರಿಯ ಅರಿವ ನಿನ್ನ ನೀನರಿ.
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೨೭||

ಪುಟ್ಟಿದ ಮರದಲ್ಲಿ ಹಾರಿದ ಪಕ್ಷಿ ತಲೆದೋರುತ್ತದೆ.
ಅಗದ ಹಣ್ಣ ಕುಟುಕಿ ರಸ ತಾಗದ ನುಂಗುತ್ತದೆ.
ಅದು ನಾಗರಿಕ ಪಕ್ಷಿ, ಹಾರಿಹೋಯಿತು.
ಅದರಾಗತವನರಿ, ಆತ್ಮನಿರವ ನಿನ್ನ ನೀನೆ ತಿಳಿ
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೨೮||

ಬ್ರಹ್ಮನ ಬಾಯ ಓಗರವನುಂಡು,
ವಿಷ್ಣುವಿನ ಕೈಯ ಸೀರೆಯ ಹೊದ್ದು,
ರುದ್ರನ ಮನೆಯಲ್ಲಿ ತಿರುಗಾಡುತ್ತಿಪ್ಪ ಭದ್ರಾಂಗಿಗಳು ಕೇಳಿರೋ.

ಬ್ರಹ್ಮನ ಬಾಯ ಮುಚ್ಚಿ,
ವಿಷ್ಣುವಿನ ಕೈಯ ಮುರಿದು,
ರುದ್ರನ ಮನೆಯ ಸುಟ್ಟು ಬುದ್ಧಿವಂತರಾಗಿ.
ಬುದ್ಧಿವಂತರಾದವರ ಅರಿದವರನರಿ.
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೭೯||

ವಾರಿ ಸಲಿಲದಲ್ಲಿ ಒಂದು ಶರಧಿ ಹುಟ್ಟಿ ಊರೆಲ್ಲರ ಉರುಳುತ್ತದೆ.
ಆ ಉರುಳು ಕೊರಳ ಬೀರಿ ಬ್ರಹ್ಮನ ಉಸುರಡಗಿತ್ತು;
ವಿಷ್ಣುವಿನ ಎಡೆಯಾಟ ಬಿಟ್ಟಿತ್ತು,
ರುದ್ರನ ಹಣೆಗಿಚ್ಚು ದಳ್ಳುರಿ ಬೇವುತ್ತದೆ.
ಆದ ನಂದಿಸುವರಿಲ್ಲ, ಮೂರರ ಬಿಂದುವನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೮೦||

ಕಾಮದೇನುವಿನ ನಡುವೆ ಒಂದು ಕೋಣ ಕಟ್ಟಿ ಇದ್ದಿತ್ತು.
ಕೋಣನ ಗವಲು ತಾಗಿ ಕಾಮಧೇನು ಕೆಡುತ್ತದೆ.
ಕೋಣನ ಡೋಣಿಗೆ ತಳ್ಳಿಕಾಮಧೇನು ಕಾಣದಂತೆಮಾಡು.
ಅರಿವು ಅಜ್ಞಾನವ ನಿನ್ನ ನೀನರಿ,
ಪುಣ್ಯಾರಣ್ಯದೆಹನ ಭೀಮೇಶ್ವರಲಿಂಗ ನಿರಂಗಸಂಗ. ||೮೧||

ಅಣು ಇರುಹಿನ ಮರಿ ಬ್ರಹ್ಮನ ಅಂಡವನೂರಿ
ವಿಷ್ಣುವಿನ ಪಿಂಡವ ನುಂಗಿತ್ತು,
ಅದು ತನ್ನೊಡಲಿಗೆಯಿದದೆ ರುದ್ರನ ತೊಡೆಮುಡಿಯವಳ
ಅತ ಸಹಿತಾಗಿ ನುಂಗಿತ್ತು.
ಅದೇತರ ಸೂತ್ರವೆಂದು ಆತ್ಮನ ಭೇದವನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೮೨||

ಮೃತ ಬೊಂಬೆಯ ಗದಕದ ಪಾಶ ಮಸಕಲಿಕ್ಕೆ
ಸ್ಥಾಣು ಹಲಗೆ ಕಂಬದ ಮರೆಯಲ್ಲಿ ನೇಣಿನ ನೂಲು ಹರಿಯೆ
ಅವು ಜಾಣ ಜೀವನಾಗಿ ಆಡುತ್ತದೆ.
ಅದರ ಜೀವಾಳವನರಿ;
ಕಾಯ ಜೀವ ಕೂಡಿಹ ತತ್ವದ ಭೇದವ ತಿಳಿ ನಿನ್ನ ನೀನೆ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೮೩||

ತಡಿಮಡುವಾದೆಡೆ ಮೊಗೆವ ಠಾವೆಲ್ಲಿಯದು ?
ಜಗದೆಲ್ಲವನರಿದ ಮತ್ತೆ ಬಲ್ಲವನಿನ್ನಾರು ?
ಸ್ವಪ್ನದ ತೆರದಂತೆ ಎತ್ತಾನಕ್ಕೆ ಇಪ್ಪವನೊಬ್ಬ

ಆತನ ಚಿತ್ತವನರಿ ನಿನ್ನ ನೀನೆ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೮೪||

ಮಾತಬಲ್ಲವನಾದಡೆ ಸರ್ವ ಜೀವನೀತಿಯನರಿಯಬೇಕು.
ಜ್ಞಾತೃ ಜ್ಞಾನ ಜ್ಞೇಯ ಭಾವವ ಬಲ್ಲಡೆ
ಇದಿರ ಭೂತಹಿತವ ಬಲ್ಲವನಾಗಿ ಇರಬೇಕು.
ಸುಜ್ಞಾನವನರಿತಡೆ ಭವಪಾಶ ಪಾಕುಳರನರಿಯಬೇಕು.
ಇದೆಲ್ಲವನರಿತು ತನ್ನ ನರಿಯಬೇಕು.
ಈ ಅನ್ಯ ಭಿನ್ನವ ತಿಳಿ ನಿನ್ನ ನೀನೆ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೮೫||

ಬಾಹ್ಯದ ನೀತಿ ಅಂತರಂಗದ ಅರಿವು ಸರ್ವರಲ್ಲಿ ಕ್ಷಮೆ
ಒಳಹೊರಗಾಗುವ ವರ್ತಕ ತ್ರಿವಿಧ ಶುದ್ಧವಾಗಿಯಿಪ್ಪ
ಭಕ್ತನ ಜಂಗಮದ ಹೃತ್ಕಮಲವೆ ವಿರಕ್ತವಾಸ.
ಇಷ್ಟನರಿದು ಮರೆದವಂಗಲ್ಲದೆ ತೆರಪಿಲ್ಲ; ನಿನ್ನ ನೀನರಿ
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೮೬||

ವೇಸಿಯ ಸಂಗ ದ್ರವ್ಯದ ಕೇಡು,
ದಾಸಿಯ ಸಂಗ ಮಾನಹಾನಿಗೆ ಮೊದಲು;
ನಿಮ್ಮ ಶರಣರ ಸಂಗ ಕರಮಂಗಳ ಕೇಡು.
ಇಂತೀ ಆಗುಚೇಗೆಯನರಿ ನಿನ್ನ ನೀ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೮೭||

ಆಸೆಯಳಿದು ನಿರಾಸಕನಾದಲ್ಲಿ ಪಾಸಬದ್ಧರೊಳಗಣ
ಮಾತಿನ ಮಾಲೆಯೇಕೆ ?
ಸರ್ವವ ನೇತಿಗಳೆದು ನಿಂದಲ್ಲಿ ಸ್ತುತಿ ನಿಂದೆಯ ಮಾತಿನ
ಬಿರುಬು ಅದೇತಕ್ಕೆ ?
ಇಂತಿವನರಿದು ನುಡಿದು ನಡೆಯಲಿಲ್ಲದ ತ್ರಿವಿಧ
ಸುರೆಗುಡಿಹಿಗಳ ಮಾತು.
ಮಂಜಿನ ಹರಿಗೆಯ ಬಿಸಿಲಂಬು ತಾಗಿದಂತಾಯಿತ್ತು.
ಇಷ್ಟರ ಗುಣ ಏತರಿಂದಾಯಿತ್ತು. ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೮೮||

ಭಕ್ತನಾದಲ್ಲಿ ಆವ ಸೋಂಕು ಬಂದಡೂ ಭಾವಸುದ್ಧವಾಗಿರಬೇಕು.
ಭಕ್ತಂಗಲ್ಲದೆ ತಾಕು ಸೋಂಕು ಮತ್ತೊಬ್ಬರಿಗೆ ಬಾರವು.
ಬಿರಿದ ಕಟ್ಟಿದ ಬಂಟಂಗೆ ತಡಹಲ್ಲದೆ ಬರುಬರಿಗುಂಟೆ ಮನೆದಗಹು?

ನಿಮ್ಮನರಿವಂಗೆ ಮರವೇ ಬಂದಡೆ
ನಿಮ್ಮನರಿಯ ತನ್ನ ತಾನರಿಯಬೇಕೆಂಬುದ ನಿನ್ನ ನೀ ತಿಳಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೮೯||

ಸುಖದುಃಖ ಸತಿ ಪುರುಷಂಗೂ ಸರಿ.
ಗತಿ ಭೇದ ಕರ್ತೃ ಭೃತ್ಯಂಗೂ ಸರಿ.
ನೀರು ನೆಲದಂತೆ, ಸಾರ ಸುಧೆಯಂತೆ ಭಕ್ತ ಜಂಗಮದ ಇರವು.
ಕರ್ಪೂರ ಉರಿಯಂತೆ ಇದು ನಿಶ್ಚಯ
ನಿನನ ನೀನರಿ, ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೯೦||

**ವರ್ತಕ ಕ್ರೀ ಶುದ್ಧಸ್ಥಲ:**

ಸಕಲ ವ್ಯಾಪಾರದಲ್ಲಿ ವ್ಯವಹರಣೆಯ ಮಾಡಿ ಬಂದು
ನಿಂದ ಧರೆಯ ಮೇಲೆ ಅಯಿದು ರೂಪಾಗಿ
ರೂಪಂಗೈದು ಕುರುಹಿನ ಭೇದದಲ್ಲಿ ಆರೋಪಿಸಿ
ರೂಪು ರೂಪಿನಿಂದ ಅಳಿದು ದೃಷ್ಟವ ದೃಷ್ಟದಿಂದ ಕಾಬಂತೆ
ಅರಿವ ಅರಿವಿಂದ ಭಾವವ ಭಾವದಿಂದ
ತನ್ನ ತಾ ಕುರುಹಿಟ್ಟುಕೊಂಡು ತತ್ವ ನಿಶ್ಚಯವಾಗಿ
ನಿಜ ನಿನ್ನ ನೀನರಿ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೯೧||

ಉದಕ ನಾನಾ ವರ್ಣದ ರೂಪಿನಲ್ಲಿ ಬೆರಸಿ
ಅವರ ಛಾಯಕ್ಕೆ ಭಿನ್ನಬಾವವಿಲ್ಲದೆ,
ಆ ರೂಪಿಂಗೆ ತಾ ದ್ರವವೊಡಲಾಗಿ ತೋರುವಂತೆ
ಎನ್ನ ಸರ್ವಾಂಗದಲ್ಲಿ ತೋರುವ ಕೋರಿಕೆ ನೀನಾಗಿ,
ಮುಕುರವ ನೋಡುವ ನೋಟದಂತೆ ಒಳಗೆ ತೋರುವ ಇರವು,
ಹೊರಗಳವನ ಪ್ರತಿರೂಪಿನಂತೆ
ಎಲ್ಲಿಯೂ ನೀನಾಗಿ ನಾನರಿದು ಮರೆವುದಕ್ಕೆ ತೆರಪಿಲ್ಲ.
ಹಾಗೆಂದಲ್ಲಿಯೆ ನಿನ್ನ ಉಳುಮೆ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೯೨||

ಆಡಿನ ಕಾಲ ಮುರಿದು, ಕೋಡಗದ ಹಲ್ಲ ಕಿತ್ತು,
ಉಡುವಿನ ಕುಡಿನಾಲಗೆಯ ಕೊಯಿದು, ಬಳ್ಳುವಿನ ಸೊಲ್ಲನರಿದು

ಇವೆಲ್ಲವ ನಿನ್ನಲ್ಲಿಗೆ ತಂದೆ; ಇವ ಬಲ್ಲವ ನೀನಲ್ಲದಿಲ್ಲ.
ಎನಗೆ ಅಲ್ಲಿಯೊ ಇಲ್ಲಿಯೊ ಮತ್ತ ಅಂದು ನೀ ಹೇಳಿದಲ್ಲಿಯೊ
ಎಂಬುದ ನಾನರಿಯೆ, ನೀ ಹೇಳು,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೬೩||

ಗೋವು ಮೊದಲು ಚತುಃಪಾದಿ ಜೀವಂಗಳು
ತಾವು ಬಂದ ಹಾದಿಯ ಮೂಸಿ ನೋಡಿ ತಮ್ಮಯ ಬೀಡಿಂಗೆ ಹೋಹಂತೆ,
ಆ ಪರಿ ನಿನಗಿಲ್ಲ, ಪಶುವಿನ ಮತಿಯಷ್ಟು ಗತಿಯಿಲ್ಲ.
ಬಂದುದ ಮರೆದ ಬಂಧಜೀವಿಗ ನಾನಾಗಿ
ಜೀವಕಾಯದ ಸಂದ ಬಿಡಿಸು.
ಬಿಂದು ನಿಲುವ ಅಂದವ ಹೇಲು,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೬೪||

ಕೋಲ ಬಳಿಯ ಅಂಧಕನಂತೆ, ವಾಹನದ ಪಂಗುಳನಂತೆ,
ಗಹನದಲ್ಲಿ ಸಿಕ್ಕಿದ ಸಿಸುವಿನಂತೆ,
ಸ್ಥಾನದಪ್ಪಿ ಹೊಲಬುದಪ್ಪಿದ್ದೇನೆ,
ಹೊಲದ ಹೊಲಬ ಹೇಳು,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೬೫||

ಅಕಾಯದ ಕಣ್ಣಿನಲ್ಲಿ ನೋಡಿ ವಿಕಾರವಳಿದು ಸುಖಟ್ಟಣವ ಕಂಡೆ.
ಆ ಪಟ್ಟಣದರಸಿಂಗೆ ಭಾವ ಕಾಲಿಲ್ಲ.
ಪ್ರಧಾನಂಗೆ ಪಾರುಪತ್ಯಕ್ಕೆ ನುಡಿವಡೆ ಬಾಯಿಲ್ಲ.
ತಳವಾರ ತಿರುಗುವುದಕ್ಕೆ ಕಣ್ಣಿಲ್ಲ.
ಆ ಪಟ್ಟಣದಲ್ಲಿ ಮೂವರಿಗೆ ಕರ್ತನೊಬ್ಬ ಅರಸು.
ಆ ಅರಸ ಕಣ್ಣಿನಲ್ಲಿ ಕಾಣಲಿಲ್ಲ. ಎಲ್ಲಿದ್ದಹರೆಂದು ಕೇಳಲಿಲ್ಲ.
ಇದ್ದ ಠಾವಿಂಗೆ ಒಬ್ಬರೂ ಹೊದ್ದಲಿಲ್ಲ.
ಅರಸಿನ ಆಜ್ಞೆ ಬಲುಹು, ಒಲಗಕ್ಕ ತೆರಪಿಲ್ಲ.
ಜೀವಿತಕ್ಕೆ ಅಡಹಿಲ್ಲ, ಎನ್ನ ಬಡತನವ ಇನ್ನಾರಿಗೆ ಹೇಳುವೆ ?
ಬಂಟರು ಸತ್ತರು, ಅರಸು ನಷ್ಟವಾದ.
ಆ ಉಭಯದ ಭೇದದ ನಾನರಿಯೆ, ನೀ ಹೇಳು,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೬೬||

ಮನ ಮಂಗಳಾಂಗಿಯೆಂಬ ಹೆಂಗೂಸಿನ ಕೈಯಲ್ಲಿ
ತ್ರಿವಿಧ ಬಂಧವೆಂಬ ಗಡಿಗೆಯಿದ್ದಿತ್ತು.

ಆ ಗಡಿಗೆಯ ಕೊಂಡು ಹೋಗಿ
ಅವಿಗತನೆಂಬ ಬಾವಿಯಲ್ಲಿ ರವಿಶೇಖರನೆಂಬ ನೀರ ತುಂಬಿ
ಬ್ರಹ್ಮಂಗೆ ಎರೆಯಲಾಗಿ ಬಾಯ ಮುಚ್ಚಿತ್ತು;
ವಿಷ್ಣುವಿನ ಉಂಬ ಕೈಗೆ ಎರೆಯಲಾಗಿ ಕೈ ಖಂಡಿಸಿ ಬಿದ್ದಿತ್ತು.
ರುದ್ರನ ಮಂಡೆಗೆ ಮಜ್ಜನವ ಮಾಡಲಾಗಿ
ಅಂಗ ಕರಗಿ ಅವಳಂಗೈಯ ಗಡಿಗೆಯಲ್ಲಿ ಅಡಗಿದ.
ಎನಗಿನ್ನು ಅಂಗವಳಿದ ಠಾವ ಹೇಳಾ,
ನಿರಂಗಮಯ ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೯೭||

ಇಚ್ಛಾಶಕ್ತಿ ಹೋತಿಂಗೆ ಸತಿಯಾಹಲ್ಲಿ,
ಕ್ರಿಯಾಶಕ್ತಿ ಕೋಡಗಕ್ಕೆ ಸತಿಯಾಹಲ್ಲಿ,
ಜ್ಞಾನಶಕ್ತಿ ಬಳ್ಳುವಿನ ಬಾಗಿಲು ಕಾವಲ್ಲಿ
ಇವರೆಲ್ಲರ ನೀ ನೋಡುತ್ತಿದ್ದೆ.
ನೀ ನೋಡುವ ನೋಟ ತ್ರಿವಿಧ ನಾಶ.
ಕೋಲಿನ ಶಾಂತನ ವೇಷ, ನಿನ್ನ ಕಾರುಣ್ಯವಾಸ,
ಎನ್ನಯ ಭ್ರಾಂತಿನ ವೇಷ ನಾಶವಾಯಿತ್ತು.
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೯೮||

ಧರೆ ಸಿರಿ ಉರಿ ಮೂರು ಕೂಡಿ ಉರಿವುತ್ತದೆ.
ಆ ಉರಿಯ ನಡುವೆ ಮಲಯಜ ಹುಟ್ಟಿತ್ತು.
ಮಲಯಜದ ಗಂಧ ತಾಗಿ ಮೂವರ ಬಲೋತ್ರ ನಂದಿತ್ತು.
ಅವು ನಂದುವಾಗ ನಾ ನಿಂದಿರಲಾಗಿ
ಆ ರಾಹು ತಾಗಿ ಎನ್ನಯ ಕಾಯದ ರೂಪು ಬಯಲಾಗದಿದೆ
ಎಂದೆನುತ್ತ ಚಿಹ್ನದೋರುತತ್ತದೆ.
ತೋರಿ ಅಡಗಬೇಡ, ಅಡಗಿದಡೆ ನಾ ಬಿಡೆ,
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೯೯||

ರಾಜ್ಯ ಹೋದಲ್ಲಿ ರಾಯತನವುಂಟೆ ?
ಪೂಜೆ ಅಡಗಿದಲ್ಲಿ ಪುಣ್ಯದ ಹಂಗುಂಟೆ ?
ಮಾಟಕೂಟ ನಷ್ಟವಾದಲ್ಲಿ ಮಹಾಮನೆಯ ಎಡೆಯಾಟವುಂಟೆ ?
ಸಟ್ಟೆಯನೊಪ್ಪಿಸಿದವಂಗೆ ಮತ್ತೆ ಒಪ್ಪದ ಚೀಟುಂಟೆ ?
ಭಕ್ತನಾಗಿ ಮಾಡಿ ಕಂಡೆ, ಭೃತ್ಯನಾಗಿ ಕಾಯಿದು ಕಂಡೆ
ಮತ್ತೆ ನೀ ನೀವೊಪ್ಪಿ ಕೊಟ್ಟಿರಿ
ಎನ್ನಂಗದಲ್ಲಿ ಮರ್ತ್ಯರೂಪನ ರೂಪ

ನಿಮಗೆ ಒಪ್ಪಿಸಿದೆಯೆಂಬುದಕ್ಕೆ ಮೊದಲೆ ಬಚ್ಚಬಯಲಾಯಿತ್ತು.
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೧೦೦||

**ಪರಿಶಿಷ್ಟ**

ಎನಗುಣಲಿಕ್ಕಿದರಯ್ಯ ಸಿರಿಯಾಳ-ಚೆಂಗಲೆಯರು.
ಎನಗುಡ ಕೊಟ್ಟರಯ್ಯಾ ದಾಸ-ದುಗ್ಗಳೆಯವರು.
ಎನ್ನ ಮುದ್ದಾಡಿಸಿದರಯ್ಯಾ ಅಕ್ಕನಾಗಮ್ಮನವರು.
ಎನ್ನ ಸಲಹಿದರಯ್ಯಾ ಅಮ್ಮವ್ವೆ ಕೊಡಗೂಸು
ಚೋಳಿಯಕ್ಕ ನಿಂಬವ್ವೆ ನೀಲಮ್ಮ ಮಹಾದೇವಿ ಮುಕ್ತಾಯಕ್ಕಗಳು.
ಇಂತಿವರ ಒಕ್ಕುಮಿಕ್ಕ ತಾಂಬೂಲ ಪ್ರಸಾದವ ಕೊಂಡು ಬದುಕಿದೆನಯ್ಯಾ
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೧೦೧||

ಎನ್ನಾಕಾರವೆ ನೀನಯ್ಯ ಬಸವಣ್ಣ
ನಿ[ನ್ನಾಕಾರವೆ] ಕೋಲ ಶಾಂತ.
ಹಿಡಿದಿರ್ದ ಕರಸ್ಥಲ ಬಸವಣ್ಣನಿಂದ ಉದಯವಾದ ಕಾರಣ
ಆ ಬಸವಣ್ಣನ ಶ್ರೀಪಾದಕ್ಕೆ ಅಹೋರಾತ್ರಿಯಲ್ಲಿ
ನಮೋ ನಮೋಯೆಂಬೆ.
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ. ||೧೦೨||

ಬಿಸಿಲ ಮುಂದಣ ಮಂಜಿನಂತಾಯಿತ್ತು.
ದಿಟದ ಮುಂದಣ ಸಟೆಯಂತಾಯಿತ್ತು.
ಪುಣ್ಯದ ಮುಂದಣ ಪಾಪದಂತಾಯಿತ್ತು.
ಯೋಗಿಯ ಮುಂದಣ ಸಂಸಾರದಂತಾಯಿತ್ತು.
ಧೀರನ ಮುಂದಣ ಹೇಡಿಯಂತಾಯಿತ್ತು.
ಉರಗನ ಮುಂದಣ ಭೇಕನಂತಾಯಿತ್ತು.
ಹರಿಯ ಮುಂದಣ ಕರಿಯಂತಾಯಿತ್ತು.
ವಿವೇಕಿಯ ಮುಂದಣ ದುಃಖದಂತಾಯಿತ್ತು.
ಪುಣ್ಯಾರಣ್ಯದಹನ ಭೀಮೇಶ್ವರನೆಂಬ
ಸದ್ಗುರು ಕಾರುಣ್ಯವಾಗಲೊಡನೆ
ಎನ್ನ ಸುತ್ತಿಹ ಪ್ರಪಂಚು ಸರ್ವವೂ ಓಡಿದವಯ್ಯಾ! ||೧೦೩||

# ವಕ್ತೃ ವಿವರಗಳು

| ಕ್ರ.ಸಂ. | ಹೆಸರು. | ಊರು | ಜಾತಿ | ವೃತ್ತಿ | ವಯಸ್ಸು |
|---|---|---|---|---|---|
| ೦೧. | ಹೆಚ್.ಎಂ.ರುದ್ರಮುನಿಅಯ್ಯ | ಕೊಟ್ಟೂರು | ಲಿಂಗಾಯಿತ | ನಿವೃತ್ತ ಶಿಕ್ಷಕರು | ೭೦ |
| ೦೨. | ಸತೀಶ ಪಾಟೀಲ | ಕೊಟ್ಟೂರು | ಲಿಂಗಾಯತ | ಉಪನ್ಯಾಸಕರು | ೩೪ |
| ೦೩. | ಕುಂ.ವಿ. | ಕೊಟ್ಟೂರು | ಕುಂಬಾರ | ಲೇಖಕರು | ೬೧ |
| ೦೪. | ದುರುಗಮ್ಮ | ಕೊಟ್ಟೂರು | ಆದಿಕರ್ನಾಟಕ | ಕೂಲಿ | ೫೮ |
| ೦೫. | ರೇವಣ್ಣ ಕೆ.ಎಂ.ರುಮಾಲೆ | ನಾಯಕನಹಟ್ಟಿ | ಲಿಂಗಾಯತ | ದೇವಸ್ಥಾನದ ಪಾರುಪತ್ತೆದಾರರು | ೭೪ |
| ೦೬. | ರವಿ | ನಾಯಕನಹಟ್ಟಿ | ಲಿಂಗಾಯತ | ಅರ್ಚಕರು | ೩೨ |
| ೦೭. | ರುದ್ರಪ್ಪ | ನಾಯಕನಹಟ್ಟಿ | ನಾಯಕ | ಹೊರಮಠ ಅರ್ಚಕ | ೩೪ |
| ೦೮. | ಪಿತಾಂಬರ | ನಾಯಕನಹಟ್ಟಿ | ಲಿಂಗಾಯತ | ದೇವಸ್ಥಾನದ ಆಡಳಿತ ಮಂಡ | ೫೯ |
| ೦೯. | ಕೋಲಶಾಂತೇಶ್ವರಸ್ವಾಮಿ | ಅರಸೀಕರೆ | ಲಿಂಗಾಯತ | ಅರ್ಚಕರು | ೫೭ |
| ೧೦. | ದುರುಗೇಶ | ಅರಸೀಕೆರೆ | ಆದಿಕರ್ನಾಟಕ | ಉಪನ್ಯಾಸಕರು | ೩೫ |
| ೧೧. | ನಿಂಗಪ್ಪ | ಕಣವಿಹಳ್ಳಿ | ಆದಿಕರ್ನಾಟಕ | ಉಪನ್ಯಾಸಕರು | ೩೫ |
| ೧೨. | ಹನುಮಕ್ಕ | ಅರಸೀಕೆರೆ | ಆದಿಕರ್ನಾಟಕ | ಉಪನ್ಯಾಸಕರು | ೩೫ |
| ೧೩. | ಮಲ್ಲಿಕಾರ್ಜುನಸ್ವಾಮಿ | ಕೂಲಹಳ್ಳಿ | ಲಿಂಗಾಯತ | ಅರ್ಚಕರು | ೫೬ |
| ೧೪. | ಚಿನ್ಮಾಯನಂದ ಸ್ವಾಮಿ | ಕೂಲಹಳ್ಳಿ | ಲಿಂಗಾಯತ | ಅರ್ಚಕರು | ೩೫ |
| ೧೫. | ಈಡಿಗರ ಚಂದ್ರಪ್ಪ | ಕೂಲಹಳ್ಳಿ | ಲಿಂಗಾಯತ | ವ್ಯವಸಾಯ | ೫೬ |
| ೧೬. | ತುಮೆನಪ್ಪ | ಗೊಲ್ಲರಹಳ್ಳಿ | ಲಿಂಗಾಯಿತ | ಸಾರುವವರು | ೬೫ |
| ೧೭. | ಹನುಮಕ್ಕ | ಗೊಲ್ಲರಹಳ್ಳಿ | ಲಿಂಗಾಯತ | ಸಾರುವವರು | ೫೬ |

| | | | | | |
|---|---|---|---|---|---|
| ೧೮. | ಹನುಮಪ್ಪ | ಅಳವಂಡಿ | ಲಿಂಗಾಯತ | ಕಲಾವಿದ | ೫೫ |
| ೧೯. | ಬಸಪ್ಪ | ಅಳವಂಡಿ | ಲಿಂಗಾಯತ | ಕಲಾವಿದ | ೭೦ |
| ೨೦. | ಮಹದೇಶ್ವರಯ್ಯ | ಗುಮ್ಮಗೋಳ | ಲಿಂಗಾಯತ | ಅರ್ಚಕರು | ೬೨ |
| ೨೧. | ಪ್ರಭಾಕರ | ಗುಮ್ಮಗೋಳ | ಲಿಂಗಾಯತ | ಅರ್ಚಕರು | ೩೨ |
| ೨೨. | ಶಿವಯೋಗಯ್ಯ ಕಸ್ತೂರಿಮಠ | ಹರಪನಹಳ್ಳಿ | ಲಿಂಗಾಯತ | ಅರ್ಚಕರು | ೬೪ |
| ೨೩. | ಚಂದ್ರಯ್ಯಸ್ವಾಮಿ | ಗುಮ್ಮಗೋಳ | ಲಿಂಗಾಯತ | ಮಠಾಧೀಶ್ವರರು | ೫೩ |

## ಆಕರ ಗ್ರಂಥಗಳು

೧. ಅನುಭಾವಿಗಳ ಕ್ರಾಂತಿ, ಚಂದ್ರಶೇಖರ್ ಟಿ.ಆರ್. (ಅನು), ವೀರಶೈವ ಅಧ್ಯಯನ ಸಂಸ್ಥೆ, ಗದಗ, ೨೦೦೦.

೨. ಅದ್ಭುತಗಳು, ರಾಜಶೇಖರ ಭೂಸನೂರಮಠ, ಐಬಿಹೆಚ್ ಪ್ರಕಾಶನ, ಬೆಂಗಳೂರು, ೨೦೦೩.

೩. ಕನ್ನಡ ಸಂತರ ಪರಮಾರ್ಥಪಥ, ದೇಶಪಾಂಡೆ ಎಂ.ಎಸ್.(ಅನು), ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪. ಕರ್ನಾಟಕದ ನಾಥಪಂಥ, ರಹಮತ್ ತರೀಕೆರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೫. ಕರ್ನಾಟಕ ವೀರಶೈವ ಮಠಗಳು ಮತ್ತು ಕನ್ನಡ ಸಾಹಿತ್ಯ, ಡಾ.ರವೀಂದ್ರನಾಥ ಕೆ, ಪ್ರಭುದೇವರ ಜನಕಲ್ಯಾಣ ಸಂಸ್ಥೆ, ಸೊಂಡೂರು, ೨೦೦೭.

೬. ಕರ್ನಾಟಕ ದೇವಾಲಯ ಕೋಶ, ಡಾ.ಸುರೇಶ ಕೆ.ಎಂ (ಸಂ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೭. ಕರ್ನಾಟಕ ವೀರಶೈವ ಮಠಗಳು, ಚಂದ್ರಶೇಖರ ನಾರಣಪುರ, ಗೆಳೆಯ ಪ್ರಕಾಶನ, ಚಿಕ್ಕಮಗಳೂರು, ೨೦೦೨.

೮. ಕನ್ನಡ ಜನಪದ ನಂಬಿಕೆಗಳು, ಡಾ.ಮಂಜುನಾಥ ಬೇವಿನಕಟ್ಟಿ, ಜ್ಯೋತಿ ಪ್ರಕಾಶನ, ಮೈಸೂರು, ೨೦೦೭.

೯. ಕನ್ನಡ ವಿಷಯ ವಿಶ್ವಕೋಶ (ಸಂಪುಟ.೧), ಸಣ್ಣಯ್ಯ ಬಿ.ಎಸ್, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೨೦೦೫.

೧೦. ಕನ್ನಡ ಜನಪದ ಕಥಾವರ್ಗಗಳು, ಡಾ.ರಾಮಚಂದ್ರೇಗೌಡ ಹಿ.ಶಿ., ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೯೭.

೧೧. ಕಾಯಕಯೋಗಿ ಶ್ರೀಗುರು ತಿಪ್ಪೇರುದ್ರಸ್ವಾಮಿ, ತ್ಯಾಗರಾಜ್ ಎಸ್.ಡಿ., ಶ್ರೀಗುರು ತಿಪ್ಪೇರುದ್ರಸ್ವಾಮಿ ದೇವಸ್ಥಾನ, ನಾಯಕನಹಟ್ಟಿ, ೨೦೦೬.

೧೨. **ಕಾಯಕಯೋಗಿ ಶ್ರೀಗುರು ತಿಪ್ಪೇರುದ್ರಸ್ವಾಮಿ**, ಚಂದ್ರಶೇಖರ್ ವಿ.ಡಾವಣಗೇರಿ, ತಿಪ್ಪೇರುದ್ರಸ್ವಾಮಿ ದೇವಸ್ಥಾನ ಸಮಿತಿ, ನಾಯಕನಹಟ್ಟಿ, ೨೦೦೧.

೧೩. **ಕಾಯಕಯೋಗಿ ಸಂಸ್ಮರಣ ಗ್ರಂಥ**, ಡಾ.ನಿಂಗಣ್ಣ ಸಣ್ಣಕ್ಕಿ, ಪ್ರೊ.ಹಿರೇಮಠ ಎ.ಬಿ. (ಸಂ), ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೨.

೧೪. **ಕೂಲಹಳ್ಳಿ ಶ್ರೀಗೋಣಿಬಸವೇಶ್ವರ ಚರಿತ್ರೆ**, ಜ್ಯೋತಿ ಹಾಲಪ್ಪ, ಸಾವಳಗಿ ನಾಗಪ್ಪ ಅಂಡ್ ಸನ್, ಹರಪನಹಳ್ಳಿ, ೧೯೯೮.

೧೫. **ಕೊಡೇಕಲ್ ಬಸವಣ್ಣ ಒಂದು ಅಧ್ಯಯನ**, ಬಸವಲಿಂಗ ಸೊಪ್ಪಿನಮಠ, ಕೊಡೇಕಲ್ ಬಸವಣ್ಣನ ಅಧ್ಯಯನ ಸಂಸ್ಥೆ, ಕೊಡೇಕಲ್, ೧೯೯೫.

೧೬. **ಕೊಟ್ಟೂರೇಶ್ವರರ ಮುತ್ತಿಗೆ ಪದ್ಯಾವಳಿಗಳು**, ಮಂಜುನಾಥಶಾಸ್ತ್ರಿ ಎ.ಎಂ, ಕೊಟ್ಟೂರು, ೧೯೮೫.

೧೭. **ಕೊಟ್ಟೂರು ಗುರುಬಸವ ರಾಜೀವ**, ರುದ್ರಮುನಿಅಯ್ಯ, ಗದಗ, ೨೦೦೫

೧೮. **ಕೊಟ್ಟೂರು ಒಂದು ಸಾಂಸ್ಕೃತಿಕ ಅಧ್ಯಯನ**, ಶರಣಪ್ಪ ದಿ.ಎಂ. (ಎಂ.ಫಿಲ್ ನಿಬಂಧ), ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೬.

೧೯. **ಗುರುಬಸವರಾಜೇಂದ್ರಲೀಲೆ ಗದ್ಯ**, ಪಂಡಿತ ಶ್ರೀ ಷಡಕ್ಷರಾನಂದ ಶಿವಾಚಾರ್ಯ ಸ್ವಾಮಿಗಳು, ಪಟ್ಟದ ಸ್ವಾಮಿಮಠ, ಮಸಗಿ, ೧೯೭೭

೨೦. **ಗುರುಲಿಂಗ ಜಂಗಮ ಸಾಹಿತ್ಯ**, ಮಂಜುನಾಥ ಜೆ.ಟಿ.(ಸಂ), ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೫.

೨೧. **ಗುಬ್ಬಿಮಲ್ಲಣಾರ್ಯಕವಿಯ ವೀರಶೈವಾಮೃತ (ಪುರಾಣವಿವೇಚನೆ)**, ಗುರುಪಾದ ಮರಿಗುದ್ದಿ, ನಿಜಲಿಂಗೇಶ್ವರ ಗ್ರಂಥಮಾಲೆ, ನಿಡಸೋಸಿ, ೨೦೦೧.

೨೨. **ಚಿತ್ರದುರ್ಗ ಜಿಲ್ಲೆಯ ಬುಡಕಟ್ಟುವೀರರು**, ಡಾ.ವಿರೂಪಾಕ್ಷಿ ಪೂಜಾರಹಳ್ಳಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೨೩. **ಚಿತ್ರದುರ್ಗ ಕೋಟೆ ಪರಿಸರದ ದೇವಾಲಯಗಳು**, ಮಹಾಂತೇಶ ಎನ್.ಎಸ್., ವಿಶ್ವಾಸ್ ಪ್ರಿಂಟ್ಸ್, ಬೆಂಗಳೂರು, ೨೦೦೫.

೨೪. **ಚಿಂತನಾಂತರಂಗ**, ಗೌರಮ್ಮ ವೈ.ಎನ್, ತಳಗವಾದಿ ಪ್ರಕಾಶನ, ಮೈಸೂರು, ೨೦೦೫.

೨೫. **ಚಿತ್ರದುರ್ಗದ ಬಖೈರು**, ಹುಲ್ಲೂರು ಶ್ರೀನಿವಾಸ ಜೋಯಿಸರು, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೬೮

೨೬. ಚೆನ್ನಬಸವಣ್ಣನವರ ವಚನಗಳು, ಮಲಾಪೂರ ಬಿ.ವ್ಹಿ(ಸಂ), ಮೂರುಸಾವಿರಮಠ, ಹುಬ್ಬಳ್ಳಿ, ೧೯೮೬.

೨೭. ಜಾನಪದ ವಾಹಿನಿ, ದೇ.ಜವರೇಗೌಡ, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೧೯೮೬

೨೮. ದಾವಣಗೆರೆ: ಇದು ನಮ್ಮ ಜಿಲ್ಲೆ, ಗಿರಿಜಾ.ಟಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೮೮

೨೯. ದೇವರು ದೆವ್ವ ವಿಜ್ಞಾನ, ಪುರುಷೋತ್ತಮ ಬಿಳಿಮಲೆ, ನಿಹಾರಿಕಾ ಪ್ರಕಾಶನ, ದಾವಣಗೆರೆ, ೨೦೦೧

೩೦. ನಾಥಪಂಥ ಮಹಿಮೆ, ಪುರುಷೋತ್ತಮ ಬಿಳಿಮಲೆ ಅವರ ಜೋಗಿ ನಿಹಾರಿಕಾ ಪ್ರಕಾಶನ, ದಾವಣಗೆರೆ, ೨೦೦೧.

೩೧. ನಾಯಕನಹಟ್ಟಿ ತಿಪ್ಪೇಸ್ವಾಮಿ ಸಂಕಥನ, ರೇಖಾ.ಎಸ್.ಟಿ. (ಎಂ.ಫಿಲ್ ಅಪ್ರಕಟಿತ ನಿಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೩೨. ನಾಯಕನಹಟ್ಟಿ ಶ್ರೀಗುರು ತಿಪ್ಪೇರುದ್ರಸ್ವಾಮಿ ಚರಿತ್ರೆ (೧೦೮ ನಾಮಾವಳಿ), ಕೊಟ್ರಪ್ಪಯ್ಯ ಶಾಸ್ತ್ರಿಗಳು ಎಂ.ವಿ.ಎಸ್, ಕೊಟ್ಟೂರು ಪ್ರಕಾಶನ, ಕೊಟ್ಟೂರು, ೧೯೯೫.

೩೩. ನೀಲಗುಂದ ಪರಿಸರದ ಸಾಂಸ್ಕೃತಿಕ ಅಧ್ಯಯನ, ಚನ್ನಬಸಪ್ಪ ಎಸ್., ಎಂ.ಫಿಲ್ ಅಪ್ರಕಟಿತ ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೩೪. ನೂರೊಂದು ವಿರಕ್ತರು: ಒಂದು ಅಧ್ಯಯನ, ಡಾ.ಕುಮಾರ್.ಜೆ, ಪಿಎಚ್.ಡಿ. ಅಪ್ರಕಟಿತ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯

೩೫. ನೆಲದ ಮರೆಯ ನಿಧಾನ, ಡಾ.ವಿದ್ಯಾಶಂಕರ್.ಎಸ್., ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೦೪.

೩೬. ಪಂಚಗಣಾಧೀಶ್ವರರು, ಹಿರೇಮಠ ಎಸ್.ಎಸ್, ಚೇತನ ಮುದ್ರಣಾಲಯ, ಹೊನ್ನಾಳಿ, ೧೯೯೪.

೩೭. ಪಂಚಗಣಾಧೀಶ್ವರರು ಸಾಂಸ್ಕೃತಿಕ ಅಧ್ಯಯನ, ಡಾ.ಸತೀಶ ಪಾಟೀಲ್, ಪಿಎಚ್.ಡಿ. ಅಪ್ರಕಟಿತ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೩೮. ಪಂಚಗಣಾಧೀಶ್ವರರು: ಒಂದು ಅವಲೋಕನ, ಹಿರೇಮಠ ಎಸ್.ಎಸ್., ಸಿದ್ಧವೀರ ಶಿವಾಚಾರ್ಯ ಜ್ಞಾನ ಪ್ರಕಾಶನ, ೧೯೯೭

೩೯. ಪವಾಡಗಳ ಒಳಗುಟ್ಟುಗಳು ಸಿದ್ಧರಾಜು ಕೊತ್ತತ್ತಿ, ದಿಕ್ಸೂಚಿ ಪ್ರಕಾಶನ, ಬೆಂಗಳೂರು, ೨೦೦೪.

೪೦. ಬಸವಣ್ಣನವರ ವಚನಗಳು (ಸಂಪುಟ ೧), ಕಲಬುರ್ಗಿ ಎಂ.ಎಂ., ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೧.

೪೧. ಬಸವಲಿಂಗ ಕವಿಕೃತ ಕೊಟ್ಟೂರು ಬಸವೇಶ್ವರ ಚಾರಿತ್ರ್ಯ, ಡಾ.ಹಿರೇಮಠ ಆರ್.ಸಿ., ಕೊಟ್ಟೂರೇಶ್ವರ ಕಲ್ಯಾಣ ಮಂಟಪ ಸಮಿತಿ (ರಿ), ಕೊಟ್ಟೂರು, ೧೯೬೧.

೪೨. ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, ಕರಿಬಸಪ್ಪ ಪಿಎಚ್.ಡಿ. ಪ್ರಬಂಧ ಪ್ರಕಟಿತ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೪೩. ಬಳ್ಳಾರಿ ಜಿಲ್ಲೆಯ ಪಾಳೆಗಾರರು, ಡಾ.ವಿರೂಪಾಕ್ಷಿ ಪೂಜಾರಹಳ್ಳಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೪೪. ಬಳ್ಳಾರಿ ಜಿಲ್ಲಾ ದರ್ಶನ, ಡಾ.ರವೀಂದ್ರನಾಥ ಕೆ, ಇಳಾ ಪ್ರಕಾಶನ, ಬೆಂಗಳೂರು, ೨೦೦೫.

೪೫. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ನಾಗಯ್ಯ ಜಿ.ಎಂ, ಲೋಹಿಯ ಪ್ರಕಾಶನ, ಬಳ್ಳಾರಿ, ೨೦೦೨.

೪೬. ಬಾಲಬಸವರು ಸಾಹಿತ್ಯ ಹಾಗೂ ಸಂಸ್ಕೃತಿ, ಮಂಜುನಾಥ ಬಿ.ಆರ್., ಎಂ.ಫಿಲ್ ನಿಬಂಧ, ಗುಲ್ಬರ್ಗ ವಿಶ್ವವಿದ್ಯಾಲಯ, ೨೦೦೧.

೪೭. ಬಾಲಬಸವ ತುಮನೆಪ್ಪ ಹಾಡಿದ ಗೋಣಿ ಬಸಪ್ಪನ ಕಾವ್ಯ, ಡಾ.ವೆಂಕಟೇಶ ಇಂದ್ವಾಡಿ (ಸಂ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೪೮. ಬಾ ಗಿಳಿಯೆ ಬಾಗಳಿಗೆ, ಮಹಾಬಲೇಶ್ವರ ಕಾಟ್ರಹಳ್ಳಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩.

೪೯. ಬುಡಕಟ್ಟು ಬದುಕಿನ ಸ್ಥಿತ್ಯಾಂತರಗಳು, ಪ್ರಭಾಕರ್ ಎ.ಎಸ್., ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೫೦. ಭೈರವೇಶ್ವರ ಕಾವ್ಯ ಕಥಾವಾಣಿ (ಸೂತ್ರ ರತ್ನಾಕರ ಭಾಗ ೨), ಡಾ.ಹಿರೇಮಠ (ಸಂ), ಧಾರವಾಡ ವಿಶ್ವವಿದ್ಯಾಲಯ, ಧಾರವಾಡ, ೧೯೬೮.

೫೧. ಮಂಟೇಸ್ವಾಮಿ ಕಾವ್ಯ, ಡಾ.ವೆಂಕಟೇಶ ಇಂದ್ವಾಡಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೫೨. ಮಲೆಯ ಮಾದೇಶ್ವರ ಜಾನಪದ ಮಹಾಕಾವ್ಯ, ಡಾ.ಸ್ವಾಮಿ ಬಿ.ಎಸ್., ದಾಮಿನಿ ಸಾಹಿತ್ಯ ಪ್ರಕಾಶನ, ಬೆಂಗಳೂರು, ೨೦೦೧.

೫೩. ಮಾರ್ಗ, ಕಲಬುರ್ಗಿ ಎಂ.ಎಂ., ಪಸ್ನಬುಕ್‌ಹೌಸ್, ಬೆಂಗಳೂರು, ೨೦೦೪.

೫೪. ಮ್ಯಾಸನಾಯಕರ ಒಂದು ಅಧ್ಯಯನ, ಕರಿಶೆಟ್ಟಿ ರುದ್ರಪ್ಪ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೫.

೫೫. ಮಾನ್ಯ, ಡಾ.ರವೀಂದ್ರನಾಥ ಕೆ, ಮಂಗಳಾಪ್ರಕಾಶನ, ಹೊಸಪೇಟೆ, ೧೯೯೭.

೫೬. **ಮುನ್ನೆಡೆಯ ಕೂಡ್ಲಿಗಿ,** ರವಿಕುಮಾರ್ ಎನ್.ಎಂ., ಡಾ.ವೃಷಬೇಂದ್ರಚಾರ ಎ. ಹಿಮಂತ ಪ್ರಕಾಶನ, ಬೆಂಗಳೂರು, ೧೯೯೮.

೫೭. **ಲೌಕಿಕ ಅಲೌಕಿಕ,** ರಾಜಾರಾಮ ಹೆಗಡೆ, ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ, ೨೦೦೧

೫೮. **ವಚನಾನುಭವ,** ಪ್ರೊ.ರಾಜಪ್ಪ ಆರ್, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೫.

೫೯. **ವಚನಸಾಹಿತ್ಯ ಸಂಶೋಧನೆ,** ಡಾ.ವೀರಣ್ಣ ರಾಜೂರ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪.

೬೦. **ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ,** ಡಾ.ನಾರಾಯಣ ಪಿ.ವಿ., ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೮೩

೬೧. **ವಚನಸಾಹಿತ್ಯ ಪರಿಚಯ,** ಡಾ.ರತ್ನಮ್ಮ ಕೆ.ಎಸ್., ಕಾವ್ಯಶ್ರೀ ಪ್ರಕಾಶನ, ಮೈಸೂರು, ೨೦೦೧

೬೨. **ವಚನ ಸಾಹಿತ್ಯ ಸಂಗ್ರಹ,** ಭೂಸನೂರಮಠ (ಸಂ) ಸಂ.ಶಿ., ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬.

೬೩. **ವಚನಕಾರರ ಪ್ರಮುಖ ಪರಿಕಲ್ಪನೆಗಳು,** ಷಣ್ಮುಖಯ್ಯ ಅಕ್ಕೂರಮಠ, ಶ್ರೀಸರ್ವಭೂಷಣ ಶಿವಯೋಗೀಶ್ವರಮಠ, ಬೆಂಗಳೂರು, ೨೦೦೦

೬೪. **ವೀರಶೈವ ಧರ್ಮ, ಭಾರತೀಯ ಸಂಸ್ಕೃತಿ,** ಡಾ.ಚಿದಾನಂದಮೂರ್ತಿ, ಮಿಂಚು ಪ್ರಕಾಶನ, ಬೆಂಗಳೂರು, ೨೦೦೦.

೬೫. **ವೀರಶೈವ ಸಾಹಿತ್ಯದಲ್ಲಿ ಪವಾಡ ಕಥೆಗಳು,** ಡಾ.ಪೂಜಾರ ವ್ಹಿ.ಜಿ., ಪುಸ್ತಕ ಅಕಾಡೆಮಿ, ಗುಲ್ಬರ್ಗಾ, ೧೯೯೧.

೬೬. **ವಿಜ್ಞಾನ ಮತ್ತು ಪವಾಡಗಳು,** ಪ್ರೇಮಾನಂದ್ ಬಿ., ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೧೯೯೭.

೬೭. **ಶರಣಬಸವರ ಪವಾಡಗಳು,** ಡಾ.ಹಿರೇಮಠ ಎಸ್.ಎಂ., ಜಗದ್ಗುರು ಅನ್ನದಾನೇಶ್ವರ ಸಂಸ್ಥಾನಮಠ, ಮುಂಡರಗಿ, ೧೯೯೪.

೬೮. **ಶಾಸನಗಳಲ್ಲಿ ಶಿವಶರಣರು,** ಕಲ್ಬುರ್ಗಿ ಎಂ.ಎಂ, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೭೮.

೬೯. **ಶಿವಶರಣ ಕಥಾರತ್ನಕೋಶ,** ಶಾಮರಾಯ ತ.ಸು., ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೯೭.

೭೦. **ಶ್ರೀ ಗೋಣಿ ಬಸವೇಶ್ವರ ಪುರಾಣ ಕಥಾ ಸಂಕಲನ,** ಕಾಶಪ್ಪ ಕೆ. (ಸಂ), ಬಾಂಡಗೆ ಪ್ರಕಾಶನ, ಗದಗ

೭೧. ಶ್ರೀ ಪಂಚಗಣಾಧೀಶ್ವರರು, ಸದ್ಯೋಜಾತಮೂರ್ತಿ ಸಿ., ವೇದಾವತಿ ಪ್ರಕಾಶನ, ಚಳ್ಳಕೆರೆ, ೧೯೮೪.

೭೨. ಸಂಶೋಧನ ಲೇಖನಗಳು, ಡಾ.ಪೂಜಾರ್ ವ್ಹಿ.ಜಿ., ಗುಲ್ಬರ್ಗಾ ವಿಶ್ವವಿದ್ಯಾಲಯ, ಪ್ರಸಾರಾಂಗ, ಗುಲ್ಬಗಾ, ೨೦೦೫.

೭೩. ಸಾಹಿತ್ಯಾನ್ವೇಷಣೆ, ಡಾ.ಪೂಜಾರ್ ವ್ಹಿ.ಜಿ., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨.

೭೪. ಸಾಹಿತ್ಯ ಸಮಾವೇಶ, ಡಾ.ಪೂಜಾರ ವ್ಹಿ.ಜಿ., ಪುಸ್ತಕ ಅಕಾಡೆಮಿ, ಗುಲ್ಬರ್ಗ, ೧೯೮೭.

೭೫. ಸ್ಥಳನಾಮಗಳ ಅಧ್ಯಯನ ಮತ್ತಿತರ ಪ್ರಬಂಧಗಳು, ಡಾ.ಗುರುಮೂರ್ತಿ ಕೆ.ಜಿ., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೭

೭೬. ಸಿದ್ಧ ಸಾಹಿತ್ಯ, ಡಾ.ಕೃಷ್ಣಮೂರ್ತಿ ಮ.ಸು., ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೭೭. ಸೂಫಿ ಮತ್ತು ಶರಣರ ಅನುಭಾವ ಪಥ, ಷಣ್ಮುಖಯ್ಯ ಅಕ್ಕೂರಮಠ, ಜೆ.ಜಿ.ಮಂಡಲ ಮೂರು ಸಾವಿರ ಮಠ, ಹುಬ್ಬಳ್ಳಿ, ೧೯೮೨

೭೮. ಹರಪನಹಳ್ಳಿ ಪಾಳೇಗಾರರ ಇತಿಹಾಸ ದರ್ಶನ, ಸದಾಶಿವಪ್ಪ ಕುಂ.ಬಾ., ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬.

೭೯. ಹಂಪಿ ಪರಿಸರದ ಐತಿಹ್ಯಗಳು: ಚಾರಿತ್ರಿಕ ವಿಶ್ಲೇಷಣೆ, ಅಯ್ಯಾಳಿ ಯರಿಸ್ವಾಮಿ, ಎಂ.ಫಿಲ್ ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೮೦. ಹಟ್ಟಿಸಿರಿ, ಪರಮೇಶ್ವರಪ್ಪ ಕುದುರಿ (ಸಂ), ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು, ಚಳ್ಳಕೆರೆ, ೨೦೦೩.

೮೧. ಹರಿಹರನ ಬಸವ ಪರಿಸರ, ಶಂಕರಯ್ಯಮಠದ, ಶಂಕರ ಪ್ರಕಾಶನ, ರಾಯಚೂರು, ೧೯೯೯.



ಕೊಟ್ಟೂರು ಶ್ರೀ ಗುರುಬಸವೇಶ್ವರ



ಕೊಟ್ಟೂರು ಬಸವೇಶ್ವರ ರಥೋತ್ಸವ



ನಾಯಕನಹಟ್ಟಿ ಶ್ರೀ ಗುರು ತಿಪ್ಪೇರುದ್ರಸ್ವಾಮಿ



ನಾಯಕನಹಟ್ಟಿ ಶ್ರೀ ಗುರು ತಿಪ್ಪೇರುದ್ರಸ್ವಾಮಿಯ ದೊಡ್ಡ ರಥೋತ್ಸವ ಮತ್ತು ಉಚ್ಛಾಯ



ಕೂಲಹಳ್ಳಿ ಶ್ರೀ ಗೋಣಿಬಸವೇಶ್ವರ



ಕೂಲಹಳ್ಳಿ ಶ್ರೀ ಗೋಣಿಬಸವೇಶ್ವರ ರಥೋತ್ಸವ



ಹರಪನಹಳ್ಳಿ ಶ್ರೀ ಕೆಂಪಯ್ಯ

ಗುಮ್ಮಗೋಳದ ಗೋಣಿಬಸವೇಶ್ವರನ ಮಠ

ನಾಯಕನಹಟ್ಟಿ ಜಾತ್ರೆಯಲ್ಲಿ ನವಿಲು ವಾಹನೋತ್ಸವ

ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿ ಕಾಯಕಯೋಗಿ ಕೇಲಸದಲ್ಲಿ ನಿರತವಾಗಿರುವುದು
ಮತ್ತು ಹಟ್ಟಿ ಮಲ್ಲಪ್ಪನಾಯಕ ಶ್ರೀಗಳಿಗೆ ಪಾದ ಪೂಜೆ ಮಾಡುತ್ತಿರುವುದು

ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿ ನಿಡಗಲ್ಲು ಮಹಾರಾಣಿಗೆ ಪುತ್ರ ಸಂತಾನ ನೀಡಿದ್ದು



ತಿಪ್ಪೇರುದ್ರಸ್ವಾಮಿಗಳು ಪವಾಡ ಮಾಡಿದಂತಹ ಅಕ್ಷಯ ವಾಡೇವು ಫಣಿಯಪ್ಪನ ಮನೆಯಲ್ಲಿದೆ